# ಸುಲಭ ಬೆಲೆಯ ಉತ್ತಮ ಪುಸ್ತಕಗಳು


ದೀಪೂ ಕತ್ತೆಯ ಸಾಹಸಗಳು ರೂ. 10


ಜವಹರಲಾಲ್ ನೆಹರೂ ರೂ. 84


ಕಡಲ ತೀರದ ಗ್ರಾಮ ರೂ. 30


ಕೆಲವು ಸಾಮಾನ್ಯ ಕಾಯಿಲೆಗಳು ರೂ. 38


ಆತ್ಮಪ್ರಕಾಶ ರೂ. 60


ನಾಳೆ ಸಂಭವಿಸಿದ್ದು ರೂ. 65


ಪ್ರಜಾಪ್ರಭುತ್ವ ರೂ. 30


ಭೂಕಂಪ ಮತ್ತು ಕಾಳ್ಗಿಚ್ಚು ರೂ. 7-50


ಬಸವಣ್ಣನವರು ರೂ. 20


ರಸ್ಟಿಯ ಸಾಹಸಗಳು ರೂ. 20


ಭಾರತರತ್ನ ವಿಶ್ವೇಶ್ವರಯ್ಯ ರೂ. 11


ನಮ್ಮ ಕರಕುಶಲ ವಸ್ತುಗಳು ರೂ. 10


ಬಿಡುಗಡೆಯ ಹಾಡುಗಳು ರೂ. 9


ಸಮೂಹ ಮಾಧ್ಯಮಗಳು ರೂ. 8


ಮಾಡಿ ಮಡಿದವರು ರೂ. 10


ಸಮಕಾಲೀನ ಕನ್ನಡ ಸಣ್ಣ ಕಥೆಗಳು ರೂ. 95

ಇನ್ನೂ ಅನೇಕ ಪುಸ್ತಕಗಳು. ಎಲ್ಲಾ ಪ್ರಮುಖ ಭಾರತೀಯ ಭಾಷೆಗಳಲ್ಲಿ ಪ್ರಕಟಿತ. ಪ್ರತಿಗಳಿಗೆ ನಿಮ್ಮ ಹತ್ತಿರದ ಪುಸ್ತಕ ವ್ಯಾಪಾರಿಗಳನ್ನು ಸಂಪರ್ಕಿಸಿ. ಅಥವಾ ಈ ಕೆಳಕಂಡ ವಿಳಾಸವನ್ನು ಸಂಪರ್ಕಿಸಿ.


ಶಂಕರಾಚಾರ್ಯರು ರೂ. 20


ಪ್ರಾದೇಶಿಕ ಪ್ರಬಂಧಕರು
ದಕ್ಷಿಣ ಪ್ರಾದೇಶಿಕ ಕಛೇರಿ
**ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ**
ಹಾಲ್ ನಂ. 1, ಬಿ.ಡಿ. ಎ. ವಾಣಿಜ್ಯ ಸಂಕೀರ್ಣ
ಬನಶಂಕರಿ ಎರಡನೇ ಹಂತ, ಬೆಂಗಳೂರು - 560 070
ದೂರವಾಣಿ / ಫ್ಯಾಕ್ಸ್ : 080 - 6711994



ಮರಗಳು ರೂ. 23.50


ನೀರ್ಗುದುರೆಗೆ ರೋಮವಿದ್ದಾಗ ರೂ. 90

# ಹೊಸತು

## ಒಳಗೇನಿದೆ.....


ಕರ್ನಾಟಕ

ಅಭಿವೃದ್ಧಿಯ ಸಾಮಾಜಿಕ ನೆಲೆಗಳು ... ೬
- ಡಾ|| ಟಿ. ಆರ್. ಚಂದ್ರಶೇಖರ್

ಕರ್ನಾಟಕವು ಬಿಹಾರದ ಹಾದಿ ಹಿಡಿಯುವುದೇ? - ಏಕಲವ್ಯ ... ೧೦

ನಾಳಿನ ಕನ್ನಡ ಚಳವಳಿಗಳು - ಪ್ರೊ|| ಬರಗೂರು ರಾಮಚಂದ್ರಪ್ಪ ... ೧೧

ಉಚ್ಚ ನ್ಯಾಯಾಲಯದ ದ್ವಿತೀಯ ಪೀಠ - ಕೋ. ಚೆನ್ನಬಸಪ್ಪ ... ೧೩

ಏಕೀಕರಣ, ಕನ್ನಡ ಸೃಷ್ಟಿಶೀಲತೆ ಮತ್ತು ಪ್ರಸ್ತುತ ಸಂದರ್ಭ ... ೨೨
- ಡಾ|| ಸಿ. ಆರ್. ಗೋವಿಂದರಾಜು

ಗಾಂಧಿ ಮತ್ತು ನಮ್ಮ ದೇಶ - ಡಾ|| ಜಿ. ಪ್ರಶಾಂತನಾಯಕ ... ೫

ಸಮಾಜವಾದ - ಸಾಪೇಕ್ಷವಾದ - ಸತ್ಯಾಗ್ರಹ ... ೫೭
- ಕೆ. ಎಸ್. ನಾರಾಯಣಸ್ವಾಮಿ

ಅನಾಥರ ಕಣ್ಣೀರು ಒರೆಸುವ ಕೈಗಳು - ಕೆ. ಪಿ. ಸ್ವಾಮಿ ... ೩೨

ಬದುಕಲು ದಾರಿ ನೂರಾರು - ಕೆ. ಪಿ. ಎಸ್. ... ೩೭

ಹುಲಿ ಮೀಸೆಯ ಪಾಷ (ತಿಂಗಳ ಕಥೆ) - ಸಾವರಿ ... ೧೫

ಕಾವ್ಯಧಾರೆ - ಚಂದ್ರಕಾಂತ ಪೋಕಳೆ, ಸಿ.ಪಿ.ಕೆ, ಬಿ. ರಾಜಣ್ಣ ... ೨೧

ನಾನು ಓದಿದ ಪುಸ್ತಕ - ಬಿ. ವಿ. ಕಕ್ಕಿಲ್ಲಾಯ ... ೩೧

ರಾಯರ 'ವಾಕ್' ವೈಖರಿ - ಡಾ|| ಜ್ಯೋತ್ಸ್ನಾ ಕಾಮತ್ ... ೩೫

ಬೋಗಾ ಮತ್ತು ಗುಲಾಮರು (ಜನಪದ ಕಥೆ) - ದು. ನಿಂ. ಬೆಳಗಲಿ ... ೪೩

ರಷ್ಯಾ - ನಿನ್ನೆ ಮತ್ತು ಇಂದು - ಸೀಯಾರ್ಕೆ ... ೧೯

ಸಿಯಾಟ್ಲ್‌ನಲ್ಲಿ ಭಾರತದ ಕಾರ್ಯಸೂಚಿ - ವೈ. ಜಿ. ಮುರಳೀಧರ ... ೫೫

ಹೆಣ್ಣು ಮತ್ತು ಜಾಗತೀಕರಣ ಪ್ರಕ್ರಿಯೆ - ಮಹೇಶನ್. ಎಮ್ ... ೨೦

ಬಾರ್ಬರಾ ಮ್ಯಾಕ್‌ಕ್ಲಿಂಟಾಕ್ - ನೇಮಿಚಂದ್ರ ... ೫೧

ಮಕ್ಕಳಿಗೆ ಕೊಡುತ್ತಿರುವ ಹಿಂಸೆ - ಡಾ|| ಸಿ. ಆರ್. ಚಂದ್ರಶೇಖರ್ ... ೪೭

ಬಾಲಕಾರ್ಮಿಕರ ಬವಣೆಗೆ ಕೊನೆ ಎಂದು? ಮುರಳೀಧರ್ ... ೪೯

ನಭಾವಲೋಕನ - ಡಾ|| ಬಿ. ಎಸ್. ಶೈಲಜಾ ... ೪೦

ಇತಿಹಾಸದಲ್ಲಿ ದಾಖಲಾದ ಖಗೋಳ ಕೌತುಕ ... ೪೧

ವಿನೋದ ಗಣಿತ ... ೪೫

ಸತ್ಯ ಶುದ್ಧ ಕೃಷಿ ಕಾಯಕವೇ ಕೈಲಾಸ - ಎಸ್. ಎಸ್. ಕಟಗಿಹಳ್ಳಿಮಠ ... ೫೩

ನೇಗಿಲಯೋಗಿ - ಕೈಲಾಸಮೂರ್ತಿ - ಎ. ಶ್ರೀನಿವಾಸ ಮೂರ್ತಿ ... ೫೪

ಅಂಡಮಾನಿನ ಹಡಗಿನಲ್ಲಿ ಬಂಕರ್ ಎಂಬ ನರಕಗಳು ... ೬೦
- ಡಾ|| ರಹಮತ್ ತರೀಕೆರೆ

ಪಥ್ಯದ ಮೂಲಕ ಸಾಂಸ್ಕೃತಿಕ ವಿಶ್ಲೇಷಣೆ - ಡಾ|| ಮಹಾಬಲೇಶ್ವರ ರಾವ್ ... ೨೭

ಯೋಗಪ್ರವೇಶ-೪ - ಜಿ. ರಾಮಕೃಷ್ಣ ... ೬೨

ತಿಳಿವು - ಜಿ. ರಾಜಶೇಖರ್, - ಎಂ. ಆರ್. ಎನ್. ಮೂರ್ತಿ ... ೬೪



ಚಿತ್ರಗಳು : ಗುಜ್ಜಾರ್, ಮೋಹನ, ಹಾದಿಮನಿ, ರವಿಕುಮಾರ್ ಅಜ್ಜೀಪುರ
ಛಾಯಾಚಿತ್ರಗಳು: ಕೆ. ಪಿ. ಸ್ವಾಮಿ, ಡಾ|| ಕೃಷ್ಣಾನಂದ ಕಾಮತ, ಅದಿಲ್ ಫೋಟೋಸ್, ಬಿಜಾಪುರ
ಮುಖಪುಟ ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


ಕೇಂದ್ರದಲ್ಲಿ ಹಾಗೂ ಕರ್ನಾಟಕದಲ್ಲಿ ಹೊಸ ಸರ್ಕಾರಗಳು ಅಸ್ತಿತ್ವಕ್ಕೆ ಬಂದುದು ಒಂದು ವಿಶೇಷವಾದರೆ ಭಾರತದ ಮತದಾರನ ಒಲವುಗಳು ಎಷ್ಟರಮಟ್ಟಿಗೆ ಪ್ರಬುದ್ಧವೆಂಬುದು ವಿಶ್ವಕ್ಕೆ ವೇದ್ಯವಾದದ್ದು ಇನ್ನೊಂದು ವಿಶೇಷ. ಯಾವುದೇ ತತ್ತ್ವ ಅಥವಾ ಸಿದ್ಧಾಂತದ ನಿರೂಪಣೆಯನ್ನು ದೊಡ್ಡ ರಾಜಕೀಯ ಪಕ್ಷಗಳು ಕೈಬಿಟ್ಟಿದ್ದು ಮತದಾರನಿಗೆ ಮುಜುಗರ ಉಂಟುಮಾಡಿರಬೇಕು. ನಮ್ಮ ಆರ್ಥಿಕ ನೀತಿಗಳು ಮತ್ತು ವಿದೇಶಾಂಗ ವ್ಯವಹಾರಗಳು ಅಪ್ರಸ್ತುತವೆಂಬ ರೀತಿಯಲ್ಲಿ ಕಾಂಗ್ರೆಸ್ ಹಾಗೂ ಭಾರತೀಯ ಜನತಾ ಪಕ್ಷ ನಡೆದುಕೊಂಡವು. ಅಂದರೆ ಆ ಎರಡು ಪಕ್ಷಗಳೂ ಈ ಬಗ್ಗೆ ಬಹುತೇಕ ಒಮ್ಮತವನ್ನಿರಿಸಿಕೊಂಡಿವೆ ಎಂದರ್ಥ. ಆದ್ದರಿಂದಲೇ ಅದರ ವೃಥಾ ಚರ್ಚೆ ಅಗತ್ಯವಿಲ್ಲವೆಂದು ವಾಜಪೈ ಮತ್ತು ಸೋನ್ಯಾ ತೀರ್ಮಾನಿಸಿದ್ದಂತೆ ತೋರುತ್ತದೆ. ಇಪ್ಪತ್ತನಾಲ್ಕು ಪಕ್ಷಗಳ ವಾಜಪೈ ಒಕ್ಕೂಟವಾದರೇನು ಎರಡೇ ಪಕ್ಷಗಳ ಸೋನ್ಯಾ ಸಮ್ಮಿಶ್ರ ಸರ್ಕಾರವಾದರೇನು ! ಸರ್ಕಾರವನ್ನು ರಚಿಸಿದ ನಂತರ ಕೇಂದ್ರವು ಆರ್ಥಿಕ ನೀತಿಯನ್ನು ಕುರಿತ ದಿಕ್ಸೂಚಿ ಅಂಶಗಳನ್ನು ಹೊರಗೆಡಹುತ್ತಿದೆ. ಜನಸಾಮಾನ್ಯರ ಜೀವನ ಇನ್ನೂ ದುರ್ಭರವಾಗುತ್ತದೆಂದು ಅದರಲ್ಲಿ ಒಂದು ಸೂಚನೆ ಇದೆಯಾದರೆ ವಿದೇಶಿ ಬಂಡವಾಳದ ಹಿಡಿತ ಹಲವು ಪಟ್ಟು ಹೆಚ್ಚುತ್ತದೆಯೆಂದು ಇನ್ನೊಂದು ಸೂಚನೆ ಇದೆ. ಆರು ತಿಂಗಳ ಕಾಲ ಸತತವಾಗಿ ಪರಸ್ಪರ ದೂಷಣೆಗಳನ್ನು ಮಾಡಿಕೊಳ್ಳುತ್ತಾ ಜನತೆಗೆ ನೀಡಿದ ಆಶ್ವಾಸನೆಗಳನ್ನು ಭಾಜಪ ಮತ್ತು ಕಾಂಗ್ರೆಸ್ ಕೂಟಗಳೆರಡೂ ಒಂದೇ ರೀತಿಯಲ್ಲಿ ಮರೆತುಬಿಡುತ್ತವೆಂಬುದಕ್ಕೆ ಇದಕ್ಕಿಂತಲೂ ಬೇರೆ ನಿದರ್ಶನ ಬೇಕಿಲ್ಲ. ಸಿದ್ಧಾಂತರಹಿತವಾದ ರಾಜಕೀಯವು ದೇಶವನ್ನು ಎಲ್ಲಿಗೆ ಕೊಂಡೊಯ್ಯುತ್ತದೆಂಬುದನ್ನು ನಾವು ತಿಳಿದುಕೊಳ್ಳಬೇಕಾದ ಕಾಲ ಈಗ ಸನ್ನಿಹಿತವಾಗಿದೆ.

ರಾಜ್ಯದಲ್ಲಿದ್ದ ಪಟೇಲ್ ಸರ್ಕಾರ ಕೊನೆಯುಸಿರು ಎಳೆಯುತ್ತಿದ್ದ ಸಂದರ್ಭದಲ್ಲಿ ಸೆಪ್ಟೆಂಬರ್ ೨೯ರಂದು ಎರಡು ಅತಿಮುಖ್ಯ ತೀರ್ಮಾನಗಳನ್ನು ಕೈಗೊಂಡಿತು. ಅದು ಬಹಳ ಹೀನಾಯವಾದ ಬೇಜವಾಬ್ದಾರಿ ಕ್ರಮವೆಂಬುದು ಎಲ್ಲರಿಗೂ ತಿಳಿದಿದೆ. ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಅಂಬೆಗಾಲಿಡುವ ಸ್ಥಿತಿಯಲ್ಲಿರುವ ರಾಷ್ಟ್ರಗಳಲ್ಲಿ ಸಹ ಇಂತಹ ಅಕ್ರಮ ಅನೂಹ್ಯ; ಆದರೆ ನಮ್ಮ ದುಷ್ಟ ಪಟೇಲ್ ಸರ್ಕಾರ ಅದನ್ನು ಮಾಡಿತು. ಈಗ ಕೃಷ್ಣ ಸರ್ಕಾರ ಆ ತೀರ್ಮಾನಗಳನ್ನು ಪುನರ್ವಿಮರ್ಶಿಸಿ ರಾಜ್ಯದ ಬೊಕ್ಕಸಕ್ಕೆ ಮತ್ತು ಜನತೆಗೆ ಆಗುವ ನಷ್ಟವನ್ನು ತಪ್ಪಿಸುವ ಹೊಣೆ ಹೊರಬೇಕಾಗಿದೆ. ಅದನ್ನು ಮಾಡದಿದ್ದರೆ ಕೃಷ್ಣ ಸರ್ಕಾರಕ್ಕೆ ಬುಡುಬುಡಿಕೆ ಸರ್ಕಾರವೆಂಬ ಹೆಸರು ಆರಂಭದಲ್ಲೇ ಸಲ್ಲಬೇಕಾಗುತ್ತದೆ.

ಪಟೇಲ್ ತೀರ್ಮಾನದ ಹಿಂದೆ ಆತನ ವಿಶ್ವಾಸಾರ್ಹತೆ ಅಡಗಿದೆ : ಯಾವ ಕಂಪೆನಿಗಳಿಂದ ದೊಡ್ಡ ಪ್ರಮಾಣದ ಮಾಮೂಲು ಪಡೆಯಲಾಗಿತ್ತೋ ಅವಕ್ಕೆ ವಂಚನೆಯಾಗದಂತೆ ಕಾಂಟ್ರಾಕ್ಟುಗಳನ್ನು ಕೊಡಿಸುವ ನಂಬಿಕಸ್ಥನ ಪ್ರಾಮಾಣಿಕ ಕ್ರಿಯಾಚರಣೆ ಆ ತೀರ್ಮಾನಗಳಲ್ಲಿದೆಯೆಂಬ ಊಹೆ ಅವಾಸ್ತವವಲ್ಲ. ಅಲ್ಲಿರುವುದು ಕೋಟಿಗಟ್ಟಲೆ ಅವ್ಯವಹಾರ. ಕಾವೇರಿ ನೀರನ್ನು ಬೆಂಗಳೂರಿಗೆ ತರುವುದರಲ್ಲಿ ಈವರೆಗೆ ನಮ್ಮ ಸರ್ಕಾರಿ ವಿಭಾಗಗಳು ಕೆಲಸ ಮಾಡಿವೆ; ಈಗ ಅದನ್ನು ವಿದೇಶಿ ಕಂಪನಿ ಮಾಡಬೇಕಂತೆ! ನಮ್ಮ ನೀರನ್ನು ನಮಗೆ ತಂದುಕೊಳ್ಳಲು ಒಂದಕ್ಕೆ ಐದರಷ್ಟು ಹಣ ವೆಚ್ಚ ಮಾಡುವುದು ಪಟೇಲ್ ನೀತಿಯಾಗಬೇಕಾದರೆ ಅದರ ಹಿಂದೆ ಯಾವ ಮರ್ಮವಿದೆಯೆಂದು ತಿಳಿಯಲಾಗದಷ್ಟು ಅವಿವೇಕ ನಮ್ಮ ನಾಗರಿಕರಲ್ಲಿಲ್ಲ. ಅದೇ ರೀತಿಯಲ್ಲಿ ಬೆಂಗಳೂರು-ಮೈಸೂರು ಹೆದ್ದಾರಿ ವಿಷಯ ಸಹ ಅತ್ಯಂತ ನಾಚಿಕೆಗೇಡಿನ ಪ್ರಸಂಗ. ಅದನ್ನು ಮಲಯೇಷ್ಯದ ಕಂಪನಿಗೆ ಒಪ್ಪಿಸಲಾಗಿದೆ. ಮೂಲತಃ ಆ ಇಡೀ ಯೋಜನೆಯು ನಮ್ಮ ರಾಜ್ಯಕ್ಕೆ ಮಾರಕ ಮತ್ತು ಅನವಶ್ಯಕ. ಯಾರದೋ ಜೇಬನ್ನು ತುಂಬಲು ನಮ್ಮ ಕಣಜ ತುಂಬುವ ಫಲವತ್ತಾದ ಭೂಮಿಯನ್ನು ಹಾಳುಗೆಡಹುವ ಯೋಜನೆ ಪ್ರಜಾವಿರೋಧಿಯಾದ್ದು. ''ಬಾಯ್ದೆಂಬುಲಕೆ ಕೈಯ್ಯಾನುವ'' ನಾಯಕರು ಕೈಗೊಳ್ಳುವ ಅಂತಹ ತೀರ್ಮಾನಗಳನ್ನು ಪ್ರಜೆಗಳು ಮಾನ್ಯ ಮಾಡಬೇಕಾಗಿಲ್ಲ.

ನಮ್ಮ ಅನೇಕ ನಾಯಕರ ವರ್ಚಸ್ಸು ಎಷ್ಟು ಕಳಪೆಯಾಗಿದೆ ಎಂಬುದಕ್ಕೆ ಪಟೇಲರ ಹಿತೈಷಿ ಮತ್ತು ರಾಜಕೀಯ ಬಂಧು ಇತ್ತೀಚೆಗೆ ಇನ್ನೊಂದು ಪುರಾವೆ ಒದಗಿಸಿದ್ದಾರೆ. ತಾವು ಯಾವಾಗಲೂ ಮೌಲ್ಯಗಳ ಆರಾಧಕರೆಂಬ ಪ್ರತೀತಿಯನ್ನು ಹಬ್ಬಿಸಿ ಈಗ ಕೇಂದ್ರದಲ್ಲಿ ಮಂತ್ರಿಯಾಗಿ ಆಯ್ಕೆಯಾಗದಿದ್ದಾಗ ತಮ್ಮ ಪರವಾಗಿ ಶಿಫಾರಸು ಸರಿಯಾಗಿ ಮಾಡಲಿಲ್ಲವೆಂದು ಇನ್ನೊಬ್ಬ ಮಹಾಶಯರನ್ನು ಅವರು ಟೀಕಿಸಿದ್ದಾರೆ. ಇಂತಹವರ ಆತ್ಮಾಭಿಮಾನ ಎಂದೋ ಸತ್ತುಹೋಗಿತ್ತು; ಜನಕ್ಕೆ ನೇರವಾಗಿ ಕಂಡುಬರುತ್ತಿರುವುದು ಈಗ. ಮತದಾರರ ಬಗ್ಗೆ, ರಾಷ್ಟ್ರದ ಪ್ರಜೆಗಳ ಬಗ್ಗೆ, ನಮ್ಮ ಸಂವಿಧಾನದ ಮೌಲ್ಯಗಳ ಬಗ್ಗೆ ಇಂಥವರಿಗೆ ಗೌರವ ಎಷ್ಟಿರಬಹುದೆಂಬುದನ್ನು ನಾವು ತೂಗಿನೋಡಬೇಕಾಗಿದೆ. ಆಗ ನಮ್ಮ ಮುಂದಿನ ದಾರಿ ಗೋಚರಿಸೀತು.



ತಿಂಗಳ ಪತ್ರಿಕೆ

ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ -೧ ಸಂಚಿಕೆ - ೪ ನವೆಂಬರ್ ೧೯೯೯

**ಪ್ರಧಾನ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ ಮಂಡಲಿ**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ರಹಮತ್ ತರೀಕೆರೆ
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

**ವ್ಯವಸ್ಥಾಪಕರು**

ಎಸ್. ಸುರೇಂದ್ರ
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

**ಹೊಸತು ಕಚೇರಿಯ ವಿಳಾಸ**



ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೪
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail:nkp@bgl.vsnl.net.in


## ಬರಲಿರುವ ದಿನಗಳಲಿ......

ವಾಜಪೇಯಿ ನೇತೃತ್ವದ ಸರ್ಕಾರಕ್ಕೆ ಭಾರತದ ಮತದಾರ ಸ್ಪಷ್ಟ ಬಹುಮತ ನೀಡಿ ಅಧಿಕಾರ ವಹಿಸಿಕೊಟ್ಟಿದ್ದಾನೆ. ಆ ಸರ್ಕಾರವು ಅವನ ನಿರೀಕ್ಷೆಗಳನ್ನು ಹೇಗೆ ಪೂರೈಸುತ್ತದೆ ಅಥವಾ ಎಷ್ಟು ಹುಸಿ ಮಾಡುತ್ತದೆ ಎಂಬುದನ್ನು ಕಾತುರದಿಂದ ಗಮನಿಸುವ ಮತದಾರ ಇನ್ನೈದು ವರ್ಷ ನಿಸೂರಾಗಿ ನಿದ್ದೆ ಹೋಗುವುದಿಲ್ಲ; ಬದಲಾಗಿ ಎಲ್ಲ ಬೆಳವಣಿಗೆಗಳನ್ನೂ ವೀಕ್ಷಿಸಿ ಸಕ್ರಿಯವಾಗಿ ಮಧ್ಯಪ್ರವೇಶ ಮಾಡಲು ಸಜ್ಜಾಗುತ್ತಾನೆ. ಅಥವಾ ಆಗಬೇಕು.

ಈಚಿನ ಎರಡು ಚುನಾವಣೆಗಳಲ್ಲಿ ಪ್ರಧಾನಿ ವಾಜಪೇಯಿಯವರ ಯೌವ್ವನದ ಒಂದು ಸಂಗತಿ ಪ್ರಸ್ತಾಪಕ್ಕೆ ಬಂದಿದೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಅವರು ಬ್ರಿಟಿಷರ ಪರವಾಗಿ ನಿಂತರೆಂಬ ಅರ್ಥ ಬರುವ ಒಂದು ಘಟನೆ ಪದೇ ಪದೇ ಆವರ್ತನಗೊಳ್ಳುವುದು ಆರೋಗ್ಯಕರವಲ್ಲ. ಇನ್ನೂ ಹುಡುಗನಿದ್ದಾಗ ಆವೇಶದಿಂದ ಮುಂದೆ ಬಂದು, ಆಮೇಲೆ ಸ್ವಲ್ಪ ಹಿಂದೇಟು ಹಾಕಿ ತನ್ನ ಸಹಚರರಿಗೆ ಕೇಡು ಬಗೆದಿದ್ದರೆ ಅದನ್ನು ಹುಡುಗತನದ ಸೂಚನೆಯೆಂದು ತೆಗೆದುಕೊಳ್ಳಬೇಕೇ ವಿನಾ ಅದು ಜೀವನಪರ್ಯಂತ ಅಂಟಿಕೊಳ್ಳುವ ಅವಲಕ್ಷಣವೆಂದು ಬಗೆಯಬಾರದು. ಲೀಲಾಧರ ವಾಜಪೇಯಿ ೧೯೪೨ರಲ್ಲಿ ಬ್ರಿಟಿಷರ ವಿರುದ್ಧ ಬಂಡೆದ್ದ ಯುವಕ; ಬೇರೆ ಇಬ್ಬರೊಡನೆ ಸೇರಿ ತ್ರಿವರ್ಣ ಧ್ವಜವನ್ನು ತನ್ನ ಬಟೇಶ್ವರದಲ್ಲಿ ಹಾರಿಸಿದ್ದ. ಈಗಿನ ಪ್ರಧಾನಿ ಆಗ ಹೇಳಿಕೆಯೊಂದನ್ನಿತ್ತು ಧ್ವಜವನ್ನು ಹಾರಿಸಿದ್ದ ಮೂವರೂ ಕಾರಾಗೃಹಕ್ಕೆ ಹೋಗಲು ಕಾರಣರಾಗಿದ್ದರೆಂಬ ಆಪಾದನೆಯನ್ನು ಲೀಲಾಧರ ವಾಜಪೇಯಿ ಮಾಡುತ್ತಲೇ ಬಂದಿದ್ದಾರೆ. ಈಗ ತಮ್ಮ ಆತ್ಮಚರಿತ್ರೆಯಲ್ಲಿ ಅದನ್ನೇ ದೀರ್ಘವಾಗಿ ವಿವರಿಸಿ ಹೇಳಿದ್ದಾರೆ. ಹೇಗೂ ಅವರೆಲ್ಲಾ ಬ್ರಿಟಿಷರನ್ನು ಹಿಮ್ಮೆಟ್ಟಿಸಲು ಹೊರಟಿದ್ದವರೇ ಅಲ್ಲವೆ ? ಅತಳ ಬಿಹಾರಿ ವಾಜಪೇಯಿ ಹೇಳಿಕೆ ನೀಡದಿದ್ದರೂ ಅವರು ಜೈಲಿಗೆ ಹೋಗುತ್ತಿದ್ದರೆಂದು ಊಹಿಸಲು ಸಾಧ್ಯವಿದೆ. ಒಬ್ಬ ಯುವಕ ಅಂದು ಏನೋ ಕಾರಣದಿಂದ ಹಿಂದೆಗೆದ ಎನ್ನಬಹುದೇ ವಿನಾ ತನ್ನ ಒಡನಾಡಿಗಳನ್ನು ಕಾರಾಗೃಹಕ್ಕೆ ಕಳಿಸಲು ಕುತಂತ್ರ ಹೂಡಿದನೆಂದು ಇಂದು ದೂಷಿಸುವುದು ಸರಿಯಲ್ಲ. ಅವರನ್ನು ಟೀಕಿಸಲು ಇಂದಿನ ಘಟನೆಗಳನ್ನು ಅಸ್ತ್ರವಾಗಿ ಪ್ರಯೋಗಿಸಲು ಸಾಧ್ಯವಿರುವಾಗ ಅವರ ಹದಿನೈದನೆಯ ವಯಸ್ಸಿನಲ್ಲಿ ಮಾಡಿದ್ದರೆನ್ನಲಾದ ಒಂದು ಕ್ರಿಯೆಯನ್ನು ಅವರ ಮುಖಕ್ಕೆ ಹಿಡಿಯಹೊರಡುವುದು ಅನೌಚಿತ್ಯವೆನಿಸುತ್ತದೆ.

ಹದಿಮೂರು ದಿನ, ಹದಿಮೂರು ತಿಂಗಳು, ಆಮೇಲೆ ಐದು ತಿಂಗಳು ಉಸ್ತುವಾರಿ, ಹೀಗೆ ವಾಜಪೇಯಿಯವರು ಪ್ರಧಾನಿಯಾಗಿ ಕೆಲಸ ಮಾಡಿರುವುದನ್ನು ವಿಮರ್ಶಿಸಿ ಮಾಪನ ಮಾಡುವ ಬದಲು ಸುಮ್ಮನೆ ಗೂಬೆ ಕೂರಿಸುವ ರೀತಿಯ ಟೀಕೆ ಸಾಧಾರವಾಗಿದ್ದರೂ ಅಪ್ರಸ್ತುತ. ಅಂತಹ ಒಂದೆರಡು ಘಟನೆಗಳನ್ನು ಹೆಸರಿಸುವುದಾದರೆ ಬ್ರಿಗೇಡಿಯರ್ ಸುರಿಂದರ್ ಸಿಂಗ್ ಮತ್ತು ಅಡ್ಮಿರಲ್ ಭಾಗವತ್ ನೆನಪಿಗೆ ಬರುತ್ತಾರೆ. ಅವರಿಬ್ಬರೂ ನಮ್ಮ ಸಮಕಾಲೀನರು. ಇಬ್ಬರೂ ವಾಜಪೇಯಿಯವರ ಹಾಗೂ ಅವರ ಸನ್ಮಿತ್ರ ಜಾರ್ಜ್ ಫರ್ನಾಂಡೀಸ್ ಅವರ ರೋಷಕ್ಕೆ, ಅಸಮಾಧಾನಕ್ಕೆ ಗುರಿಯಾಗಿರುವವರು. ಕಾರ್ಗಿಲ್ ಪ್ರದೇಶದಲ್ಲಿ ಪಾಕಿಸ್ತಾನಿ ಆಕ್ರಮಣಕ್ಕೆ ಸಿದ್ಧತೆ ನಡೆಯುತ್ತಿದ್ದು, ಅದನ್ನು ಸಕಾಲದಲ್ಲಿ ಹಿರಿಯ ಸೇನಾನಿಗಳಿಗೆ ತಿಳಿಸಿದ್ದುದಾಗಿ ಸುರೀಂದರ್ ಸಿಂಗ್ ಹೇಳಿದ್ದಾರೆ. ಅದಕ್ಕೆ ಅವರ ಮೇಲೆ ಹತ್ತಾರು ಬ್ರಹ್ಮಾಸ್ತ್ರಗಳ ಪ್ರಯೋಗ ನಡೆದಿದೆ. ಸಂಬಂಧಪಟ್ಟ ದಾಖಲೆಗಳನ್ನು ಪ್ರಕಟಿಸಿದ ಪತ್ರಿಕೆಗಳ ಹಾಗೂ ಪತ್ರಕರ್ತರ ಮೇಲೆ ಕ್ರಮ ಜರುಗಿಸುವುದಾಗಿ ಆರ್ಭಟ ಕೇಳಿಬಂದಿದೆ. ಅಂತೆಯೇ ವಾಜಪೇಯಿ ಸರ್ಕಾರವನ್ನು ರಾಜಕೀಯವಾಗಿ ಟೀಕಿಸಿ ಜಾಹಿರಾತು ನೀಡಿದ್ದ ಸಂಸ್ಥೆಗಳ ಮೇಲೆ ಕೆಂಡ ಕಾರಿದ್ದಾರೆ. ಅವು ವಿದೇಶಿ ಹಣದ ದುರುಪಯೋಗ ಮಾಡಿಕೊಂಡಿದ್ದರೆ ಪ್ರತ್ಯೇಕವಾಗಿ ಕಾನೂನು ಕ್ರಮ ಜರುಗಿಸಬಹುದಾಗಿತ್ತು. ಅದನ್ನು ಬಿಟ್ಟು ರಾಜಕೀಯದ ದ್ವೇಷ ಸಾಧಿಸುವ ಉಪಕ್ರಮ ಖಂಡಿತಕ್ಕೂ ಹೇಯವಾದುದು. ಆ ಸಂಸ್ಥೆಗಳ ಜೊತೆಯಲ್ಲೇ ವಿಶ್ವ ಹಿಂದೂ ಪರಿಷತ್ತು ಪಡೆದಿರುವ ವಿದೇಶಿ ಹಣದ ವಿನಿಯೋಗದ ಬಗೆಗೂ ತನಿಖೆ ನಡೆಸಬಹುದು.

ಹಿಂದಿನ ವಾಜಪೇಯಿ ಹೇಗೇ ಇರಲಿ, ಇಂದಿನ ವಾಜಪೇಯಿ ರಾಜಕೀಯ ಮತ್ಸರದ ಹಾದಿಯಲ್ಲಿ ಚತುರರು ಎಂಬುದು ಇದರಿಂದ ಹಾಗೂ ಭಾಗವತ್ ಪ್ರಕರಣದಿಂದ ತೋರಿಬಂದಿದೆ. ಆದ್ದರಿಂದ ಮುಂದಿನ ವಾಜಪೇಯಿ ಏನಾಗಬಲ್ಲರು ಎಂಬುದರ ಬಗ್ಗೆ ಎಚ್ಚರ ಅಗತ್ಯವಾಗಿದೆ. ಮತ್ಸರದ ವಿಧಾನವು ಪ್ರಜಾಪ್ರಭುತ್ವದ ಕಾರ್ಯಾಚರಣೆಯಲ್ಲಿ ಸ್ಥಾನ ಪಡೆಯಲಾರದು.

## ಮತ್ತೆ ಕಾವೇರಿಸಿದ ಕಾವೇರಿ

ಕಾವೇರಿ ನೀರಿನ ಸಮಸ್ಯೆಯನ್ನು ಸಮರ್ಪಕವಾಗಿ ಬಗೆಹರಿಸಲಾಯಿತೆಂದು ಒಂದು ವರ್ಷದ ಹಿಂದೆ ವಾಜಪೇಯಿ ಘೋಷಿಸಿದಾಗ ಕರ್ನಾಟಕ, ತಮಿಳುನಾಡು, ಕೇರಳ ಮತ್ತು ಪಾಂಡಿಚೆರಿ ಮುಖ್ಯಮಂತ್ರಿಗಳು ತಲೆದೂಗಿದ್ದರು. ಅದೇ ಪಟೇಲ-ಕರುಣಾನಿಧಿಗಳು ಮೊನ್ನೆ ಮೊನ್ನೆ ಬಿರುಸಿನ ವಾಗ್ಯುದ್ಧದಲ್ಲಿ ನಿರತರಾಗಿ ತಾಯಿ ಕಾವೇರಿಯನ್ನು ಖಿನ್ನಗೊಳಿಸಿದರು. ಕಾವೇರಿ ನೀರಿನ ಸಮಸ್ಯೆಯನ್ನು ವರುಣ ದೇವತೆಯು ಬಗೆಹರಿಸಿದನೇ ವಿನಾ ಯಃಕಶ್ಚಿತ್ ವಾಜಪೇಯಿಯಲ್ಲವೆಂಬುದನ್ನು ಕರ್ನಾಟಕ- ತಮಿಳುನಾಡು ಜನ ಅರಿತುಕೊಂಡರು. ಎಲ್ಲಿಯವರೆಗೆ ಮಳೆಯ ಅಭಾವದ ಸಂದರ್ಭದಲ್ಲಿ ನೀರಿನ ಹಂಚಿಕೆ ಹೇಗಿರಬೇಕೆಂಬುದನ್ನು ಪರಸ್ಪರ ಒಪ್ಪಂದಗಳಲ್ಲಿ ಅಳವಡಿಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಸಮಸ್ಯೆ ಉಗ್ರವಾಗಿಯೇ ಇರುತ್ತದೆ. ತಂಜಾವೂರು ಪ್ರದೇಶದಲ್ಲಿ ಭೂಮಿಯ ಅಂತರ್ಜಲವನ್ನು ಬಳಸಿಕೊಳ್ಳಲು ಯಾವ ಪ್ರಯತ್ನವನ್ನೂ ಈವರೆಗೆ ಮಾಡಿಲ್ಲದಿರುವುದು ಒಂದು ದೊಡ್ಡ ನ್ಯೂನತೆ. ಕಾವೇರಿಯಲ್ಲಿ ನೀರಿಲ್ಲದಾದಾಗ ಅಂತರ್ಜಲವನ್ನು ಎತ್ತಿಕೊಳ್ಳುವ ರೀತಿಯಲ್ಲಿ ಯೋಜನೆ ಸಿದ್ಧವಾಗಬೇಕು. ಆಗ ಪರಿಸ್ಥಿತಿ ಕಾವೇರುವ ಸಾಧ್ಯತೆಯನ್ನು ಸ್ವಲ್ಪಮಟ್ಟಿಗಾದರೂ ತಡೆಗಟ್ಟಬಹುದು.

ಕಾವೇರಿಯ ನೀರನ್ನು ಕುರಿತಂತೆ ಉದ್ವಿಗ್ನತೆ ಹೇಗೆ ಹೆಚ್ಚುತ್ತದೆಂದರೆ ವಿವಿಧ ರಾಜಕೀಯ ಪಕ್ಷಗಳ ನಾಯಕರು ಆಯಾ ರಾಜ್ಯಗಳಲ್ಲಿ ವಸ್ತುನಿಷ್ಠವಾದ ನಿಲುವನ್ನು ತೆಗೆದುಕೊಳ್ಳಲು ಅಂಜಿ ಭಾವೋದ್ರೇಕವನ್ನು ಪೋಷಿಸುತ್ತಾರೆ. ಅವೆಲ್ಲಾ ರಾಷ್ಟ್ರೀಯ ಪಕ್ಷಗಳು, ಕೇವಲ ಪ್ರಾದೇಶಿಕ ಪಕ್ಷಗಳಲ್ಲ. ಹಾಗಿದ್ದರೆ ರಾಷ್ಟ್ರೀಯ ಮಟ್ಟದಲ್ಲಿ ಈ ಪಕ್ಷಗಳು ಪರಸ್ಪರವಾಗಿ ಚರ್ಚೆ ನಡೆಸಿ ಏನಾದರೂ ಒಂದು ನಿಲುವನ್ನು ತಳೆಯಬಾರದೇಕೆ ? ತಾಯಿ ಕಾವೇರಿ ಸೊರಗಿದಾಗಲೂ ಮೆಟ್ಟೂರಿಗೆ ಇಂತಿಷ್ಟು ನೀರು ಬಿಡಲೇಬೇಕೆಂಬ ಆಗ್ರಹಕ್ಕೆ ಮನ್ನಣೆ ದೊರಕಲು ಸಾಧ್ಯವೇ ? ಇದನ್ನು ಚರ್ಚಿಸುವ ಬದಲು 'ರಾಷ್ಟ್ರೀಯ' ಪಕ್ಷಗಳು ಎರಡು

ವಿಭಿನ್ನ ಸ್ವರಗಳಲ್ಲಿ ಎರಡೂ ರಾಜ್ಯಗಳಲ್ಲಿ ಧ್ವನಿಯೆತ್ತುತ್ತವೆ. ಇದಕ್ಕೆ ಕಮ್ಯುನಿಸ್ಟ್ ಪಕ್ಷಗಳು ಹೊರತಲ್ಲ. ಇತ್ತೀಚೆಗೆ ತಮಿಳುನಾಡಿನ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ನಾಯಕರು ಹೇಳಿದರು: ಜುಲೈ ತಿಂಗಳಲ್ಲಿ ತುಂಬಿ ಹರಿದುಬರುವ ನೀರನ್ನು ೨೦೫ ಟಿ.ಎಂ.ಸಿ. ಲೆಕ್ಕದಲ್ಲಿ ಸೇರಿಸಿಕೊಳ್ಳುವಂತಿಲ್ಲ! ಅರ್ಥಾತ್, ತಂಜಾವೂರಿನ ರಾಜಕೀಯ ನಾಯಕರು ಮೆರವಣಿಗೆಗಳನ್ನು ತೆಗೆದರೆ ಮಂಡ್ಯದ ನಾಯಕರಿಗೆ ಅದು ಸಾಧ್ಯವಾಗುವುದಿಲ್ಲವೆ ?

ವರುಣನ ಅವಕೃಪೆಗೆ ಪಾತ್ರರಾದಾಗ ನಾವು ಏನು ಮಾಡಬೇಕೆಂಬುದನ್ನು ಗಣನೆಗೆ ತೆಗೆದುಕೊಂಡರೆ ವಾಜಪೇಯಿ ಮೇಲೆ ಕರುಣಾನಿಧಿಯ ಕರುಣಾಕಟಾಕ್ಷ ಇರುವುದಿಲ್ಲವೆಂದು ತಿಳಿದು ಕೃಷ್ಣ ಸರ್ಕಾರಕ್ಕೆ ಹುಕುಂ ನೀಡಲು ಮುಂದಾದರೆ ವಾಜಪೇಯಿ ಒಬ್ಬ ಕೆಳದರ್ಜೆಯ ಪಕ್ಷಪಾತೀ ನಾಯಕರಾಗುತ್ತಾರೆ. ರಾಷ್ಟ್ರವು ಅವರಿಂದ ಅಪೇಕ್ಷಿಸುವುದು ನೀತಿಬದ್ಧ ವಸ್ತುನಿಷ್ಠ ವಿಶ್ಲೇಷಣೆ ಮತ್ತು ಜನಪರವಾದ ತೀರ್ಮಾನ.

## ಕ್ಲಿಂಟನ್ ಮಹಾರಾಜರು ದಯಮಾಡಿಸುತ್ತಿದ್ದಾರೆ...

ಅಮೆರಿಕಾದ ಅಧ್ಯಕ್ಷ ಭಾರತಕ್ಕೆ ಭೇಟಿ ಕೊಡುವುದೆಂದರೆ ಪ್ರಹ್ಲಾದನಿಗೆ ನರಸಿಂಹ ಸ್ವಾಮಿಯ ಪ್ರತ್ಯಕ್ಷಕ್ಕೆ ಸಮಾನವೆಂಬ ಐತಿಹ್ಯವನ್ನು ನಮ್ಮ ದೇಶದಲ್ಲಿ ಸೃಷ್ಟಿಸಲಾಗುತ್ತಿದೆ. ಇದೊಂದು ಅಸಹ್ಯ ಹೊಲಸು ಪ್ರಕ್ರಿಯೆ. ಅದಕ್ಕೆ ಕೇಂದ್ರದ ಸರ್ಕಾರ ಸಂಪೂರ್ಣವಾಗಿ ಹೊಣೆ. ಪ್ರಧಾನಿಯವರ ರಕ್ಷಣಾ ಸಲಹೆಗಾರ ಬ್ರಜೇಶ್ ಮಿಶ್ರ ಬಾಯಿಬಿಟ್ಟರೆ ಕ್ಲಿಂಟನ್ ಬಗ್ಗೆ ಅಷ್ಟೋತ್ತರ ಶತನಾಮಾವಳಿಯೇ ಉದುರುತ್ತದೆಂದರೆ ನಮ್ಮ ದೇಶಕ್ಕೆ ಏನಾದರೂ ಘನತೆ ಉಳಿದಿದೆಯೇ ಎಂಬ ಅನುಮಾನ ಕಾಡುತ್ತದೆ. ಅದು ಸಾಲದೆಂಬಂತೆ ವಿದೇಶಾಂಗ ಸಚಿವ ಜಸ್ವಂತ್ ಸಿಂಗ್ ಸಹ ಅದೇ ರೀತಿ ಬಾಯಿಬಾಯಿ ಬಿಡುತ್ತಾರೆ. ಆ ಮಹಾದೇವತೆ ಕ್ಲಿಂಟನ್ನನ ಪಾದ ಧೂಲಿಯಿಂದ ನಮ್ಮ ದೇಶ ಪಾವನವಾಗದಿದ್ದರೆ ಆಕಾಶ ತಲೆಯ ಮೇಲೆ ಬೀಳುತ್ತದೆಂಬ ಆತಂಕ ಇವರಿಗೆ ! ಇದು ನಮ್ಮ ಸದ್ಯದ ''ಸ್ವದೇಶಿ'' ಗಮ್ಮತ್ತು.

ಆತನು ಬರಬೇಕಾದರೆ ನಾವು ಅದಕ್ಕೆ 'ಸೂಕ್ತ' ವಾತಾವರಣ ನಿರ್ಮಿಸಬೇಕಂತೆ. ಅದರ ಅಂಗವಾಗಿ ನಾವು ಅಣ್ವಸ್ತ್ರ ಪ್ರಯೋಗಕ್ಕೆ ಸಂಬಂಧಿಸಿದ ಷರತ್ತಿಗೆ ಅನುಮೋದನೆ ನೀಡಬೇಕು. ಆದರೆ ಸ್ವತಃ ತನ್ನ ದೇಶ ಈ ನಿಬಂಧನೆಗೆ ಒಪ್ಪಿಗೆ ನೀಡಿಲ್ಲವೆಂದು ತಿಳಿದಿರುವ ಕ್ಲಿಂಟನ್ ಭಾರತವನ್ನು ಬಲವಂತವಾಗಿ ಆ ಒಪ್ಪಂದಕ್ಕೆ ಸಹಿ ಹಾಕುವಂತೆ ಹೇಳಲು ಯಾವ ನೈತಿಕ ಹಕ್ಕನ್ನು ಹೊಂದಿದ್ದಾರೆ ? ನಮ್ಮ ಮತ್ತು ಅಮೆರಿಕಾದ ನಡುವೆ ಕೆಲವು ಭಿನ್ನಾಭಿಪ್ರಾಯಗಳಿದ್ದರೆ ಆ ದೇಶದ ಅಧ್ಯಕ್ಷ ನಮ್ಮ ದೇಶಕ್ಕೆ ಭೇಟಿ ಕೊಡಲು ಅಡ್ಡಿಯೆ ? ಭಿನ್ನಾಭಿಪ್ರಾಯಗಳೇ ಇಲ್ಲದಿದ್ದಾಗ ಭೇಟಿ ನೀಡಿ ಏನು ಮಾತನಾಡುವುದಿರುತ್ತದೆ ? ನಮ್ಮ ಸಾರ್ವಭೌಮತ್ವಕ್ಕೆ ಚ್ಯುತಿಯುಂಟಾಗುವ ರೀತಿಯ ವ್ಯವಹಾರಗಳಲ್ಲಿ ಇದೂ ಒಂದು. ಆತನ ಮನಸ್ಸಿಗೆ ಅಪ್ಯಾಯಮಾನ ವಾಗುವಂತೆ ನಡೆಯದಿದ್ದರೆ ಈ ದೇಶಕ್ಕೆ ಭೇಟಿ ನೀಡಲು ಸಾಧ್ಯವಿಲ್ಲವೆಂದು ಕ್ಲಿಂಟನ್ ಬಗೆದಿದ್ದರೆ ಆತ ಇಲ್ಲಿಗೆ ಬರುವುದು ಬೇಡ. ನಮ್ಮ ಜನರ ಸ್ವರ ಉಡುಗಿಹೋಗಿಲ್ಲ. ನಾವೆಲ್ಲಾ ಒಕ್ಕೊರಲಿನಲ್ಲಿ ಕೂಗೋಣ: ನಿಮ್ಮ ಸಂತೋಷಕ್ಕಾಗಿ ನಾವು ತತ್ವಗಳನ್ನು ರೂಪಿಸಲಾರೆವು; ನಮ್ಮ ದೇಶದ ಅಗತ್ಯಗಳಿಗೆ ತಕ್ಕಂತೆ ಮಾತ್ರವೇ ನಾವು ತತ್ತ್ವ ರೂಪಿಸುತ್ತೇವೆ. ಅದು ಕಹಿಯೆನಿಸಿದರೆ ನೀವು ಅಲ್ಲೇ ಇರಿ; ಇಲ್ಲಿಗೆ ಬಂದು ಕಸಿವಿಸಿಗೊಳ್ಳುವುದು ಬೇಡ. ನೀವು ಬರಲಿಲ್ಲವೆಂದು ನಾವು ಹತಾಶರಾಗಿಬಿಡುವ ಸಂಭವವೇನೂ ಇಲ್ಲ. ಈ ದೊಡ್ಡಣ್ಣನ ಚಾಳಿಯನ್ನು ನಮ್ಮ ಹತ್ತಿರ ಪ್ರದರ್ಶಿಸುವ ಅವಕಾಶ ನಿಮಗೆ ದೊರೆಯದು.

## ಸಮಾಜಸೇವೆಯ ಇನ್ನೊಂದು ಮುಖ

ಈ ಪತ್ರಿಕೆಯ ಎರಡನೆಯ ಸಂಚಿಕೆಯಲ್ಲಿ ಅಮ್ಮ ಸುಶೀಲಮ್ಮ ಮತ್ತು ಅವರ ನೇತೃತ್ವದ ಸುಮಂಗಲಿ ಸೇವಾಶ್ರಮದ ಪರಿಚಯ ಮಾಡಿಕೊಟ್ಟೆವು. ಕಳೆದ ಒಂದು ತಿಂಗಳಲ್ಲಿ ಆಶ್ರಮವು ತನ್ನ ಪರಿವೆ ಇಲ್ಲದೆಯೇ ಸುದ್ದಿಯಲ್ಲಿರುವಂತಾಗಿದೆ. ಆಶ್ರಮವು ಕೃತ್ರಿಮವಾಗಿ ಏನೋ ಪಾತಕ ಎಸಗುತ್ತಿದೆಯೆಂಬ ರೀತಿಯಲ್ಲಿ ಗುಲ್ಲನ್ನು ಎಬ್ಬಿಸುತ್ತಿರುವ ಮಹನೀಯರು ಹಾಗೂ ಸಂಸ್ಥೆಗಳು ನಮ್ಮ ಸಮಾಜಕ್ಕೆ ನೀಡುತ್ತಿರುವ ಕೊಡುಗೆ ಎಂತಹುದು ? ನಿರಾಶ್ರಿತರಿಗೆ ಆಶ್ರಯ, ಉದ್ಯೋಗದ ತರಬೇತಿ, ಮಾನಸಿಕ ಸ್ಥೈರ್ಯ, ವಿದ್ಯಾಭ್ಯಾಸ ಮುಂತಾದುವನ್ನು ನಿಸ್ವಾರ್ಥವಾಗಿ ನೀಡುವ ಒಂದು ಸಂಸ್ಥೆಯನ್ನು ವೃಥಾ ಆರೋಪಕ್ಕೆ ಗುರಿಮಾಡುವ ಕೊಡುಗೆ ! ಬೇರೆಯವರಿಗೆ ಮಕ್ಕಳ ಬಗ್ಗೆ ಇರುವ ಕಾಳಜಿ ಸುಶೀಲಮ್ಮನವರಿಗಿಲ್ಲ ಎಂದು ಯಾರಾದರೂ ನಂಬಿದರೆ ಅದಕ್ಕಿಂತ ಘೋರ ವಿಪರ್ಯಾಸ ಇನ್ನೊಂದಿರಲಾರದು.

ಬೇರೆ ಎಷ್ಟೋ ಮಂದಿ 'ಸೇವಾ ನಿರತ' ವ್ಯಕ್ತಿಗಳಂತೆ ಸುಶೀಲಮ್ಮನವರು ಮಾತಿನಲ್ಲಿ ಚತುರರಲ್ಲ. ಅವರ ಮಾಸಿಕ ವೇತನ (ಅಥವಾ ಬಿಗುಮಾನದಿಂದ 'ಗೌರವ ಸಂಭಾವನೆ' ಎಂದು ಕರೆಸಿಕೊಳ್ಳುವ ಮೊತ್ತ) ಮೂವತ್ತು ಸಾವಿರವೂ ಅಲ್ಲ, ಮೂರು ಸಾವಿರವೂ ಅಲ್ಲ. ಆ ಪ್ರಮಾಣದಲ್ಲಿ ವೇತನ ಪಡೆದು ಸಮಾಜದ 'ಸೇವೆ' ಮಾಡುವ ಮುಖವಾಡ ಧರಿಸಿರುವವರಿಗೆ ಸುಶೀಲಮ್ಮ ಯಾವ ರೀತಿಯಲ್ಲೂ ಅಡೆತಡೆ ನಿರ್ಮಿಸಿಲ್ಲವಾದರೂ ಈ ಸ್ವಯಂಘೋಷಿತ, ವಿದೇಶಿ ಪೋಷಿತ ಸರ್ಕಾರೇತರ ಸ್ವಯಂಸೇವಾ ಸಂಸ್ಥೆಗಳಿಗೆ ಅದೇಕೋ ಆಕೆಯನ್ನು ಕಂಡರೆ ಅವೇದ್ಯವಾದ ಭೀತಿ.

ಇದರಲ್ಲೂ ನಮ್ಮ ದೇಶದ ಒಂದು ಸ್ವಯಂನಿರ್ಮಿತ ಸಂಸ್ಥೆ ಬಲಿಷ್ಠವೋ ವಿದೇಶಿ ಅನುದಾನದ ಪುಷ್ಟಿಯಲ್ಲಿ ಬೆಳೆದ ದೈತ್ಯಬಲ ಬಲಿಷ್ಠವೋ ಎಂಬುದು ತೀರ್ಮಾನವಾಗುತ್ತಿರುವಂತೆ ತೋರುತ್ತಿದೆ. ಸುಮಂಗಲಿ ಸೇವಾಶ್ರಮದ ಘನತೆ ಇರುವುದು ಅದು ಈವರೆಗೆ ಮಾಡಿರುವ ಲೋಕಹಿತದ ಸಾಧನೆಯಲ್ಲಿ. ಅಲ್ಲಿಯ ಕಾರ್ಯಕರ್ತರಿಗೆ ಇರುವ ಯಜಮಾನರೆಂದರೆ ಅವರ ನಿಸ್ವಾರ್ಥ ಸೇವೆಯನ್ನು ಪಡೆದಿರುವ ಮೂಕ ಜನ ಮಾತ್ರ. ದೇಶದ ಹೊರಗಿನ ಯಾರನ್ನೂ ರಂಜಿಸುವ ಪ್ರಮೇಯ ಆ ಆಶ್ರಮಕ್ಕಿಲ್ಲದಿರುವುದೇ ಅದರ ಕಿರೀಟದ ಒಂದು ಗರಿ. ಕೆಸರಿಗೆ ಕಲ್ಲು ಹಾಕಿದವನಿಗೆ ಕೊಚ್ಚೆ ಅಂಟುವಂತೆ ಸ್ವಲ್ಪಮಟ್ಟಿಗೆ ಆಶ್ರಮಕ್ಕೂ ಕಳಂಕ ತಟ್ಟಿದಂತೆ ಕಾಣಬಹುದು. ಅದರಿಂದ ಸುಶೀಲಮ್ಮನವರಾಗಲಿ ಸುಮಂಗಲಿ ಸೇವಾಶ್ರಮವಾಗಲಿ ಅಧೀರರಾಗುವುದಿಲ್ಲ. ಆಗಬೇಕಿಲ್ಲ. ಅವರಿಗೆ ಈ ದೇಶದ ಜನಸಾಮಾನ್ಯರ ಶ್ರೀರಕ್ಷೆ ಇದೆ. ಪರಕೀಯರನ್ನು ಮೆಚ್ಚಿಸಲು ಪರದಾಡಬೇಕಾದ ಪರಿಸ್ಥಿತಿ ಅವರಿಗಿಲ್ಲ.

ತಿಂಗಳ ಪತ್ರಿಕೆ
ಹೊಸತು
ನಿಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಮಾಲೋಚಕ ಮಂಡಲಿ

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಪಾರ್ಥಸಾರಥಿ
ಬರಗೂರು ರಾಮಚಂದ್ರಪ್ಪ
ಬಸವರಾಜ ಕಲ್ಗುಡಿ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಚಿ. ಶ್ರೀನಿವಾಸರಾಜು
ಸಿದ್ಧನಗೌಡ ಪಾಟೀಲ
ಎಂ. ಎ. ಸೇತುರಾವ್
ಎಲ್. ಹನುಮಂತಯ್ಯ
ಹಾಲಾಡಿ ಮಾರುತಿರಾವ್

ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : ೨೮೭೭೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ☎ : ೪೪೧೦೦೧೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ☎ : ೪೪೪೮೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ☎ : ೨೪೩೦೨

## ಮುಖಪುಟದ ಚಿತ್ರಕ್ಕೆ ಪ್ರತಿಕ್ರಿಯೆ

ಅಕ್ಟೋಬರ್ ಸಂಚಿಕೆಯ ಮುಖಪುಟ ಚಿತ್ರ ಎಷ್ಟೊಂದು ಅರ್ಥಗರ್ಭಿತ! ಆಚೆಗಾತ, ಗಾಂಧಿತಾತ ಬಚ್ಚಬಾಯಿಯಲಿ ಥೇಟ್ ಮಗುವಿನ ಹೂನಗೆ. ಒಂದು ಕೈಯಲ್ಲಿ ಉದ್ದನೆಯ ಕೋಲು. ನೀಲಾಕಾಶದೆಡೆ ನಿರ್ದೇಶನ ಮಾಡುವಂತಿದೆ. ಅಜ್ಜನ ನಿರ್ಮಲ ಮನಸ್ಸಿನ ಸಂಕೇತದಂತೆ, ಎತ್ತರೆತ್ತರ, ಉತ್ತರೋತ್ತರ ಪ್ರಗತಿ ಹೊಂದಲಿ ಭಾರತ ದೇಶವೆನ್ನುವ ಅವನ ಕನಸಿನಂತೆ. ಇನ್ನೊಂದು ಕೈಯಲ್ಲಿ ಸುಂದರ ಚೆಂಗುಲಾಬಿ ಇದೆ. ಭವ್ಯ ಭಾರತದ ನಾಳಿನ ಪ್ರಜೆಯಾಗುವ ಎಳೆಯನಿಗೆ ಕೊಡಲು. ಅಜ್ಜನ ಕಣ್ಣ ತುಂಬ ಸುಂದರ ಕನಸುಗಳು, ತಲೆ ತುಂಬ ಯೋಚನೆಗಳು- ಯೋಜನೆಗಳು. ಹೃದಯ ತುಂಬ ಆರ್ದ್ರ ಸ್ಪಂದನಗಳು!

ಕಲ್ಪನೆಗೆ ವಾಸ್ತವಕ್ಕೆ ಎಷ್ಟೊಂದು ಅಂತರ! ಮುಳ್ಳು ತಂತಿ-ಬೇಲಿ ಈಚೆ ನಿಂತ ಬಾಲಕ. ತನ್ನೆಲ್ಲ ಶಕ್ತಿಗೂಡಿಸಿ ಕಾಲುತುದಿ ಬೆರಳ ಮೇಲೆ ನಿಂತು ಮುಳ್ಳುಬೇಲಿಯ ಜಗ್ಗಿ ಅಜ್ಜನ ಕೈಯೊಳಗಿನ ಚೆಂಗುಲಾಬಿ ಹಿಡಿಯಬೇಕೆನ್ನುತ್ತಾನೆ. ಈ ಧಾವಂತದಲ್ಲಿ ಬರಿಮೈಯ ಎದೆಗೆ ಮುಳ್ಳುತಂತಿ ಚುಚ್ಚಿ ಕೆಂಪುರಕ್ತ ಇಳಿಯುತ್ತಿದೆ ಹೊಟ್ಟೆಯ ಮೇಲೆ ಹರಿಯುತ್ತ. ಕಣ್ಣೆಟುಕಿನಲ್ಲಿದ್ದರೂ, ಕೈಗೆಟುಕುತ್ತಿಲ್ಲ. ಎಷ್ಟು ಸಮೀಪ, ಎಷ್ಟೊಂದು ದೂರ! ಅಜ್ಜ ನಿಂತ ನೆಲ ಹಸಿರು-ಕುಸುರಿನ ಹೊಲ. ಎಳೆಯನ ಬರಿಗಾಲಿನ ಕೆಳಗಿನ ನೆಲ ನಿರ್ಜಲ, ಕನಸುಗಳು ಬರಿದೊಡೆದ ಪಾಳ್ನೆಲ. ಸೇಬು ಹಣ್ಣಿನಂಥ ಹಿಮ್ಮಡಿಗೆ ಸವಾಲೆಸೆಯುವ ಕಲ್ಲು- ಮುಳ್ಳುಗಳು. ಪ್ರಕೃತಿ ಮತ್ತು ವಿಕೃತಿಯ ಮಧ್ಯೆ ಸಣ್ಣದೊಂದು ಗೆರೆ - ನೈತಿಕತೆಯ ಕೊರೆ.

ತಿಳಿ ನೀಲಿ ನಿರ್ಮಲ ಅನಂತ ಆಕಾಶ ತುಂಬ ತುಂಬಿ ನಿಂತ ಮಹಂತಾನಂತ. ಯಾರೋ ಪಾಪಿಗಳು ನೆಟ್ಟ 'ಬೇಲಿ'ಯ ದಾಟದ ನತದೃಷ್ಟ ಅಮಾಯಕನೀತ.

ಕನಸು-ನನಸುಗಳ ಮಧ್ಯೆ ಲಕ್ಷ್ಮಣರೇಖೆಯಂತಿರುವ 'ಮೂರು' ಮುಳ್ಳು ತಂತಿ-ಬೇಲಿ ಹರಿದು ಹೋಗುವವರೆಗೆ ಹುಟ್ಟುಡುಗೆಯಲ್ಲಿರುವ ಪುಟ್ಟನಿಗೆ 'ಗುಲಾಬಿ' ದಕ್ಕೀತಾದರೂ ಹೇಗೆ?




ಮುಖಪುಟ ಚಿತ್ರದ ಕಲಾವಿದರಿಗೆ ಅನಂತ ಧನ್ಯವಾದಗಳು.

**ಜಿ. ಎಸ್. ವಡಗಾಂವಿ** — ರಬಕವಿ - ೫೮೭ ೩೧೪

ಅಕ್ಟೋಬರ್ ತಿಂಗಳ ಮುಖಚಿತ್ರದ ಕುರಿತು ನೂರಕ್ಕೂ ಹೆಚ್ಚು ಓದುಗರು ತಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದಾರೆ. ಶ್ರೀ ಜಿ. ಎಸ್. ವಡಗಾಂವಿ ಅವರ ಅನಿಸಿಕೆ ಮೇಲೆ ಪ್ರಕಟವಾಗಿದೆ. ಬಂದ ಬರಹಗಳಲ್ಲಿ ಚೆನ್ನಾಗಿ ಬರೆದ ಲೇಖಕರು : ಸರ್ವಶ್ರೀ ಎಸ್. ಎನ್. ಗೋಪಿನಾಥ್ (ಬೆಂಗಳೂರು), ಎ. ಆರ್. ಸಾಲಿಯಾನ್ (ಆನೆಗುಂಡಿ), ಹ. ಚ. ಸತ್ಯನಾರಾಯಣ ಉರಾಳ (ಬೆಂಗಳೂರು), ಎ. ಪಿ. ಚಂದ್ರಶೇಖರ (ಕಳಲವಾಡಿ), ಪ್ರಸನ್ನ ವೀ. ಅಲೆಗಾವಿ (ಇಲಕಲ್ಲ), ವಿನ್ಯಾಸ ಎಸ್. ಬಿ (ಬೆಂಗಳೂರು), ಜ. ನಾ. ತೇಜಶ್ರೀ (ಹಾಸನ), ಮೂರ್ನಾಡು ರಾಮಸ್ವಾಮಿ (ಮೈಸೂರು), ಸಿ. ಎಂ. ಕೀರ್ತಿರಾಜ್ (ಭದ್ರಾವತಿ), ವಿ. ಎಸ್. ರಾವ್ (ಮಂಗಳೂರು), ಕೊಪ್ಪರಂ ಅನ್ನಪೂರ್ಣ ಸುಬ್ರಹ್ಮಣ್ಯಂ (ಬೆಂಗಳೂರು), ಅನಾಮಿಕ (ಬೆಂಗಳೂರು), ಅಂತರಗಂಗೆ (ಪಾವಗಡ), ನಾಭಿರಾಜ ಡಿ. ಅಕ್ಕಿ (ಗೋಗಿ ಪೇಠ), ಯು. ಎಸ್. ಸಂಗನಾಳಮಠ (ಹೊನ್ನಾಳಿ).

## ಪತ್ರಗಳು

ಮಹಾತ್ಮ ಗಾಂಧಿ ಅವರ ವಿಚಾರ, ಜೀವನ ಕುರಿತು ವಿಚಾರಪೂರಿತ ಲೇಖನಗಳನ್ನು ಪ್ರಕಟಿಸಿದ್ದೀರಿ. ಕನ್ನಡಿಗರು ಪ್ರತಿಯೊಬ್ಬರೂ ಓದಿ ಸಂಗ್ರಹಿಸಲೇಬೇಕಾದಂತಹ ವೈಚಾರಿಕ ಪತ್ರಿಕೆ ತಮ್ಮ ಸಂಪಾದಕತ್ವದಲ್ಲಿ ಹೊರಬರುತ್ತಿರುವುದು ಸುತ್ತ್ಯಾರ್ಹ.

ಹೂವಿನ ಹಡಗಲಿ — **ಸುರೇಶ ಅಂಗಡಿ**

ರಾಜಕೀಯ ಸಂಬಂಧವಾದ ಹಲವು ವೈವಿಧ್ಯ ವಿಚಾರಗಳನ್ನು ಓದುಗರಿಗೊದಗಿಸುವಲ್ಲಿ ಸಫಲವಾದ 'ಹೊಸತು' ಪತ್ರಿಕೆಯ 2ನೇ ಸಂಚಿಕೆ ಓದಿದ್ದೇನೆ. ಪತ್ರಿಕೆಗಳು ಆರೋಗ್ಯಕರ ಸಮಾಜ ನಿರ್ಮಾಣ ಮಾಡಬಲ್ಲವು, ಮಾಡಬೇಕು. ಹೊಸತು ಈ ನಿಜವನ್ನು ಗಮನಿಸಲಿ.

ಕಡಂದಲೆ, (ದ.ಕ.) — **ಕೆ. ಜಿ. ಶೆಟ್ಟಿ**

ವಿಚಾರ ಪ್ರಚೋದಕವಾದ ಉಪಯುಕ್ತ ಲೇಖನಗಳು ಸಂಚಿಕೆಯ ಮೌಲ್ಯವನ್ನು ಹೆಚ್ಚಿಸಿವೆ. ಪತ್ರಿಕೆ ಇನ್ನಷ್ಟು ಮೈತುಂಬಿ ಹೊರಬರುತ್ತಿರಲಿ ಎಂದು ಹಾರೈಸುತ್ತೇವೆ.

ಪಳಕಳ — **ಸೀತಾರಾಮಭಟ್ಟ**

...ಬಾಗೂರು-ನವಿಲೆ ಸುರಂಗದ ಹೋರಾಟ - ಮಾನವ ಹಕ್ಕುಗಳ ಆಯೋಗದ ವರದಿ ತುಂಬಾ ಚೆನ್ನಾಗಿ ಬಂದಿದೆ. ವರದಿ ಇತರೆ ಸರಕಾರಿ ಆಯೋಗಗಳಂತೆ ಮೂಲೆಗುಂಪಾಗಲಿಕ್ಕಿಲ್ಲ. ಈ ಹೋರಾಟದಲ್ಲಿ ನೊಂದವರಿಗೆ ನ್ಯಾಯ ದೊರಕೀತೆಂಬ ನಂಬಿಕೆಯಿದೆ.

ಹುಡಗಿ, ಬೀದರ ಜಿಲ್ಲೆ — **ಎಂ. ಕಾಶಿನಾಥ**

....ಗ್ರಾಮೀಣ ಪ್ರದೇಶದ ಜನಪದ ಆಟ, ನಾಟಿ ವೈದ್ಯ, ಜನಪದ ಹಾಡು, ಕುಣಿತ, ಹಬ್ಬ ಆಚರಣೆ - ಇತರ ಸಾಂಸ್ಕೃತಿಕ ಹೆಗ್ಗಳಿಕೆಗಳಿಗೆ ಹೊಸತರಲ್ಲಿ ಆದ್ಯತೆ ನೀಡಿ.

ಗೋಗಿ, ಕಲಬುರ್ಗಿ ಜಿಲ್ಲೆ — **ಡಿ. ಎನ್. ಅಕ್ಕಿ**

ಗುಣಕ್ಕೆ ಮತ್ಸರವಿಲ್ಲ. Quality speaks for itself... ಎಲ್ಲಾ topic ಗಳನ್ನೂ ಒಳಗೊಂಡಿದೆ. ಉತ್ತೇಜನ ಸಿಗುವುದರಲ್ಲಿ ಸಂದೇಹವೇ ಇಲ್ಲ. ನಾನು ಕವಿಯಲ್ಲ, ಸಾಹಿತಿ ಅಲ್ಲ, ಸಾಮಾನ್ಯ ವ್ಯಕ್ತಿ.

ಬೆಂಗಳೂರು — **ಆನಂದ ಶ್ರೀನಾಥ**

ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟವಾದ 'ಮಹಾತ್ಮ ಗಾಂಧಿಯವರ ಹಸಿರು ಕಾಳಜಿ' ಲೇಖನ ನಿಜಕ್ಕೂ ಸಕಾಲಿಕ. ಬೆಂಗಳೂರಿನಂತಹ ಮಹಾನಗರಗಳಲ್ಲಿ ಆಗುತ್ತಿರುವ ವಾಯುಮಾಲಿನ್ಯ ಊಹೆಗೆ ನಿಲುಕದಂಥದ್ದು. ನಗರಗಳ ಪ್ರತಿ 'ಮಧ್ಯಮ ವರ್ಗ'ದ ಕುಟುಂಬವೂ ಎರಡು-ಮೂರು ದ್ವಿಚಕ್ರ ಮತ್ತು ಕಾರಿನಂತಹ ವಾಹನಗಳನ್ನು ಹೊಂದಿದ್ದು, ಮನೆಯ ಹಿಂದಿನ ರಸ್ತೆಗೂ ನಡೆದುಹೋಗದೆ ವಾಹನ ಬಳಸುವ ದುಸ್ಥಿತಿಗೆ ಇಳಿದಿವೆ..

ಅರಿಶಿನಕುಂಟೆ — **ಪ್ರದೀಪ್ ಬೆಳ್ಳಾವೆ**

''ಗಾಂಧೀಜಿ ತುಂಬ ಗೌರವಿಸುತ್ತಿದ್ದ ಭಾರತದ ಭಕ್ತಿಪಂಥದ ಸುಧಾರಕರನ್ನು ಅಂಬೇಡ್ಕರ್ ಯಾವತ್ತೂ ಮನ್ನಿಸಿರಲಿಲ್ಲ''– ಎಂಬ ಜಿ. ರಾಜಶೇಖರ್ ನಿರ್ಣಯದಲ್ಲಿ ದೋಷವಿರುವುದು ಅಂಬೇಡ್ಕರ್ ವಾಣಿಯಿಂದಲೇ ಗೊತ್ತಾಗುತ್ತದೆ: ''ಭಿನ್ನವಾಗಿ ಯೋಚಿಸುವ ಪ್ರವಾದಿ ಮತ್ತು ಅಂತರ್ಜಾತೀಯ ಸಂಬಂಧಗಳನ್ನು ಇಟ್ಟುಕೊಂಡ ಪ್ರೇಮಿ ಇವರಿಬ್ಬರು ಜಾತಿಪದ್ಧತಿಯ ಸಮಾಜಕ್ಕೆ ಸಿಂಹಸ್ವಪ್ನವಾಗಿ ಪರಿಣಮಿಸಿದರು''... ಅಂಬೇಡ್ಕರ್ ಭಕ್ತಿಪಂಥವನ್ನು ಮನ್ನಿಸಿದ್ದು, 'ಜಾತಿಸ್ಥಾವರ'ಗಳನ್ನು ಧ್ವಂಸಗೊಳಿಸಿದ್ದಕ್ಕೆ ಎಂಬುದು ನಿಚ್ಚಳವಾಗಿದೆ. 'ಜಾತಿಗಳ ಹುಟ್ಟು ಮತ್ತು ಬೆಳವಣಿಗೆ' ಎಂಬ ಪ್ರಬಂಧದ ಅಂಬೇಡ್ಕರ್ ಮಾತುಗಳನ್ನಿಲ್ಲಿ ಉಲ್ಲೇಖಿಸಲಾಗಿದೆ.

ಕೋಲಾರ — **ವಿ. ಚಂದ್ರಶೇಖರ ನಂಗಲಿ**

ಬಹುಮುಖ ಪ್ರತಿಭೆಯ ವ್ಯಕ್ತಿತ್ವದಿಂದ ಹಲವಾರು ವರ್ಷಗಳ ಕಾಲ ಸಾಹಿತ್ಯ ಮತ್ತು ಪತ್ರಿಕೋದ್ಯಮದಲ್ಲಿ ವಿಶಿಷ್ಟ ಸೇವೆಯನ್ನು ಸಲ್ಲಿಸಿ ಖ್ಯಾತನಾಮರಾಗಿದ್ದ ಶ್ರೀ ವೈ. ಎನ್. ಕೆ. ಅವರು ಇತ್ತೀಚೆಗೆ ನಿಧನರಾದ ಶೋಕವಾರ್ತೆ ಬಂದಿದೆ. ಅವರಿಗೆ 'ಹೊಸತು' ತನ್ನ ನಮ್ರವಾದ ಗೌರವವನ್ನು ಸೂಚಿಸುತ್ತದೆ.

– ಸಂ.

# ಗಾಂಧಿ ಮತ್ತು ನಮ್ಮ ದೇಶ



ಮೊನ್ನೆಯವರೆಗೊಂದು ಕಾಲವಿತ್ತು. ಗಾಂಧಿ ಎಂಬ ಬಡಕಲು ದೇಹದ ಮನುಷ್ಯನೊಬ್ಬ ಭಾರತದ ಸ್ವಾತಂತ್ರ್ಯ ಚಳುವಳಿಗೆ ಮುಂಚೂಣಿಯ ನಾಯಕನಾಗಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಹಾತ್ಮನಾದದ್ದು. ನಿನ್ನೆಯವರೆಗೊಂದು ಕಾಲವಿತ್ತು, ಅದೇ ಮಹಾತ್ಮ ಇತಿಹಾಸವಾಗಿ ದೇಶದ ಜನರಿಗೆಲ್ಲಾ ಸ್ವಾಭಿಮಾನ-ಸ್ವಾತಂತ್ರ್ಯ-ಸರಳತೆಯ ಪ್ರತಿನಿಧಿಯಾಗಿ ಈ ದೇಶದ ಪ್ರತೀ ಉಸಿರಿನಲ್ಲಿ ಬೆರೆತದ್ದು. ಹಾಗೆಯೇ ಇಂದಿಗೂ ಕಾಲವೊಂದಿದೆ, ಗಾಂಧಿ 'ತಾತ'ನಾಗಿ ಭಾವಚಿತ್ರಗಳಲ್ಲಿ ಉಳಿದುಹೋಗಿ, ಪ್ರತಿಮೆಗಳಲ್ಲಿ ನರಳಿ, ಕತೆಯಾಗಿ ಕರಗಿಹೋದದ್ದು.

ಆತನ ಆದರ್ಶಗಳು ಕನಸುಗಳು, ಆಲೋಚನೆಗಳು ಈ ದೇಶದ ಸಾರ್ವಕಾಲಿಕ ವರ್ತಮಾನವಾಗಬೇಕಿತ್ತು. ಅಂತಹ ಬಹಳಷ್ಟು ನಿರೀಕ್ಷೆಗಳು, ನಿನ್ನೆಯ ಹಾದಿಯವರೆಗೂ ಇದ್ದದ್ದಿತ್ತು. ಆದರೆ ಇಂದಿಗೇನಿದೆ ? ಈ ನೆಲದಿಂದ ತನಗೊಂದು ಏನನ್ನೂ ಬಯಸಿಕೊಳ್ಳದೆ, ಕೊನೆಗೆ ತನ್ನ ಕುಟುಂಬವನ್ನು ಗಮನಿಸಿಕೊಳ್ಳಲಾಗದ ಮನುಷ್ಯನೊಬ್ಬ ಈ ದೇಶಕ್ಕೆ ಬಹಳಷ್ಟು ದುಡಿದ. ಅವನಿಗಿದ್ದ ಮೂಲ ನಂಬಿಕೆಯೊಂದೇ: ಮನುಷ್ಯ ನೆಂಬುದು. ಆದ್ದರಿಂದಲೇ ಆತ ಈ ದೇಶದಿಂದಾಚೆಗೂ ನ್ಯಾಯ- ಸ್ವಾತಂತ್ರ್ಯಗಳ ಪ್ರತಿಪಾದನೆಗೆ ಮುಂದಾಳಾಗಿದ್ದ, ಸ್ಫೂರ್ತಿಯಾಗಿದ್ದ. ಅಂತಹ ಮನುಷ್ಯ ತನ್ನ ದೇಶ ಪರರ ಆಳ್ವಿಕೆಯಲ್ಲಿದ್ದಾಗ ಪ್ರತಿಭಟಿಸಿ ಮುನ್ನುಗ್ಗಿದ್ದ, ಅದೆಷ್ಟೋ ಹಿಂಸೆಗಳ ನಡುವೆಯೂ, ಪರದೇಶೀಯ ಸರ್ಕಾರದ ದೌರ್ಜನ್ಯದ ಪರಮಾವಧಿಯಲ್ಲೂ ಬದುಕಿದ್ದ. ಆದರೆ ತನ್ನ ದೇಶ ಸ್ವಾತಂತ್ರ್ಯ ಪಡೆದುಕೊಂಡ ಹರ್ಷದೊಳಗಿನ ವರ್ಷದಲ್ಲೇ ತನ್ನ ದೇಶ ಬಾಂಧವನ ಗುಂಡಿಗೇ ಬಲಿಯಾಗಿಬಿಟ್ಟ. ತನ್ನ ದೇಶದ ಸ್ವಾತಂತ್ರ್ಯಕ್ಕಾಗಿ ಹಂಬಲಿಸಿದ್ದು ಸ್ವತಂತ್ರ ಭಾರತದ ಪ್ರಜೆಯ ಕೈಯಿಂದ ಹೀಗೆ ಸಾಯಲೇನೋ ಎಂಬಂತೆ.

ಈ ಹೊತ್ತಿಗೆ ಈ ನೆಲದಲ್ಲಿ ಆತ ಉಳಿದದ್ದು ಹೇಗೆ ? ಬಹುಶಃ ಆಧುನಿಕ ಭಾರತದ ಐತಿಹಾಸಿಕ ದುರಂತ ದಾಖಲಾಗುವುದೇ ಇಲ್ಲಿಂದ. ಭಾರತದ ನೆಲಕ್ಕೆ ಇದು ಪರಂಪರೆಯೇ ಆಗಿಬಿಟ್ಟಂತಿದೆ. ದೇವರಾಗಿ ಉಳಿದು ''ಬದುಕಿಗೊಂದು ನಂಬಿಕೆಯಾಗಬೇಕಾದ'' ರಾಮನಂತಹ ದೇವರು ತನಗೊಂದು ದೇವಾಲಯ ಕಟ್ಟಿಸಿಕೊಳ್ಳಲು ಹೊರಟು ಬಿಡುತ್ತಾನೆ. ಸರ್ವಾಂತರ್ಯಾಮಿ ಎನ್ನುವ ತನ್ನ ವ್ಯಾಪಕತೆಯೇ ಅವನಿಗೆ ಮರೆತು ಹೋಗುತ್ತದೆ. ಬದುಕನ್ನು, ಅದರ ನೆಮ್ಮದಿಯನ್ನು ಶೋಧಿಸಹೊರಡುವ ಬುದ್ಧನಂತಹ ಜ್ಞಾನಿ ಈ ದೇಶದಿಂದಾಚೆಗೆ ನೆಲೆಸಿಬಿಡುತ್ತಾನೆ. ಮಹಾತ್ಮನೆಂಬುವವನು ದೇಶದ ಎಲ್ಲಾ ಬುದ್ಧಿಜೀವಿಗಳ(?) ಸಾಮಾನ್ಯರ ಸ್ತರದಲ್ಲೆಲ್ಲಾ ನುಸುಳಿ, ಹರಿದಾಡಿ ಹಂಚಿ ಹೋಗುತ್ತಾನೆ. ಅವನನ್ನು 'ರಾಷ್ಟ್ರಪಿತ'ನೆಂದು ಕರೆದುಕೊಂಡ ದೇಶ, ಆ ತಂದೆಯನ್ನು, ಅವನ ಆದರ್ಶವನ್ನು, ಬದುಕನ್ನು ತಮ್ಮ ಬದುಕಿನ ಕೆಸರಿನೊಂದಿಗೆ ಸಮೀಕರಿಸಿ ಮಾತನಾಡಿ ತುಚ್ಛೀಕರಿಸುವ ಜನರನ್ನು ಕೊನೇ ಪಕ್ಷ ನಿಯಂತ್ರಣದಲ್ಲಿಡಲಾರದಷ್ಟು ಅಸಹಾಯಕವಾಗಿಬಿಡುತ್ತದೆ.

ಇವತ್ತಿಗೆ ಎಲ್ಲವೂ ಸೊಗಸಾಗಿದೆ. ಭಾರತ - ದೇಶ - ಸ್ವಾತಂತ್ರ್ಯ ಈ ಮಾತುಗಳಿಗೆಲ್ಲಾ ಒಂದು ಚೆಲುವಿದೆ. ಆದ್ದರಿಂದಲೇ ನಮ್ಮವಲ್ಲದ ಆ ನಿನ್ನೆಗಳನ್ನು ಕುರಿತು ಮಾತನಾಡುವುದು, ಅಣಕವಾಡುವುದು, ಹೀಗಿರಬೇಕಿತ್ತು, ಹಾಗಿರಬೇಕಿತ್ತು, ಅವನೆಷ್ಟು ದೊಡ್ಡವನು ? -ಹೀಗೆಲ್ಲಾ ನೂರು ತೆರನಾಗಿ ಮಾತನಾಡುವುದು ಸಾಧ್ಯ. ಗಾಂಧಿಯೊಬ್ಬನಿಂದಲೇ ಈ ದೇಶಕ್ಕೆ ಸ್ವಾತಂತ್ರ್ಯ ಬಂತೆ ? ಇನ್ನಾರಿಗಿಂತಲೂ ಆತ ದೊಡ್ಡವನೇ ? ಹೀಗೆಲ್ಲಾ ಪ್ರಶ್ನೆಗಳನ್ನು ಎತ್ತುವುದು ಉಸಿರಾಟದಷ್ಟೇ ಸಹಜವಾಗಿದೆ. ಏಕೆಂದರೆ ಇಲ್ಲಿ ಎಲ್ಲರಿಗೂ ಗೊತ್ತು, ಅಂದು ಆ ಹೋರಾಟಗಾರರ ಬೆನ್ನಿಗೆ ಬಿದ್ದ ಲಾಠಿ ಏಟುಗಳಾಗಲೀ, ಬೂಟುಕಾಲಿನ ಒದೆತಗಳಾಗಲಿ, ಗುಂಡಿನ ಹೊಡೆತಗಳಾಗಲಿ ತಮಗೆ ಬೀಳುವುದಿಲ್ಲವೆನ್ನುವುದು. ಮಾತು, ಮಾತು, ಬರೀ ಮಾತು. ಆ ಕಾರಣಕ್ಕೆ ಪ್ರಾಯಶಃ ಮಾತುಗಳೂ ಈ ನೆಲದಲ್ಲಿ ಅರ್ಥ ಕಳೆದುಕೊಂಡಿವೆ. ಆ ಮಹಾತ್ಮ ಈ ಹೊತ್ತಿಗೆ ಬದುಕಿದ್ದರೆ ಅವನನ್ನು ಕೊಲ್ಲಲು ಖಂಡಿತ 'ಗುಂಡು' ಬೇಕಿರಲಿಲ್ಲ. ತನ್ನ ಭವ್ಯ ಭಾರತದ ಕನಸು ಇಲ್ಲಿ ಸಾಕಾರವಾದ ಬಗೆಯನ್ನು ಕಂಡಿದ್ದರೆ ಸಾಕಿತ್ತು !



ಈ ಹೊತ್ತಿಗೂ ಗಾಂಧಿಯ ಚಿಂತನೆಯಲ್ಲಿ ಬಹುಮುಖ್ಯ ಚರ್ಚೆಯಿರುವುದು ಅವರ 'ಸಮಾನತೆ'ಯ ಬಗೆಗಿನ ನಿಲುವಿನಲ್ಲೇ. ಅಂಬೇಡ್ಕರ್ ಮತ್ತು ಗಾಂಧಿ ನಡುವಿನ ವಿಚಾರ ಭೇದದ ಅಂತರ ಕಾಣಸಿಗುವುದು ಇಲ್ಲಿಯೇ. ರಾಮರಾಜ್ಯದ ಕಲ್ಪನೆಯ ಭಾವುಕ ಗಾಂಧಿಗೆ ಸ್ವಾತಂತ್ರ್ಯದ ನಂತರದಲ್ಲಿ ಸಮಾನತೆ ಸರಳವಾಗಬಹುದೆಂಬ ಕನಸಿತ್ತು. ಆದರೆ ಆ ಸಾಚಾ ಬದುಕಿನ ಅರಿವಿದ್ದ ಅಂಬೇಡ್ಕರ್‌ಗೆ ಸ್ವಾತಂತ್ರ್ಯಕ್ಕಿಂತ ಸಮಾನತೆ ಮೊದಲ ಆದ್ಯತೆಯಾಗಿತ್ತು. ಈ ದೇಶದ ಭವ್ಯ (!) ಪರಂಪರೆಯ ಬಗೆಗೆ ಅವರ ತಿಳುವಳಿಕೆ ಬಹಳ ಸ್ಪಷ್ಟವಾಗಿತ್ತು. ಮಹಾತ್ಮನ 'ನಾವೆಲ್ಲ ಒಂದು- ಭಾರತೀಯರು' ಎನ್ನುವ ನಂಬಿಕೆ ಅಸಂಗತ ಎನ್ನುವುದು ಅಂಬೇಡ್ಕರ್ ಅರಿವಿಗೆ ಬಂದಿತ್ತು. ಆದ್ದರಿಂದಲೇ ಈ ಹೊತ್ತಿಗೂ ಗಾಂಧಿ ತಳೆದ ಈ ದೇಶದ ಶೂದ್ರರ ಬಗೆಗಿನ ನಿಲುವುಗಳೆಲ್ಲವೂ ಅನುಮಾನಾಸ್ಪದವೇ. ಆ ಮನುಷ್ಯ ಒಂದರ್ಥದಲ್ಲಿ ಇತ್ತ ಮೇಲೆಂದುಕೊಂಡ ಸವರ್ಣೀಯರ ಹೃದಯಕ್ಕಾಗಲಿ ಅತ್ತ ನೊಂದ ಅನ್ಯಜಾತಿಯ ಮನಸ್ಸುಗಳಿಗಾಗಲಿ ಹತ್ತಿರವಾಗಲೇ ಇಲ್ಲ. ಸ್ವಾತಂತ್ರ್ಯ ಪಡೆದುಕೊಂಡ ನಂತರ ಇನ್ನು ಆತನ ಅವಶ್ಯಕತೆ ತಮಗೇನಿದ್ದಿತು ಎನ್ನುವುದೇ ಈ ದೇಶದ ಎಲ್ಲರ ಅಭಿಮತವೂ ಆಗಿಬಿಟ್ಟಂತೆ ಆತ ಅನಾಥನಾಗಿ ಉಳಿದುಹೋದುದಕ್ಕಿಂತ ಮತ್ತೊಂದು ದುರಂತವನ್ನು ಆಧುನಿಕ ಭಾರತದ ಇತಿಹಾಸದಲ್ಲಿ ದಾಖಲಿಸುವುದು ಸಾಧ್ಯವೇ ? ತನಗಲ್ಲದ ತನ್ನ ಯೋಚನೆಗಳ ಕಾರಣದಿಂದಲೇ ಆ ವೃದ್ಧ ದೇಹ ಗುಂಡಿಗೆ ಬಲಿಯಾಗಬೇಕಾಯಿತು. ಅಷ್ಟಕ್ಕೆ ಈ ದೇಶ ಆತನನ್ನು 'ಮಹಾತ್ಮ'ನೆಂದು ಕರೆದು ಸುಮ್ಮನಾಯಿತು. ದೇವರ ಬಗೆಗೆ ಮಾತನಾಡದ ಬುದ್ಧನನ್ನು ದೇವರಾಗಿಸುವ, ಜಾತಿಯ ಬಂಧನದಾಚೆಗೆ ಚಿಂತಿಸಿ ಬದುಕಿದ ಬಸವೇಶ್ವರನನ್ನು ಜಾತಿಯ ಚೌಕಟ್ಟಿಗೇ ಹೊಂದಿಸಿಡುವ ಪರಂಪರೆಯಂತೆ ಇದೂ ಸಹ ನಡೆದುಹೋಯಿತು.

ನೂರಾರು ಆಲೋಚನೆಗಳ ಸಾಕಾರದ ಕನವರಿಕೆಯ ಸಾರ್ಥಕ ಬದುಕಿನ ಕಾರಣಗಳು ಸಹಜವಾಗಿಯೇ ಅವನನ್ನು ಮಹಾತ್ಮನನ್ನಾಗಿಸಬಲ್ಲವು. ಆದ್ದರಿಂದಲೇ ಆತನಿಗೆ ತನ್ನ ಕನಸಿನ ಭಾರತ ನಾಳೆದಿನಗಳಲ್ಲಿ ಹೇಗಿದ್ದರೆ ಏನಾಗಬಹುದು, ಎನ್ನುವ ಸ್ಪಷ್ಟ ಅರಿವಿತ್ತು. ಅದನ್ನಾತ ಎಚ್ಚರಿಸಿದ್ದ ಕೂಡ. ಆದರೆ ಅದೇ ಈ ದೇಶದ ಸಾಂಸ್ಕೃತಿಕ ಬದ್ಧತೆಯಾಗಿಬಿಟ್ಟಿತು. ಈ ಮಹಾತ್ಮ ಬರಿಯ ಕತೆಯಾಗಿಬಿಟ್ಟ. ವೇದಿಕೆ ಮೇಲಿನ ಬಹಳಷ್ಟು ಪುಂಡರ ಮಾತುಗಳಿಗೆ, ಆಕಾಶವಾಣಿಯ ಚಿಂತನೆಗಳಿಗೆ, ದೂರದರ್ಶನದ ಸೂಕ್ತಿಗಳಿಗೆ ಆಕರವಾಗಿ ಉಳಿದುಹೋದ. ಈ ಹೊತ್ತಿನ ಸಾಮಾನ್ಯ ಚುನಾವಣೆಯ ಪಕ್ಷವೊಂದರ ಭಿತ್ತಿಚಿತ್ರಕ್ಕೂ ಮಹಾತ್ಮನ ಅಗತ್ಯವಿಲ್ಲದೇ ಹೋಯಿತು. ಬಹುಶಃ ಅದು ಅವರ ಯೋಗ್ಯತೆಯೆಂದು ಸುಮ್ಮನಾಗಬಹುದು ಅಥವಾ ಅವನ ಬಗೆಗಿನ ಜನಸಾಮಾನ್ಯರ ಅರಿವನ್ನು ಒಡೆಯಲಾರದ ಕಾರಣವೂ ಇರಬಹುದು.

ಆದರೆ ಹೀಗೊಬ್ಬ ಮನುಷ್ಯ ಬದುಕಿದ್ದ, ಅವನಂತೆ ಬದುಕಬಹುದು ಎನ್ನುವುದನ್ನು ಇಂದಿನ ನಾಳಿನ ಪೀಳಿಗೆಗೆ ಹೇಳಲಾಗದ ವಾಸ್ತವ ಮಾತ್ರ ಅದೆಷ್ಟು ಕಠೋರ. ಮತ್ತೆ ನಾಳೆಗಳಲ್ಲಿ ಈ ಬದುಕಿನ ಕತೆಯನ್ನು ಮಕ್ಕಳಲ್ಲಿ ಹೇಳಿದರೆ ವಾಸ್ತವದ ಈ ನೆಲದೊಂದಿಗೆ ಆ ಜೀವನದ ರೀತಿಯನ್ನು ತಳುಕು ಹಾಕಿ ನೋಡಬಹುದಾದ ಅವರು ಅದನ್ನು ನಂಬುವರೆ ? ಸ್ವಾತಂತ್ರ್ಯ ಪಡೆದ ಬರೀ ಐವತ್ತು ವರ್ಷಗಳಲ್ಲಿ ಗಾಂಧಿ ಮರೆತುಹೋದರೆ, ವ್ಯಂಗ್ಯ ವಿಡಂಬನೆಯ ಸಂಕೇತವಷ್ಟೇ ಆಗಿ ಉಳಿದುಹೋದರೆ ನಾಳೆಗಳಲ್ಲಿ ಇನ್ನೇನು ಉಳಿದುಕೊಂಡೀತೆಂದು ಚಿಂತಿಸಬೇಕು.

ಆದರೂ ವರ್ಷದಲ್ಲಿ ದೇಶದ ಹೆಸರಿನ ಪ್ರತೀ ಸಮಾರಂಭದ ಮಾತಿಗೂ ಗಾಂಧಿ ಮಹಾತ್ಮನ ಪ್ರಸ್ತಾಪವಾಗುತ್ತದೆ. ವರ್ಷಕ್ಕೊಮ್ಮೆ ಗಾಂಧೀಜಿಯ ಆಚರಣೆಯಾಗುತ್ತದೆ. ದೇಶಕ್ಕೆ ರಜೆ ಘೋಷಿಸಿಕೊಂಡು ಆಚರಿಸುತ್ತೇವೆ (!)

ನಾಚಿಕೆಯಾಗಬೇಕು!

ಡಾ|| ಜಿ. ಪ್ರಶಾಂತನಾಯಕ
ಉಪನ್ಯಾಸಕ, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ - ೫೭೭ ೪೫೧

# ಅಭಿವೃದ್ಧಿಯ ಸಾಮಾಜಿಕ ನೆಲೆಗಳು

ಡಾ॥ ಟಿ. ಆರ್. ಚಂದ್ರಶೇಖರ್

**ರಾಜ್ಯೋತ್ಸವವನ್ನು 43 ವರ್ಷಗಳಿಂದ ಆಚರಿಸುತ್ತಾ ಬಂದಿರುವ ಕರ್ನಾಟಕದಲ್ಲಿ ಇನ್ನೂ ಉಲ್ಲಾಸದಾಯಕವಾದ ಆರ್ಥಿಕ-ಸಾಂಸ್ಕೃತಿಕ ಸನ್ನಿವೇಶ ರಚನೆಗೊಂಡಿಲ್ಲ. ಅದಕ್ಕೆ ಕಾರಣಗಳು ಹಲವಾರು. ನಮ್ಮ ಮಾನವ ಮತ್ತು ಪ್ರಾಕೃತಿಕ ಸಂಪನ್ಮೂಲಗಳನ್ನು ರೂಢಿಸಿಕೊಳ್ಳುವಲ್ಲಿ ನಾವು ತೋರಿಸಿರುವ ಅಸಡ್ಡೆ ನಿಜಕ್ಕೂ ನಿಂದಾರ್ಹವಾಗಿದೆ. ನಮ್ಮ ಆದ್ಯತೆಗಳೇನು ಮತ್ತು ಮುಂದಿನ ದಾರಿ ಯಾವುದು? ಖ್ಯಾತ ಅರ್ಥಶಾಸ್ತ್ರಜ್ಞ ಡಾ॥ ಟಿ. ಆರ್. ಚಂದ್ರಶೇಖರ್ ಅವರು ಸಮಗ್ರ ವಿಶ್ಲೇಷಣೆಯೊಂದನ್ನು ನೀಡಿ ಬೆಳಕು**

ಅಭಿವೃದ್ಧಿಯನ್ನು ಅಖಂಡ ಪ್ರಕ್ರಿಯೆಯಾಗಿ ಮತ್ತು ಮೌಲ್ಯ ನಿರಪೇಕ್ಷ ಹಾಗೂ ಲಿಂಗ ನಿರಪೇಕ್ಷ ನೆಲೆಗಳಲ್ಲಿ ಪರಿಭಾವಿಸಿಕೊಂಡು ಬರಲಾಗಿದೆ. ಸಾಂಪ್ರದಾಯಿಕವಾಗಿ ಅದನ್ನು 'ವರಮಾನ-ಉತ್ಪನ್ನ'ಗಳಿಗೆ ಸಂಬಂಧಿಸಿದ ಪರಿಕೆಯಲ್ಲಿ ಗುರುತಿಸುತ್ತಾ ಬರಲಾಗಿದೆ. ಕಾಲಾನುಗತವಾಗಿ ಅಭಿವೃದ್ಧಿಯ ಫಲಗಳು ಸಮಾಜದ ಎಲ್ಲ ವರ್ಗ-ಗುಂಪುಗಳಿಗೂ ಒದಗುತ್ತವೆ ಎಂಬ ಗ್ರಹಿಕೆ ಸಾಂಪ್ರದಾಯಿಕ ಅಭಿವೃದ್ಧಿ ವಿಚಾರ ಪ್ರಣಾಳಿಕೆಯ ಮೂಲದಲ್ಲಿದೆ. ಅಭಿವೃದ್ಧಿ ಎನ್ನುವುದು ಸ್ವತಂತ್ರ-ಸ್ವಾಯತ್ತ ಪ್ರಕ್ರಿಯೆಯಾಗಿ ಸಮಾಜದಲ್ಲಿ ಸಂಭವಿಸಬಲ್ಲದು ಎಂಬ ನಂಬಿಕೆ ಇಲ್ಲಿದೆ.

ಈ ಬಗೆಯ ಅಭಿವೃದ್ಧಿಯನ್ನು ಕುರಿತ ಗ್ರಹಿಕೆ-ನಂಬಿಕೆಗಳು ಇಂದು ಅನೇಕ ಬಗೆಯ ಸವಾಲುಗಳನ್ನು ಎದುರಿಸುತ್ತಿವೆ. 1998ರ ನೊಬೆಲ್ ಪ್ರಶಸ್ತಿ ವಿಜೇತ ಅಮರ್ತ್ಯ ಸೇನ್ ಪ್ರಕಾರ ಸಾಂಪ್ರದಾಯಿಕ ಅಭಿವೃದ್ಧಿ ವಿಚಾರ ಪ್ರಣಾಳಿಕೆಯು 'ಇರುವುದರ' ಸಂಕಥನವಾಗಿದೆಯೇ ವಿನಾ 'ಹೊಂದಿರುವುದರ' ಸಂಕಥನವಾಗಿಲ್ಲ. ಈ ಬಗ್ಗೆ ಅವರು ತಮ್ಮ 'ಬಡತನ ಮತ್ತು ಕ್ಷಾಮ' (1981) ಎಂಬ ಪ್ರಸಿದ್ಧ ಗ್ರಂಥದಲ್ಲಿ ಹೀಗೆ ಬರೆಯುತ್ತಾರೆ:

''ಉಣ್ಣಲು ಸಾಕಷ್ಟು ಆಹಾರವಿಲ್ಲದ ಕೆಲವರ ವಿಶಿಷ್ಟ ಲಕ್ಷಣ ಹಸಿವಿನಿಂದ ಬಳಲುವುದು. ಅಂದರೆ, ಉಣ್ಣಲು ಸಾಕಷ್ಟು ಆಹಾರವಿಲ್ಲವೆಂಬುದು ಮೂಲ ಲಕ್ಷಣವಲ್ಲ.'' ಮುಂದುವರೆದು ಅವರು ಹೇಳುತ್ತಾರೆ: ''ಪ್ರತಿಯೊಂದು ಆಹಾರಧಾನ್ಯಕ್ಕೆ ಸಂಬಂಧಿಸಿದಂತೆಯೂ ಸರಬರಾಜಿನ ಅಂಕಿ-ಅಂಶದ ಹೇಳಿಕೆಗಳು ಲಭ್ಯವಿವೆ. ಆದರೆ ಹಸಿವಿನಿಂದ ಬಳಲುವುದರ ಬಗೆಗಿನ ಹೇಳಿಕೆಗಳು ಆ ಆಹಾರ ಪದಾರ್ಥದೊಂದಿಗಿನ ವ್ಯಕ್ತಿಗಳ ಸಂಬಂಧವನ್ನು ತಿಳಿಸುತ್ತದೆ.'' ಹಸಿವು ಕುರಿತಂತೆ ಸೇನ್ ಏನು ಹೇಳಿದ್ದಾರೊ ಅದನ್ನು ಅಭಿವೃದ್ಧಿಗೂ ಅನ್ವಯಿಸಿ ಹೇಳಬಹುದು. ''ಇರುವುದರಲ್ಲಿ'' ಅಭಿವೃದ್ಧಿಯನ್ನು ಕಾಣುವುದಕ್ಕೆ ಪ್ರತಿಯಾಗಿ ಸೇನ್ ಅವರು ''ಹೊಂದಿರುವುದರಲ್ಲಿ'' ಅದನ್ನು ಕಾಣಲು ಪ್ರಯತ್ನಿಸುತ್ತಾರೆ. ಜಾತಿ, ವರ್ಗ, ಲಿಂಗ ಮತ್ತು ಪ್ರದೇಶ ಮುಂತಾದ ಸಂಗತಿಗಳ ಆಧಾರದ ಮೇಲೆ ಖಂಡ-ತುಂಡವಾಗಿರುವ ನಮ್ಮ ಸಮಾಜದಲ್ಲಿ 'ಇರುವುದು' ಎಲ್ಲರಿಗೂ ಸಮಾನವಾಗಿ ದೊರೆಯುವುದು ಸಾಧ್ಯವಿಲ್ಲ ಎಂಬುದರ ಬಗ್ಗೆ ಸೇನ್ ನಮ್ಮ ಗಮನ ಸೆಳೆಯುತ್ತಿದ್ದಾರೆ. ಆದ್ದರಿಂದ ಅಭಿವೃದ್ಧಿಯನ್ನು ''ರಾಜಕೀಯ ಆರ್ಥಿಕತೆ''ಯ ನೆಲೆಯಿಂದ ಪೃಥಕ್ಕರಿಸುವ ಅವಶ್ಯಕತೆ ಇದೆ. ಜಾತಿ ಸ್ಥಾನಮಾನಕ್ಕೆ ಅನುಗುಣವಾಗಿ ಸಾಮಾಜಿಕ-ಆರ್ಥಿಕ ಸ್ಥಾನಮಾನಗಳು, ರಾಜಕೀಯ ಅಧಿಕಾರ, ಪ್ರಾಪ್ತವಾಗುವ ಪರಿಸ್ಥಿತಿ ಇಲ್ಲಿದೆ. ಅಭಿವೃದ್ಧಿಯ ಮೇಲೆ ವಿವಿಧ ಸಾಮಾಜಿಕ ಗುಂಪುಗಳು ಪಡೆದಿರುವ ಹಕ್ಕುದಾರಿಕೆಯನ್ನು ಇಲ್ಲಿ 'ರಾಜಕೀಯ ಆರ್ಥಿಕತೆ' ಎಂದು ಕರೆದಿದೆ.

ಕರ್ನಾಟಕದ ಸಂದರ್ಭದಲ್ಲಿ ಅಭಿವೃದ್ಧಿಯಿಂದ ವಂಚಿತರಾದ ಒಂದು ದೊಡ್ಡ ಜನ ವರ್ಗವಿದೆ. ಕರ್ನಾಟಕದ ಜನಸಂಖ್ಯೆಯನ್ನು, ಜನವರ್ಗವನ್ನು ಪರಿಶಿಷ್ಟ ಜಾತಿ (ಪ.ಜಾ), ಪರಿಶಿಷ್ಟ ಪಂಗಡ (ಪ.ಪಂ), ಅಲ್ಪಸಂಖ್ಯಾತರು, ಹಿಂದುಳಿದ ವರ್ಗ ಮತ್ತು ಇತರೆ ವರ್ಗ ಎಂಬ ವಿವಿಧ ಸಾಮಾಜಿಕ ಗುಂಪುಗಳಾಗಿ ವರ್ಗೀಕರಿಸಬಹುದು. ಅಭಿವೃದ್ಧಿಯ ಮೇಲೆ ವಿವಿಧ ಸಾಮಾಜಿಕ ಗುಂಪುಗಳು ವಿವಿಧ ಪ್ರಮಾಣದ ಹಕ್ಕುದಾರಿಕೆ ಪಡೆದಿದ್ದಾವೆ. ಸಾಮಾಜಿಕ ಗುಂಪು ಜಾತಿಯ ಏಣಿ ಶ್ರೇಣಿಯಲ್ಲಿ ಯಾವ ಸ್ಥಾನ ಪಡೆದಿದೆಯೋ ಅದಕ್ಕೆ ಅನುಗುಣವಾದ ಹಕ್ಕುದಾರಿಕೆಯನ್ನು ಅಭಿವೃದ್ಧಿಯ ಮೇಲೆ ಪಡೆದಿರುತ್ತವೆ. ಅಭಿವೃದ್ಧಿ ಪ್ರಕ್ರಿಯೆ ಹಾಗೂ ಸಾಮಾಜಿಕ ರಚನೆಗಳ ನಡುವೆ ಸೂಕ್ಷ್ಮ ಸಂಬಂಧಗಳಿರುತ್ತವೆ.

ಪರಿಶಿಷ್ಟ ಜನವರ್ಗ (ಪ.ಜಾ+ಪ.ಪಂ)ವು ಜಾತಿ ಏಣಿಶ್ರೇಣಿಯಲ್ಲಿ ಕೆಳಸ್ತರದಲ್ಲಿದೆ. ಸಹಜವಾಗಿ ಇದು ಆರ್ಥಿಕ ಒಡೆತನ ಹಾಗೂ ರಾಜಕೀಯ ಅಧಿಕಾರಗಳಿಂದ ವಂಚಿತವಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಕರ್ನಾಟಕದ ಅಭಿವೃದ್ಧಿಗೆ ಸಂಬಂಧಿಸಿದ ಶಿಷ್ಟ-ಪರಿಶಿಷ್ಟ ನೆಲೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಸಾಮಾಜಿಕವಾಗಿ ದುಸ್ಥಿತಿಯಲ್ಲಿರುವ, ಅಧೀನ ಸ್ಥಿತಿಯಲ್ಲಿರುವ ಮತ್ತೊಂದು ದೊಡ್ಡ ವರ್ಗವೆಂದರೆ ಮಹಿಳೆಯರು. ಜನಸಂಖ್ಯೆಯಲ್ಲಿ, ಮತದಾರರಲ್ಲಿ, ಸರಿಸುಮಾರು ಅರ್ಧದಷ್ಟು, ದುಡಿಮೆಗಾರ ವರ್ಗದಲ್ಲಿ ಸರಿಸುಮಾರು ಮೂರನೇ ಒಂದರಷ್ಟು ಇರುವ ಮಹಿಳೆಯರು ತೀವ್ರ ಸ್ವರೂಪದ ತಾರತಮ್ಯವನ್ನು, ಸಾಮಾಜಿಕ ಅನ್ಯಾಯವನ್ನು ಮತ್ತು ಅಪಾಯವನ್ನು ಎದುರಿಸುತ್ತಿದ್ದಾರೆ. ಅವರ ದುಡಿಮೆಯು ದುಡಿಮೆಯಲ್ಲ. ಅದು ಕೇವಲ ಜೈವಿಕ ಚಟುವಟಿಕೆ. ಮಹಿಳೆಯರು ಅನುಭವಿಸುತ್ತಿರುವ ತಾರತಮ್ಯ, ಪಕ್ಷಪಾತ, ಅನ್ಯಾಯ, ದಮನ, ಹತ್ಯೆ ಎಲ್ಲವನ್ನೂ 'ಜೈವಿಕತೆ'ಗೆ ಆರೋಪಿಸಿ 'ಪುರುಷಶಾಹಿ'ಯು ಮೆರೆಯುತ್ತಿದೆ. ಅಭಿವೃದ್ಧಿಗೆ ಸಂಬಂಧಿಸಿದ ಜ್ಞಾನಶಿಸ್ತುಗಳಾದ ಅರ್ಥಶಾಸ್ತ್ರ ಸಮಾಜಶಾಸ್ತ್ರ ರಾಜ್ಯಶಾಸ್ತ್ರಗಳು ಪುರುಷಶಾಹಿತ್ವವನ್ನು ತಮ್ಮ ಮೇಲೆ ಆರೋಪಿಸಿಕೊಂಡುಬಿಟ್ಟಿವೆ. ಲಿಂಗತಾರತಮ್ಯಗಳು ಸಮಾಜಕ್ಕಂಟಿಕೊಂಡ ಒಂದು ವಿಕೃತಿ ಎಂಬುದನ್ನು ಜ್ಞಾನಶಿಸ್ತುಗಳು ಇನ್ನೂ ಒಪ್ಪಿಕೊಳ್ಳಲು ಸಿದ್ಧವಿಲ್ಲ. ಆದ್ದರಿಂದ ಅಧ್ಯಯನದಲ್ಲಿ ಲಿಂಗಸಂಬಂಧದ ಆಯಾಮವನ್ನೂ ಗುರುತಿಸಬೇಕಾಗುತ್ತದೆ.

ಅಭಿವೃದ್ಧಿಯಲ್ಲಿನ ಪ್ರಾದೇಶಿಕ ಅಂತರ-ಅಸಮಾನತೆ ಕುರಿತ ಸಂಗತಿಗಳು ಇಂದು ಕರ್ನಾಟಕದ ಸಂದರ್ಭದಲ್ಲಿ ಚರ್ಚೆಯ ಮುಂಚೂಣಿಗೆ ಬಂದಿವೆ. ಇತ್ತೀಚೆಗೆ ಕರ್ನಾಟಕ ಸರ್ಕಾರದ ಯೋಜನಾ ವಿಭಾಗವು ಪ್ರಕಟಿಸಿರುವ 'ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ-1999' ಎಂಬ ವರದಿಯಲ್ಲಿ ಕರ್ನಾಟಕದ 20 ಜಿಲ್ಲೆಗಳ ಪೈಕಿ ನಿಜವಾಗಿ ಅಭಿವೃದ್ಧಿ ಸಂಬಂಧಿ ದುಸ್ಥಿತಿಯಿಂದ ನರಳುತ್ತಿರುವ ಐದು ಜಿಲ್ಲೆಗಳನ್ನು ಸ್ಪಷ್ಟವಾಗಿ ಗುರುತಿಸಿದೆ. ಈ ಐದು ಜಿಲ್ಲೆಗಳು ಯಾವುವೆಂದರೆ ಬಿಜಾಪುರ, ಬಳ್ಳಾರಿ, ಬೀದರ್, ಗುಲ್ಬರ್ಗಾ ಮತ್ತು ರಾಯಚೂರು. ಇಡೀ ಉತ್ತರ ಕರ್ನಾಟಕ ಪ್ರದೇಶವೇ ಹಿಂದುಳಿದಿದೆ ಎಂಬ ಸಂಗತಿಯನ್ನು ವರದಿಯು ಹುಸಿಗೊಳಿಸಿದೆ. ಅಭಿವೃದ್ಧಿಯ ಪ್ರಾದೇಶಿಕ ಸ್ವರೂಪವನ್ನು ಪರಾಮರ್ಶಿಸುವುದು ಇದರಿಂದ ಅಗತ್ಯವಾಗುತ್ತದೆ.

### ಅಭಿವೃದ್ಧಿಯ ಶಿಷ್ಟ-ಪರಿಶಿಷ್ಟ ನೆಲೆಗಳು

ಈಗಾಗಲೇ ತಿಳಿಸಿರುವಂತೆ ಕರ್ನಾಟಕದಲ್ಲಿ ತೀವ್ರ ದುಸ್ಥಿತಿಯಿಂದ ನರಳುತ್ತಿರುವ ಜನವರ್ಗವೆಂದರೆ ಪರಿಶಿಷ್ಟರು. ಕರ್ನಾಟಕದ ಜನಸಂಖ್ಯೆಯಲ್ಲಿ (449.77 ಲಕ್ಷ) ಪರಿಶಿಷ್ಟ ಜನಸಂಖ್ಯೆಯ (92.84 ಲಕ್ಷ) ಪ್ರಮಾಣ ಶೇ. 20.64ರಷ್ಟಿದೆ. ಅಭಿವೃದ್ಧಿಯ ಮೇಲೆ ಇವರ ಹಕ್ಕುದಾರಿಕೆ ನಿಕೃಷ್ಟತಮವಾಗಿದೆ. ಈ ಸಾಮಾಜಿಕ ಗುಂಪು ಜಾತಿ ಸಂಬಂಧಿ ಏಣಿಶ್ರೇಣಿ, ಸಾಮಾಜಿಕ ತಾರತಮ್ಯ, ಆರ್ಥಿಕ ದಮನ-ದುಸ್ಥಿತಿಯಿಂದ ನರಳುತ್ತಿದೆ. ವರ್ಗ ಸಂಬಂಧಿ ಅಸಮಾನತೆಯಿಂದಲೂ ಅವರು ಬಳಲುತ್ತಿದ್ದಾರೆ. ಅಭಿವೃದ್ಧಿಗೆ ಇವರ ಕಾಣಿಕೆ ಅಪಾರ. ಆದರೆ ಅಭಿವೃದ್ಧಿಯಿಂದ ಇವರಿಗೆ ಪ್ರಾಪ್ತವಾಗುತ್ತಿರುವ

ಫಲ ಕ್ವಚಿತ್ತಾಗಿದೆ. ಮೂರು ಮುಖ್ಯ ಸೂಚಿಗಳ ಮೂಲಕ ಇಲ್ಲಿ ಶಿಷ್ಟ-ಪರಿಶಿಷ್ಟ ನೆಲೆಗಳನ್ನು ಗುರುತಿಸಬಹುದು.

1. ಸಾಮಾಜಿಕ ಮತ್ತು ಆರ್ಥಿಕ ಪ್ರತಿಷ್ಠೆಯ ಒಂದು ಸಾಧನ ಭೂ ಒಡೆತನ. ಅನಾದಿಕಾಲದಿಂದಲೂ ಜಾತಿ ಏಣಿಶ್ರೇಣಿಯಲ್ಲಿ ಉನ್ನತ ಸ್ತರದಲ್ಲಿರುವ ಜನವರ್ಗವು ಭೂಮಾಲಿಕತ್ವದ ಮೇಲೆ ಏಕಸ್ವಾಮ್ಯವನ್ನು ಸ್ಥಾಪಿಸಿಕೊಂಡು ಬಂದಿದೆ. ಇಂದಿಗೂ ಅದು ಮುಂದುವರೆದಿದೆ. ಕರ್ನಾಟಕದ ಜನಸಂಖ್ಯೆಯಲ್ಲಿ ಶೇ. 20.64ರಷ್ಟಿರುವ ಪರಿಶಿಷ್ಟರು ರಾಜ್ಯದ ಒಟ್ಟು ಸಾಗುವಳಿದಾರರಲ್ಲಿ ಕೇವಲ ಶೇ. 17.29ರಷ್ಟು ಪಾಲು ಪಡೆದಿದ್ದಾರೆ. ಪರಿಶಿಷ್ಟ ದುಡಿಮೆಗಾರ ವರ್ಗದಲ್ಲಿ (38.84 ಲಕ್ಷ) ಭೂಮಾಲಿಕರ ಪ್ರಮಾಣ ಶೇ. 26.34. ಆದರೆ ಪರಿಶಿಷ್ಟೇತರರಿಗೆ ಸಂಬಂಧಿಸಿದಂತೆ ಸಾಗುವಳಿದಾರ/ಭೂಮಾಲಿಕತ್ವ ಹೊಂದಿರುವವರ ಪ್ರಮಾಣ ಶೇ. 36.49. ಕರ್ನಾಟಕ ರಾಜ್ಯದಲ್ಲಿರುವ ಒಟ್ಟು ಕೃಷಿ ಕಾರ್ಮಿಕರ ಸಂಖ್ಯೆ 49.99 ಲಕ್ಷ. ಇವರಲ್ಲಿ ಪರಿಶಿಷ್ಟರ ಪ್ರಮಾಣ ಶೇ. 37.59 (18.79 ಲಕ್ಷ). ಪರಿಶಿಷ್ಟ ಜನವರ್ಗದ ದುಡಿಮೆ ಸಹಭಾಗಿತ್ವ ಪ್ರಮಾಣ ಶೇ. 41.84. ಆದರೆ ಪರಿಶಿಷ್ಟೇತರರಲ್ಲಿ ಅದು ಕೇವಲ ಶೇ. 37.56. ಜನಸಂಖ್ಯೆಯಲ್ಲಿ ಪರಿಶಿಷ್ಟರ ಪ್ರಮಾಣ ಎಷ್ಟಿದೆಯೋ ಅದಕ್ಕಿಂತ ಕಡಿಮೆ ಪ್ರಮಾಣ ಸಾಗುವಳಿದಾರರಿಗೆ ಸಂಬಂಧಿಸಿದಂತೆ ಇದ್ದರೆ ಕೃಷಿ ಕಾರ್ಮಿಕರಿಗೆ ಸಂಬಂಧಿಸಿದಂತೆ ಪರಿಶಿಷ್ಟರ ಪ್ರಮಾಣವು ಅವರು ಜನಸಂಖ್ಯೆಯಲ್ಲಿ ಪಡೆದಿರುವು ದಕ್ಕಿಂತ ಅಧಿಕವಾಗಿದೆ.

ಆರ್ಥಿಕತೆಗೆ ಸಲ್ಲುವ ದುಡಿಮೆಯಲ್ಲಿ ಪರಿಶಿಷ್ಟರ ಕಾಣಿಕೆ ಅಪಾರ. ಅದರಲ್ಲೂ ಕೃಷಿ ಕ್ಷೇತ್ರದಲ್ಲಿ ಅವರ ಪಾಲು ಅಗಾಧ. ಆದರೆ ಅಭಿವೃದ್ಧಿಯಿಂದ ಈ ಜನವರ್ಗಕ್ಕೆ ಪ್ರಾಪ್ತವಾಗುವ ಪ್ರತಿಫಲ ಮಾತ್ರ ತುಂಬಾ ಕಡಿಮೆ. ಅಭಿವೃದ್ಧಿಯಲ್ಲಿ ಪರಿಶಿಷ್ಟರು ನಿಕೃಷ್ಟತಮ ಪಾಲುದಾರರಾಗಿದ್ದಾರೆ.

2. ಸಾಕ್ಷರತೆಯು ಅಭಿವೃದ್ಧಿಯ 'ಸಾಧನವೂ' ಹೌದು ಮತ್ತು ಅದು ಅಭಿವೃದ್ಧಿಯ ಸಾಧ್ಯವೂ (ಗುರಿ) ಹೌದು ಎಂಬ ಸಂಗತಿಯನ್ನು ಅಮರ್ತ್ಯ ಸೇನ್ ಸಾಧಿಸಿ ತೋರಿಸಿಕೊಟ್ಟಿದ್ದಾರೆ. ಅಭಿವೃದ್ಧಿಯ ಅಂತರ್ಗತ ಭಾಗ ಸಾಕ್ಷರತೆ ಎಂದು, ಸಾಕ್ಷರತೆಯೇ ಅಭಿವೃದ್ಧಿಯೆಂದು ಸೇನ್ ಅವರು ಪ್ರತಿಪಾದಿಸುತ್ತ ಬಂದಿದ್ದಾರೆ. ಕರ್ನಾಟಕದಲ್ಲಿ ಒಟ್ಟು ಸಾಕ್ಷರತೆ ಪ್ರಮಾಣ ಶೇ. 56.04. ಆದರೆ ಪರಿಶಿಷ್ಟ ಜನವರ್ಗದಲ್ಲಿ ಸಾಕ್ಷರತೆ ಶೇ. 37.65. ಆದರೆ ಪರಿಶಿಷ್ಟೇತರರಲ್ಲಿ ಸಾಕ್ಷರತೆ ಪ್ರಮಾಣ ಶೇ. 60.63.

ರಾಜ್ಯದ ಜನಸಂಖ್ಯೆಯಲ್ಲಿ ಶೇ. 20.64ರಷ್ಟಿರುವ ಪರಿಶಿಷ್ಟರು ರಾಜ್ಯದ ಒಟ್ಟು ಅಕ್ಷರಸ್ಥರಲ್ಲಿ ಕೇವಲ ಶೇ. 13.43ರಷ್ಟು ಪಾಲು ಪಡೆದಿದ್ದಾರೆ. ಆದರೆ ರಾಜ್ಯದ ಒಟ್ಟು ಅನಕ್ಷರಸ್ಥರಲ್ಲಿ ಪರಿಶಿಷ್ಟರ ಪಾಲು ಶೇ. 28.36ರಷ್ಟಿದೆ.

ಕರ್ನಾಟಕದಲ್ಲಿ ಪರಿಶಿಷ್ಟರಿಗೆ ಸಂಬಂಧಿಸಿದಂತೆ ಒಂದು ಆಶಾದಾಯಕ ಸಂಗತಿ ಇದೆ. ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳ ದಾಖಲಾತಿಗೆ ಸಂಬಂಧಿಸಿದಂತೆ ಪರಿಶಿಷ್ಟ ಮಕ್ಕಳ ಪ್ರಮಾಣ ಶೇ. 25.27ರಷ್ಟಿದೆ. 1998ರಲ್ಲಿ ಕರ್ನಾಟಕದ ಪ್ರಾಥಮಿಕ ಶಾಲೆಗಳಲ್ಲಿ ದಾಖಲಾದ ಒಟ್ಟು ಮಕ್ಕಳ ಸಂಖ್ಯೆ 83.46 ಲಕ್ಷ. ಇವರಲ್ಲಿ ಪರಿಶಿಷ್ಟ ಮಕ್ಕಳ ಸಂಖ್ಯೆ 21.09 ಲಕ್ಷ (ಶೇ. 25.27). ರಾಜ್ಯದ ಜನಸಂಖ್ಯೆಯಲ್ಲಿ ಪರಿಶಿಷ್ಟರ ಪ್ರಮಾಣ ಎಷ್ಟಿದೆಯೋ (ಶೇ. 20.64) ಅದಕ್ಕಿಂತಲೂ ಅಧಿಕ ಪ್ರಮಾಣದಲ್ಲಿ ಪರಿಶಿಷ್ಟ ಮಕ್ಕಳು ಪ್ರಾಥಮಿಕ ಶಾಲೆಯ ದಾಖಲಾತಿಯಲ್ಲಿ ಪ್ರಾತಿನಿಧ್ಯ ಪಡೆದಿದ್ದಾರೆ.

ಗ್ರಾಮೀಣ ಕರ್ನಾಟಕ

ಇದೇ ರೀತಿ ಸರ್ಕಾರಿ ಸೇವೆಯಲ್ಲಿ ಪರಿಶಿಷ್ಟ ಜನವರ್ಗಕ್ಕೆ ಶೇ. 18ರಷ್ಟು (ಶೇ. 15 + ಶೇ. 3) ಹುದ್ದೆಗಳನ್ನು ಮೀಸಲಿಡಲಾಗಿದೆ. 1995ರಲ್ಲಿ ಕರ್ನಾಟಕ ರಾಜ್ಯದ ನಾಗರಿಕ ಸೇವೆಯಲ್ಲಿದ್ದ ನೌಕರರ ಸಂಖ್ಯೆ 4.24 ಲಕ್ಷ. ಇವರಲ್ಲಿ ಪರಿಶಿಷ್ಟರ ಪ್ರಮಾಣ ಶೇ. 18.88 (0.80 ಲಕ್ಷ)ರಷ್ಟಿತ್ತು. ಹೀಗೆ ನಿಧಾನವಾಗಿ ಯಾದರೂ ನಮ್ಮ ರಾಜ್ಯದಲ್ಲಿ ಪರಿಶಿಷ್ಟರು ಅಭಿವೃದ್ಧಿಯ ಮೇಲೆ ತಮ್ಮ ಹಕ್ಕುದಾರಿಕೆ ಸ್ಥಾಪಿಸುತ್ತಿದ್ದಾರೆ. ಆದರೂ ಸಾಗಬೇಕಾದ ದಾರಿ ಬಹಳ ದೂರವಿದೆ.

3. ಕೃಷಿಯನ್ನು ಒಳಗೊಂಡಂತೆ ಪ್ರಾಥಮಿಕ ವಲಯವನ್ನು ದುಡಿಮೆಗಾರ ವರ್ಗ ಅಧಿಕವಾಗಿ ಯಾವ ಆರ್ಥಿಕತೆಯಲ್ಲಿ ಅವಲಂಬಿಸಿಕೊಂಡಿರುವುದೋ ಅಲ್ಲಿ ಆರ್ಥಿಕ ದುಸ್ಥಿತಿ ತೀವ್ರವಾಗಿರುತ್ತದೆ ಎನ್ನಲಾಗಿದೆ. ಕರ್ನಾಟಕದ ಆರ್ಥಿಕತೆಯಲ್ಲಿ ಪ್ರಾಥಮಿಕ ವಲಯವನ್ನು ಅವಲಂಬಿಸಿಕೊಂಡಿರುವ ದುಡಿಮೆಗಾರ ವರ್ಗದ ಪ್ರಮಾಣ ಶೇ. 67.37ರಷ್ಟಿದೆ. ಆದರೆ ಪರಿಶಿಷ್ಟರಲ್ಲಿ ಇದರ ಪ್ರಮಾಣ ಶೇ. 80.22 ರಷ್ಟಿದ್ದರೆ ಪರಿಶಿಷ್ಟೇತರರಲ್ಲಿ ಇದು ಶೇ. 63.64ರಷ್ಟಿದೆ. ಪ್ರಾಥಮಿಕೇತರ ವಲಯಗಳ ಚಟುವಟಿಕೆಗಳಾದ ಉದ್ದಿಮೆ, ಬ್ಯಾಂಕಿಂಗ್, ಸಾರಿಗೆ, ಸಂಪರ್ಕ, ವ್ಯಾಪಾರ, ವಾಣಿಜ್ಯ, ಪ್ರವಾಸೋದ್ಯಮ ಮುಂತಾದವುಗಳ ಅವಲಂಬನೆ ಪರಿಶಿಷ್ಟರಲ್ಲಿ ಶೇ. 19.78ರಷ್ಟಿದ್ದರೆ ಪರಿಶಿಷ್ಟೇತರರಲ್ಲಿ ಅದು ಶೇ. 36.34ರಷ್ಟಿದೆ.

ಸಾಮಾನ್ಯವಾಗಿ ತಿಳಿದಿರುವಂತೆ ಪ್ರಾಥಮಿಕ ವಲಯದಲ್ಲಿ ತಲಾ ಉತ್ಪನ್ನದ ಪ್ರಮಾಣವು ಪ್ರಾಥಮಿಕೇತರ ವಲಯದಲ್ಲಿನ ತಲಾ ಉತ್ಪನ್ನದ ಪ್ರಮಾಣಕ್ಕಿಂತ ಕಡಿಮೆ ಇರುತ್ತದೆ. ಕರ್ನಾಟಕಕ್ಕೆ ಸಂಬಂಧಿಸಿದಂತೆ 1995-96ರಲ್ಲಿ ಪ್ರಾಥಮಿಕ ವಲಯದಲ್ಲಿದ್ದ ತಲಾ ಉತ್ಪನ್ನ (ಚಾಲ್ತಿ ಬೆಲೆಗಳಲ್ಲಿ) ರೂ. 2700. ಆದರೆ ಪ್ರಾಥಮಿಕೇತರ ವಲಯದಲ್ಲಿ ತಲಾ ಉತ್ಪನ್ನವು ರೂ. 10,247. ಮೇಲಿನ ವಿವರದಿಂದ ಸಮಾಜದ ಯಾವ ವರ್ಗದ ಜನರು ಪ್ರಾಥಮಿಕೇತರ ವಲಯ ಪ್ರವೇಶಿಸುತ್ತಿದ್ದಾರೆ ಮತ್ತು ವರಮಾನದಲ್ಲಿ ಹೆಚ್ಚು ಪಾಲು ಪಡೆಯುತ್ತಿದ್ದಾರೆ ಎಂಬುದು ತಿಳಿಯುತ್ತದೆ. ಪರಿಶಿಷ್ಟರು ಪ್ರಾಥಮಿಕ ವಲಯದ ಚಟುವಟಿಕೆಗಳಿಗೆ ಮುಗಿಬಿದ್ದಿದ್ದಾರೆ ಎಂದರೆ ಅವರಲ್ಲಿ ಬಡತನ-ಹಸಿವು-ದುಸ್ಥಿತಿ ಮುಂತಾದವುಗಳ ತೀವ್ರತೆ ಅಧಿಕವಾಗಿದೆ ಎಂದೇ ಅರ್ಥ.

ಅಭಿವೃದ್ಧಿಯನ್ನು ಒಂದು ಅಖಂಡ ಪ್ರಕ್ರಿಯೆಯಾಗಿ ನೋಡುವುದಕ್ಕೆ ಪ್ರತಿಯಾಗಿ ಖಂಡರೂಪಿ ವಿಧಾನದಲ್ಲಿ ಪೃಥಕ್ಕರಿಸಿದಾಗ ನಮಗೆ ಅದರ ಅಸಮಾನತೆಯ ಸೂಕ್ಷ್ಮ ನೆಲೆಗಳ ದರ್ಶನವಾಗುತ್ತದೆ. ಅಭಿವೃದ್ಧಿಯು ವಾಸ್ತವವಾಗಿ ಅಧಿಕಾಧಿಕವಾಗಿ ಫಲಗಳನ್ನು ಪರಿಶಿಷ್ಟ ಜನವರ್ಗಕ್ಕೆ ಒದಗಿಸಬೇಕು. ಅಭಿವೃದ್ಧಿಯಿಂದ ವಂಚಿತರಾದ ಪರಿಶಿಷ್ಟ ಜನವರ್ಗದ ಹಕ್ಕುದಾರಿಕೆಯನ್ನು ಸದೃಢಗೊಳಿಸಬೇಕಾಗಿದೆ. ಅದು ಸಾಮಾಜಿಕ ನ್ಯಾಯ.

**ಅಭಿವೃದ್ಧಿಯ ಲಿಂಗಸಂಬಂಧಿ ಆಯಾಮಗಳು**

ಪುರುಷಶಾಹಿಯು ವಿಜೃಂಭಿಸುತ್ತಿರುವ ನಮ್ಮ ಸಮಾಜದಲ್ಲಿ ಅಭಿವೃದ್ಧಿಯು ಲಿಂಗವಿಮುಖಿಯಾಗಿದ್ದರೆ ಮತ್ತು ಅದು ಏಕಲಿಂಗಿ ಪ್ರಕ್ರಿಯೆಯಾಗಿ ಪರಿಣಮಿಸಿದ್ದರೆ ಅದರಲ್ಲಿ ಆಶ್ಚರ್ಯಪಡಬೇಕಾದ ಸಂಗತಿ ಏನಿಲ್ಲ. ಅಭಿವೃದ್ಧಿ ಸಂಬಂಧಿ ಜ್ಞಾನ ಶಿಸ್ತುಗಳಾದ ಅರ್ಥಶಾಸ್ತ್ರ ಸಮಾಜಶಾಸ್ತ್ರ, ರಾಜ್ಯಶಾಸ್ತ್ರ ಮುಂತಾದವು ಲಿಂಗನಿರಪೇಕ್ಷ ಧೋರಣೆ ತಳೆದುಬಿಟ್ಟಿವೆ. 'ಜೈವಿಕ ನಿಯತಿ'ಯಲ್ಲಿ ನಂಬಿಕೆಯಿಟ್ಟಿರುವ ಸದರಿ ಜ್ಞಾನಶಿಸ್ತುಗಳು ಮಹಿಳೆಯರನ್ನು ಅಬಲೆಯರೆಂದು, ಅಶಕ್ತರೆಂದು, ಅವರ ಕಾರ್ಯಕ್ಷೇತ್ರ ಕೇವಲ ಕೌಟುಂಬಿಕ ಚೌಕಟ್ಟು ಎಂದು ನಿರ್ಣಯಿಸಿ ಬಿಟ್ಟಿವೆ. ಮಹಿಳೆಯರ ದುಡಿಮೆಯನ್ನು ದುಡಿಮೆಯೆಂದು ಪರಿಗಣಿಸದೆ ಅವರ ದುಡಿಮೆಯು ಪ್ರಕೃತಿಗೆ ಹೆಚ್ಚು ಸನಿಹವಾಗಿರುವುದರಿಂದ ಕೇವಲ ಜೈವಿಕ ಚಟುವಟಿಕೆ ಎನಿಸಿಕೊಂಡಿದೆ. ಈ ಕಾರಣದಿಂದಾಗಿ ಅಭಿವೃದ್ಧಿಯು ಮಹಿಳೆಯರ ಹಿತಾಸಕ್ತಿಗಳನ್ನು ಕಾಪಾಡುವುದಕ್ಕೆ ಪ್ರತಿಯಾಗಿ ಅದು ಅವರ ಬದುಕಿಗೆ ಮಾರಕವಾಗಿರುವ ದುರಂತ ನಮ್ಮ ಎದುರಿಗಿದೆ.

ಅಮರ್ತ್ಯ ಸೇನ್ ಹೇಳುವಂತೆ ಬದುಕಿನ ಎಲ್ಲ

**ಫೀನಿಕ್ಸ್**

ನಮ್ಮ ಜಡವ್ಯವಸ್ಥೆ
ಉರಿದು ಬೂದಿಯಾಗಿ,
ಅದರಿಂದ ಹೊರಹೊಮ್ಮಲಿ
ನವಸಮಾಜ,
ಫೀನಿಕ್ಸ್ ಪಕ್ಷಿಯಾಗಿ !

-ಸಿ.ಪಿ.ಕೆ.



ಮುಖಗಳಲ್ಲೂ ಅವರು ಒಂದೋ ಕಾಣೆಯಾಗಿದ್ದಾರೆ, ಕಳೆದು ಹೋಗುತ್ತಿದ್ದಾರೆ, 'ಇಲ್ಲ'ವಾಗುತ್ತಿದ್ದಾರೆ. ಇಲ್ಲವೇ 'ದೈನೇಸಿ' ಬದುಕು ಸಾಗಿಸುತ್ತಿದ್ದಾರೆ. ಹೆಣ್ಣು ಭ್ರೂಣವಾಗಿ ತಾಯಿ ಗರ್ಭ ಸೇರಿದಾಗಿನಿಂದ, ಅಂತಿಮವಾಗಿ ಭೂಮಿಯ ಗರ್ಭ ಸೇರುವವರೆಗೆ ತಾರತಮ್ಯ, ಪಕ್ಷಪಾತ, ಭರ್ತ್ಸನೆ ಮತ್ತು ನಿರ್ಲಕ್ಷ್ಯಕ್ಕೆ ಒಳಗಾಗುತ್ತಿದ್ದಾಳೆ. ಜನಸಂಖ್ಯೆಯಲ್ಲಿ ಮಹಿಳೆಯರ ಸಾಪೇಕ್ಷ ಪ್ರಮಾಣವು ಕಡಿಮೆಯಾಗುತ್ತಿರುವ ಸಂಗತಿಯನ್ನು ಅಮರ್ತ್ಯ ಸೇನ್ ಲಿಂಗ ಅಸಮಾನತೆಯ, ಲಿಂಗ ತಾರತಮ್ಯದ ಅಳತೆಗೋಲಾಗಿ ಬಳಸುತ್ತಾರೆ. ಕರ್ನಾಟಕದಲ್ಲಿ 1981ರಲ್ಲಿ ಲಿಂಗ ಪರಿಮಾಣ 1000:963 ಇತ್ತು. 1991ರಲ್ಲಿ ಅದು 960ಕ್ಕೆ ಇಳಿದಿದೆ. 1991ರಲ್ಲಿದ್ದ ಮಹಿಳೆಯರ ಸಂಖ್ಯೆ 220.25 ಲಕ್ಷ ಮತ್ತು ಪುರುಷರ ಸಂಖ್ಯೆ 229.52 ಲಕ್ಷ. ಒಂದು ವೇಳೆ ಲಿಂಗ ಪರಿಮಾಣವು 1991ರಲ್ಲಿ 960ಕ್ಕೆ ಪ್ರತಿಯಾಗಿ 1981ರಲ್ಲಿ ಇದ್ದ 963 ಆಗಿದ್ದರೆ, ಆಗ 1991ರಲ್ಲಿ ಮಹಿಳೆಯರ ಸಂಖ್ಯೆ 221.03 ಲಕ್ಷವಾಗುತ್ತಿತ್ತು. ಅಂದರೆ ಲಿಂಗ ಪರಿಮಾಣದ ಕುಸಿತದಿಂದ ಕರ್ನಾಟಕದಲ್ಲಿ 1981ರಿಂದ 1991ರ ಅವಧಿಯಲ್ಲಿ ಸುಮಾರು 78000 ಮಹಿಳೆಯರು ಕಾಣೆಯಾಗಿದ್ದಾರೆ.

**ಮರಣ ಪ್ರಮಾಣದಲ್ಲಿ ತಾರತಮ್ಯ**

ಜೈವಿಕವಾಗಿ, ಪ್ರತಿಕೂಲ ಸಂದರ್ಭದಲ್ಲಿ ಬದುಕುಳಿಯುವ ಸಾಮರ್ಥ್ಯ ಪುರುಷರಿಗಿಂತ ಮಹಿಳೆಯರಿಗೆ ಅಧಿಕ ಎಂದು ಹೇಳಲಾಗಿದೆ. ಆದರೆ ಕರ್ನಾಟಕದಲ್ಲಿ 35-40 ವರ್ಷದವರೆಗೆ ಮಹಿಳೆಯರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಅಧಿಕವಿರುವುದು ಲಿಂಗ ತಾರತಮ್ಯ, ಲಿಂಗ ಅಸಮಾನತೆಯ ಸೂಚನೆ ಎನ್ನುತ್ತಾರೆ ಅಮರ್ತ್ಯ ಸೇನ್. 5 ರಿಂದ 34 ನೆಯ ವಯೋಮಾನದಲ್ಲಿ ಮಹಿಳೆಯರ ಮರಣ ಪ್ರಮಾಣ 1992ರಲ್ಲಿ 2.75 ಇದ್ದರೆ ಪುರುಷರ ಮರಣ ಪ್ರಮಾಣ ಇದೇ ವಯೋಮಾನದಲ್ಲಿ 2.15ರಷ್ಟಿದೆ. ಶಿಶುಮರಣ ಪ್ರಮಾಣಕ್ಕೆ ಸಂಬಂಧಿಸಿದಂತೆ ಲಿಂಗತಾರತಮ್ಯವು ಏಳು ಜಿಲ್ಲೆಗಳಲ್ಲಿದ್ದರೆ 5 ವರ್ಷಕ್ಕಿಂತ ಕಿರಿಯ ಮಕ್ಕಳ ಮರಣ ಪ್ರಮಾಣಕ್ಕೆ ಸಂಬಂಧಿಸಿದಂತೆ ಲಿಂಗತಾರತಮ್ಯವು 12 ಜಿಲ್ಲೆಗಳಲ್ಲಿ ಕಂಡುಬಂದಿದೆ. ಮಹಿಳೆಯರ ವಯಸ್ಸು ಏರಿದಂತೆ ಅವರು ಬದುಕುಳಿಯುವ ಪ್ರಮಾಣ ಕಡಿಮೆಯಾಗುತ್ತ ನಡೆಯುತ್ತದೆ. ಗಮನಿಸಬೇಕಾದ ಸಂಗತಿಯೆಂದರೆ ಕೇವಲ 35ನೆಯ ವರ್ಷದವರೆಗೆ ಮಾತ್ರ ಮಹಿಳೆಯರು ತೀವ್ರ ತಾರತಮ್ಯವನ್ನು ಎದುರಿಸಬೇಕಾಗುತ್ತದೆ.

ಸಾಕ್ಷರತೆಗೆ ಸಂಬಂಧಿಸಿದಂತೆ ತೀವ್ರತರವಾದ ಲಿಂಗ ತಾರತಮ್ಯಗಳು ಕಂಡುಬರುತ್ತವೆ. ಪುರುಷರ ಸಾಕ್ಷರತೆ ಶೇ. 67.21ರಷ್ಟಿದ್ದರೆ ಮಹಿಳೆಯರ ಸಾಕ್ಷರತೆ ಶೇ. 44.34ರಷ್ಟಿದೆ. ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರ ಸಾಕ್ಷರತೆ ಕೇವಲ ಶೇ. 34.76. ಪರಿಶಿಷ್ಟ ಮಹಿಳೆಯರಲ್ಲಿ ಸಾಕ್ಷರತೆ ಪ್ರಮಾಣ ಶೇ. 25.46. ರಾಜ್ಯದ ಜನಸಂಖ್ಯೆಯಲ್ಲಿ ಸುಮಾರು ಅರ್ಧದಷ್ಟಿರುವ ಮಹಿಳೆಯರು ಅಕ್ಷರಸ್ಥರ ಸಂಖ್ಯೆಯಲ್ಲಿ ಮಾತ್ರ ಕೇವಲ ಶೇ. 38.74 ಪಾಲು ಪಡೆದಿದ್ದಾರೆ. ಆದರೆ ರಾಜ್ಯದ ಒಟ್ಟು ಅನಕ್ಷರಸ್ಥರಲ್ಲಿ ಶೇ. 62ರಷ್ಟು ಮಹಿಳೆಯರಿದ್ದಾರೆ.

ಕರ್ನಾಟಕ ರಾಜ್ಯದಲ್ಲಿ ಕೃಷಿಯಲ್ಲಿ ದುಡಿಯುತ್ತಿರುವ ದುಡಿಮೆಗಾರರ ಸಂಖ್ಯೆ 49.99 ಲಕ್ಷ. ಇವರಲ್ಲಿ ಮಹಿಳೆಯರ ಪ್ರಮಾಣ ಶೇ. 49.77. ನಮ್ಮ ಆರ್ಥಿಕತೆಯ ಬೆನ್ನೆಲುಬು ಕೃಷಿಯಾಗಿದ್ದರೆ, ಅದಕ್ಕೆ ಬೆನ್ನೆಲುಬು ಮಹಿಳಾ ಕೃಷಿ ಕಾರ್ಮಿಕರಾಗಿದ್ದಾರೆ. ಮಹಿಳೆಯರಿಗೆ ಸಂಬಂಧಿಸಿದಂತೆ ಕೃಷಿಯ ಅವಲಂಬನೆ ಶೇ. 75.40ರಷ್ಟಾದರೆ ಪುರುಷರಲ್ಲಿ ಕೇವಲ ಶೇ. 58.12.

ಮಹಿಳೆಯರ ದುಡಿಮೆ ಮೂರು ಬಗೆಯದಾಗಿರುತ್ತದೆ. ಮೊದಲನೆಯದು ಉತ್ಪನ್ನಕಾರಕ ದುಡಿಮೆ. ಎರಡನೆಯದು ಕೌಟುಂಬಿಕ ದುಡಿಮೆ. ಮೂರನೆಯದು ಸಂತಾನೋತ್ಪತ್ತಿ ದುಡಿಮೆ. ಈ ಮೂರರಲ್ಲಿ ಕೊನೆಯ ಎರಡು ಬಗೆಯ ದುಡಿಮೆ ಅದೃಶ್ಯರೂಪದಲ್ಲಿ ಹಾಗೂ ಕ್ರಮರಹಿತ ರೂಪದಲ್ಲಿ ಇರುತ್ತದೆ. ಒಂದು ದಿನದ 24 ಗಂಟೆಗಳಲ್ಲಿ ಹೆಚ್ಚು ಗಂಟೆಗಳ ಕಾಲ ದುಡಿಯುವವರು ಮಹಿಳೆಯರಾಗಿದ್ದಾರೆ. ಹೀಗಾಗಿ ಎಂಟು ಗಂಟೆಗಳ ದುಡಿಮೆ ದಿನಗಳ ದೃಷ್ಟಿಯಿಂದ ಮಹಿಳೆಯರು, ಅದರಲ್ಲೂ ಕೃಷಿಯಲ್ಲಿ ಕೂಲಿಯಾಳುಗಳಾಗಿ ದುಡಿಯುವ ಹೆಣ್ಣುಮಕ್ಕಳು, ಪ್ರತಿದಿನ 'ಎರಡು ದುಡಿಮೆ ದಿನ'ಗಳನ್ನು ಬದುಕುತ್ತಿದ್ದಾರೆ.

**ಅಭಿವೃದ್ಧಿಯ ಪ್ರಾದೇಶಿಕ ನೆಲೆಗಳು**

ಕರ್ನಾಟಕದಲ್ಲಿ ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಂತರ-ಅಸಮಾನತೆಗಳನ್ನು ಕುರಿತಂತೆ ಇತ್ತೀಚೆಗೆ ತೀವ್ರ ಚರ್ಚೆಗಳು ಶುರುವಾಗಿವೆ, ಉಗ್ರರೂಪದ ವಾದಗಳು ಮಂಡಿತವಾಗತೊಡಗಿವೆ, ಚಳುವಳಿ ಸಂಘಟಿತವಾಗುತ್ತಿದೆ. ಕರ್ನಾಟಕದ ಸಂದರ್ಭದಲ್ಲಿ ಅಭಿವೃದ್ಧಿಯಲ್ಲಿನ ಅಸಮಾನತೆಗಳು ಅದರ ಹುಟ್ಟಿನಲ್ಲೇ ಅಂತರ್ಗತವಾಗಿ ಬಂದಿವೆ. 1956ರಲ್ಲಿ ನಮ್ಮ ರಾಜ್ಯ ಉದಯವಾದಾಗ

**ಕರ್ನಾಟಕದಲ್ಲಿ ಹಿಂದುಳಿದಿರುವ ಜಿಲ್ಲೆಗಳು 1991** (ಪಟ್ಟಿ-1)

| ಕ್ರಸಂ. ವಿವರಗಳು | ಮಾನದಂಡ | ಜಿಲ್ಲೆಗಳ ಹೆಸರುಗಳು |
|---|---|---|
| 1. ಒಟ್ಟು ಸಂತಾನೋತ್ಪತ್ತಿ ಪ್ರಮಾಣ 1991 | > 4 | ಬಿಜಾಪುರ, ಬಳ್ಳಾರಿ, ಬೀದರ್, ಗುಲಬರ್ಗಾ ಮತ್ತು ರಾಯಚೂರು |
| 2. ಒಟ್ಟು ಜನನ ಪ್ರಮಾಣ 1991 | > 30 | ಬಿಜಾಪುರ, ಬಳ್ಳಾರಿ, ಗುಲಬರ್ಗಾ, ಹಾಸನ ಮತ್ತು ರಾಯಚೂರು |
| 3. ಒಟ್ಟು ಮರಣ ಪ್ರಮಾಣ 1991 | > 9 | ಬಿಜಾಪುರ, ಬಳ್ಳಾರಿ, ಬೀದರ್, ಧಾರವಾಡ, ಗುಲಬರ್ಗಾ, ಮಂಡ್ಯ ಮತ್ತು ರಾಯಚೂರು |
| 4. ಮಾನವ ಅಭಿವೃದ್ಧಿ ಸೂಚ್ಯಂಕ 1991 | < 0.450 | ಬೀದರ್, ಬಳ್ಳಾರಿ, ಗುಲಬರ್ಗಾ ಮತ್ತು ರಾಯಚೂರು |
| 5. ಲಿಂಗ ಸಂಬಂಧಿ ಅಭಿವೃದ್ಧಿ ಸೂಚ್ಯಂಕ 1991 | < 0.425 | ಬಿಜಾಪುರ, ಬಳ್ಳಾರಿ, ಬೀದರ್, ಗುಲಬರ್ಗಾ, ಮೈಸೂರು ಮತ್ತು ರಾಯಚೂರು |
| 6. ಮಹಿಳೆಯರ ಸಾಕ್ಷರತೆ 1991 | < ಶೇ. 35 | ಬಳ್ಳಾರಿ, ಗುಲಬರ್ಗಾ ಮತ್ತು ರಾಯಚೂರು |
| 7. ಸಾಕ್ಷರತೆಯಲ್ಲಿ ಲಿಂಗವಾರು ಅಂತರಗಳು 1991 | > ಶೇ. 20 | ಬೆಳಗಾವಿ, ಬಿಜಾಪುರ, ಬಳ್ಳಾರಿ, ಬೀದರ್, ಗುಲಬರ್ಗಾ ಮತ್ತು ರಾಯಚೂರು |
| 8. ಒಟ್ಟು ದುಡಿಮೆಗಾರ ವರ್ಗದಲ್ಲಿ ಕೃಷಿ ಕಾರ್ಮಿಕರ ಪ್ರಮಾಣ | > ಶೇ. 40 | ಬಿಜಾಪುರ, ಬಳ್ಳಾರಿ, ಬೀದರ್, ಗುಲಬರ್ಗಾ ಮತ್ತು ರಾಯಚೂರು |
| 9. ಒಟ್ಟು ಕೃಷಿ ಕಾರ್ಮಿಕರಲ್ಲಿ ಮಹಿಳೆಯರ ಪ್ರಮಾಣವು ಪುರುಷರ ಪ್ರಮಾಣಕ್ಕಿಂತ ಅಧಿಕವಾಗಿರುವುದು. | > ಶೇ. 50 | ಬಿಜಾಪುರ, ಬಳ್ಳಾರಿ, ಬೀದರ್, ಚಿತ್ರದುರ್ಗ, ಗುಲಬರ್ಗಾ, ರಾಯಚೂರು ಮತ್ತು ತುಮಕೂರು |
| 10. ಬಡತನದ ರೇಖೆ ಕೆಳಗೆ ಜೀವಿಸುವ ಜನರ ಪ್ರಮಾಣ | > ಶೇ. 45 | ಬಳ್ಳಾರಿ, ಬೀದರ್, ಧಾರವಾಡ, ಗುಲಬರ್ಗಾ ಮತ್ತು ಕೋಲಾರ |
| 11. ಜಿಲ್ಲಾ ಜನಸಂಖ್ಯೆಯಲ್ಲಿ 0-6 ವಯೋಮಾನದ ಮಕ್ಕಳ ಪ್ರಮಾಣ | > ಶೇ. 20 | ಬೀದರ್, ಬಳ್ಳಾರಿ, ಗುಲಬರ್ಗಾ ಮತ್ತು ರಾಯಚೂರು |
| 12. ಹೆಣ್ಣುಮಕ್ಕಳ ವಿವಾಹದ ವಯಸ್ಸು | < 19 ವರ್ಷಗಳು | ಬೆಳಗಾವಿ, ಬಿಜಾಪುರ, ಬೀದರ್, ಗುಲಬರ್ಗಾ ಮತ್ತು ರಾಯಚೂರು |

ಅಭಿವೃದ್ಧಿಯಲ್ಲಿ ವಿವಿಧ ಮಟ್ಟದಲ್ಲಿದ್ದ ಪ್ರದೇಶಗಳು ಕರ್ನಾಟಕದಲ್ಲಿ ವಿಲೀನಗೊಂಡವು. ದಕ್ಷಿಣ ಕರ್ನಾಟಕ, ಮುಂಬೈ ಕರ್ನಾಟಕ, ಹೈದರಾಬಾದ್ ಕರ್ನಾಟಕ, ಮದರಾಸು ಕರ್ನಾಟಕ, ಕೊಡಗು ಮತ್ತು ಅನೇಕ ರಾಜ ಸಂಸ್ಥಾನಗಳು ಸೇರಿ ಕರ್ನಾಟಕ ರೂಪುಗೊಂಡಿದೆ. ಹೀಗೆ ವಿಲೀನಗೊಂಡ ಪ್ರದೇಶಗಳ ಚಾರಿತ್ರಿಕ ಹಿನ್ನೆಲೆ ಮತ್ತು ಅಭಿವೃದ್ಧಿಯ ಮಟ್ಟ ಭಿನ್ನವಾಗಿದ್ದವು. ಇದರಿಂದಾಗಿ ಅಭಿವೃದ್ಧಿಯಲ್ಲಿ ಪ್ರಾದೇಶಿಕ ಅಸಮಾನತೆಯು ಅನಿವಾರ್ಯವಾಗಿತ್ತು.

1956ರ ನಂತರ ಅಭಿವೃದ್ಧಿಯಲ್ಲಿನ ಪ್ರಾದೇಶಿಕ ಅಸಮಾನತೆಗಳನ್ನು ತೊಡೆಯಲು ಪ್ರಯತ್ನಗಳು ನಡೆಯುತ್ತಲೇ ಬಂದಿವೆ. ಆದರೆ ಅವು ಯಾವುವೂ ಯಶಸ್ವಿಯಾಗಲಿಲ್ಲ. ಉತ್ತರ ಕರ್ನಾಟಕ ಪ್ರದೇಶವು ಇಡಿಯಾಗಿ ದಕ್ಷಿಣ ಕರ್ನಾಟಕ ಪ್ರದೇಶಕ್ಕಿಂತ ಹಿಂದುಳಿದಿದೆ ಎಂಬ ಆರೋಪ ಇತ್ತೀಚೆಗೆ ಪ್ರತ್ಯೇಕ ರಾಜ್ಯ ಕೇಳುವ ಹಂತಕ್ಕೆ ಮುಟ್ಟಿಬಿಟ್ಟಿದೆ. ಆದರೆ ಅಭಿವೃದ್ಧಿಯಲ್ಲಿನ ಪ್ರಾದೇಶಿಕ ಅಸಮಾನತೆಗಳು ನಾವು ತಿಳಿದು ಕೊಂಡಿರುವಷ್ಟು ಸರಳವಾಗಿಲ್ಲ. ಇತ್ತೀಚೆಗೆ ಕರ್ನಾಟಕ ಸರ್ಕಾರದ ಯೋಜನಾ ವಿಭಾಗವು ವಿಶ್ವಸಂಸ್ಥೆಯ ಅಭಿವೃದ್ಧಿ ಯೋಜನೆ (UNDP)ಯು 1990ರಿಂದಲೂ ಪ್ರಕಟಿಸುತ್ತಾ ಬಂದಿರುವ ಜಾಗತಿಕ ಮಟ್ಟದ 'ಮಾನವ ಅಭಿವೃದ್ಧಿ ವರದಿ'ಗಳ ಮಾದರಿಯಲ್ಲಿ ಕರ್ನಾಟಕದ 20 ಜಿಲ್ಲೆಗಳಿಗೆ ಸಂಬಂಧಿಸಿದಂತೆ ಮಾನವ ಅಭಿವೃದ್ಧಿ ಸೂಚ್ಯಂಕಗಳನ್ನು ಒಳಗೊಂಡ 'ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ-1999' ಎಂಬ ಮಹತ್ವದ ವರದಿಯೊಂದನ್ನು ಪ್ರಕಟಿಸಿದೆ. ಈ ವರದಿಯನ್ನು ಮತ್ತು ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗವು ಸಿದ್ಧಪಡಿಸಿರುವ 27 ಜಿಲ್ಲೆಗಳನ್ನು ಒಳಗೊಂಡ 'ಕರ್ನಾಟಕ ಅಭಿವೃದ್ಧಿ ಮಾಹಿತಿ ಕೋಶ'ವನ್ನು (ಇದು ಸದ್ಯದಲ್ಲೇ ಪ್ರಕಟವಾಗುತ್ತದೆ) ಆಧರಿಸಿ ಕರ್ನಾಟಕದ ಅಭಿವೃದ್ಧಿಗೆ ಸಂಬಂಧಿಸಿದ ಪ್ರಾದೇಶಿಕ ಅಸಮಾನತೆಯ ಬಗ್ಗೆ ಕೆಲವು ಸೂಕ್ಷ್ಮ ಸಂಗತಿಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಇಲ್ಲಿ ಒಂದು ಪಟ್ಟಿಯನ್ನು ನೀಡಿದ್ದೇವೆ. ಕರ್ನಾಟಕದಲ್ಲಿನ ಹಿಂದುಳಿದ ಜಿಲ್ಲೆಗಳ ಸ್ವರೂಪವನ್ನು ಅದು ತೋರಿಸುತ್ತದೆ.

ಪಟ್ಟಿ 1ರಲ್ಲಿ 12 ಸೂಚಿಗಳನ್ನು ಆಯ್ಕೆ ಮಾಡಿಕೊಡಲಾಗಿದೆ. ಪ್ರತಿಯೊಂದು ಸೂಚಿಗೂ ಒಂದು ಕಡಿತದ ಬಿಂದುವನ್ನು ಮಾನದಂಡವನ್ನಾಗಿ ನಿಗದಿಪಡಿಸಲಾಗಿದೆ. ಈ ಪಟ್ಟಿಯಲ್ಲಿನ ಸರಿಸುಮಾರು ಎಲ್ಲ ಸೂಚಿಗಳಲ್ಲೂ ಪ್ರವೇಶ ಪಡೆದಿರುವ ಜಿಲ್ಲೆಗಳನ್ನು ತೀವ್ರ ಹಿಂದುಳಿದಿರುವ ಅಥವಾ ಅಭಿವೃದ್ಧಿ ದುಸ್ಥಿತಿಯಲ್ಲಿರುವ ಜಿಲ್ಲೆಗಳೆಂದು ಕರೆಯಬಹುದು. ಈ ಪಟ್ಟಿಯಲ್ಲಿ ಒಂದು ಅಥವಾ ಎರಡು ಬಾರಿ ನಮೂದಾಗಿರುವ ಜಿಲ್ಲೆಗಳನ್ನು ಮಧ್ಯಮ ಮಟ್ಟದ ಅಭಿವೃದ್ಧಿ ಜಿಲ್ಲೆಗಳೆಂದು ಕರೆಯಬಹುದು. ಈ ಪಟ್ಟಿಯ ಯಾವುದೇ ಸೂಚಿಯಲ್ಲೂ ನಮೂದಾಗದ ಜಿಲ್ಲೆಗಳನ್ನು ಸ್ಪಷ್ಟವಾಗಿ ಉನ್ನತ ಅಭಿವೃದ್ಧಿ ಸಾಧಿಸಿಕೊಂಡ ಜಿಲ್ಲೆಗಳೆಂದು ವರ್ಗೀಕರಿಸಬಹುದು. ಈ ಮೂರು ವಿವಿಧ ಜಿಲ್ಲೆಗಳ ಗುಂಪನ್ನು ಪಟ್ಟಿ 2ರಲ್ಲಿ ತೋರಿಸಿದೆ.

### ಅಭಿವೃದ್ಧಿಯ ಮಟ್ಟ : ಜಿಲ್ಲೆಗಳ ವರ್ಗೀಕರಣ (ಪಟ್ಟಿ-2)

| ಕ್ರಸಂ. | ಅಭಿವೃದ್ಧಿಯ ಮಟ್ಟ | ಜಿಲ್ಲೆಗಳು |
|---|---|---|
| 1. | ಅತ್ಯಂತ ಹಿಂದುಳಿದ ಅಥವಾ ಅಭಿವೃದ್ಧಿ ದುಸ್ಥಿತಿ ಎದುರಿಸುತ್ತಿರುವ ಜಿಲ್ಲೆಗಳು | ಬಳ್ಳಾರಿ, ಬೀದರ್, ಗುಲಬರ್ಗಾ, ರಾಯಚೂರು ಮತ್ತು ಬಿಜಾಪುರ (5) |
| 2. | ಮಧ್ಯಮ ಮಟ್ಟದ ಅಭಿವೃದ್ಧಿ ಸಾಧಿಸಿಕೊಂಡ ಜಿಲ್ಲೆಗಳು | ಧಾರವಾಡ, ಬೆಳಗಾವಿ, ಮಂಡ್ಯ, ಹಾಸನ, ಮೈಸೂರು, ಚಿತ್ರದುರ್ಗ, ತುಮಕೂರು ಮತ್ತು ಕೋಲಾರ (8) |
| 3. | ಉನ್ನತ ಮಟ್ಟದ ಅಭಿವೃದ್ಧಿ ಸಾಧಿಸಿಕೊಂಡ ಜಿಲ್ಲೆಗಳು | ದಕ್ಷಿಣ ಕನ್ನಡ, ಉತ್ತರ ಕನ್ನಡ, ಕೊಡಗು, ಶಿವಮೊಗ್ಗ, ಚಿಕ್ಕಮಗಳೂರು, ಬೆಂಗಳೂರು (ಗ್ರಾ) ಮತ್ತು ಬೆಂಗಳೂರು ನಗರ (7) |

ಉತ್ತರ ಕರ್ನಾಟಕ ಪ್ರದೇಶ ಇಡಿಯಾಗಿ ಹಿಂದುಳಿದಿದೆ ಎಂಬ ಸಂಗತಿಯನ್ನು 'ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ -1999' ವರದಿಯು ಸ್ಪಷ್ಟವಾಗಿ ಹುಸಿಗೊಳಿಸಿದೆ. ಉತ್ತರ ಕರ್ನಾಟಕದ ಒಂದು ಜಿಲ್ಲೆ 'ಉತ್ತರ ಕನ್ನಡ'ವು ಉನ್ನತ ಅಭಿವೃದ್ಧಿ ಸಾಧಿಸಿಕೊಂಡ ಜಿಲ್ಲೆಗಳ ವರ್ಗಕ್ಕೆ ಸೇರಿದ್ದರೆ ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳು ಮಧ್ಯಮ ಮಟ್ಟದ [illegible] ಜಿಲ್ಲೆಗಳ ವರ್ಗಕ್ಕೆ ಸೇರಿವೆ.

**ಕರ್ನಾಟಕದ ಬಿಹಾರ :** ಕರ್ನಾಟಕ ರಾಜ್ಯದಲ್ಲಿ ಅಭಿವೃದ್ಧಿ ದುಸ್ಥಿತಿಯಿಂದ ನರಳುತ್ತಿರುವ ಐದು ಜಿಲ್ಲೆಗಳು ಸಾಮಾಜಿಕ-ಆರ್ಥಿಕ-ರಾಜಕೀಯ ವಿಷಯಗಳಲ್ಲಿ ಬಿಹಾರ ರಾಜ್ಯವನ್ನು ಸಂಪೂರ್ಣವಾಗಿ ಹೋಲುತ್ತವೆ. ಈ ಜಿಲ್ಲೆಗಳನ್ನು ಬಿಟ್ಟು ಉಳಿದ ಜಿಲ್ಲೆಗಳಲ್ಲಿ 0-6 ವರ್ಷ ವಯೋಮಾನದ ಮಕ್ಕಳ ಪ್ರಮಾಣ ಸರಾಸರಿ ಶೇ. 16.6ರಷ್ಟಿದೆ. ಆದರೆ ಹಿಂದುಳಿದ ಐದು ಜಿಲ್ಲೆಗಳಲ್ಲಿ ಅದು ಶೇ. 20ಕ್ಕಿಂತ ಅಧಿಕವಿದೆ. ಯಾವ ದೇಶ/ಪ್ರದೇಶದಲ್ಲಿ ಜನಸಂಖ್ಯೆಯು ವಿಪರೀತ ಬೆಳೆಯುತ್ತಿದೆಯೋ ಆ ದೇಶ/ಪ್ರದೇಶದ ಜನಸಂಖ್ಯೆಯನ್ನು 'ಎಳೆತನ'ದ ಜನಸಂಖ್ಯೆ ಎಂದು ಕರೆಯಲಾಗಿದೆ. ಈ ದೃಷ್ಟಿಯಿಂದ ಕರ್ನಾಟಕದಲ್ಲಿ ಹಿಂದುಳಿದ ಐದು ಜಿಲ್ಲೆಗಳ ಜನಸಂಖ್ಯೆಯು 'ಎಳೆತನ'ದಿಂದ ಕೂಡಿದೆ.

ಈ ಜಿಲ್ಲೆಗಳು ಹಿಂದುಳಿದಿರುವುದರ ಬಗ್ಗೆ ಭಿನ್ನಾಭಿಪ್ರಾಯ ಸಾಧ್ಯವಿಲ್ಲ. ಆದರೆ ಈ ಹಿಂದುಳಿದಿರುವಿಕೆಯ ಹಿಂದಿನ ಕಾರಣಗಳ ಬಗ್ಗೆ ಭಿನ್ನಾಭಿಪ್ರಾಯವಿದೆ. ಈ ಜಿಲ್ಲೆಗಳ ಅಭಿವೃದ್ಧಿ ದುಸ್ಥಿತಿಗೆ ಚರಿತ್ರೆಯನ್ನು ಕಾರಣ ಮಾಡುವ ಒಂದು ವಿವರಣೆ ಇದೆ. ಸದರಿ ಜಿಲ್ಲೆಗಳ ಭೌಗೋಳಿಕ ಲಕ್ಷಣಗಳನ್ನು ಕಾರಣ ಮಾಡುವ ಪರಿಯೊಂದಿದೆ. ಈ ಜಿಲ್ಲೆಗಳಲ್ಲಿ ರಾಜ್ಯದ ಉಳಿದ ಜಿಲ್ಲೆಗಳಿಗಿಂತ ಅಧಿಕವಾದ ಭ್ರಷ್ಟಾಚಾರವಿದೆ ಎಂದು ಹೇಳಿ ಅದನ್ನು ಈ ಜಿಲ್ಲೆಗಳ ಹಿಂದುಳಿದಿರುವಿಕೆಗೆ ಕಾರಣ ಮಾಡುವ ವಿವರಣೆಗಳು ಇವೆ. ಈ ಜಿಲ್ಲೆಗಳ ಬಗ್ಗೆ ರಾಜ್ಯ ಸರ್ಕಾರ ಮಲತಾಯಿ ಧೋರಣೆ ತಳೆದಿದೆ ಎಂಬ ಆರೋಪಗಳು ಇವೆ. ಈ ಎಲ್ಲ ವಿವರಣೆಗಳು ತಮ್ಮ ನಿರ್ದಿಷ್ಟ ನೆಲೆಯಲ್ಲಿ ಸರಿ ಇರಬಹುದು. ಆದರೆ ಈ ಜಿಲ್ಲೆಗಳ ಅಭಿವೃದ್ಧಿ ದುಸ್ಥಿತಿಯ ಮೂಲದಲ್ಲಿ ಜಮೀನುದಾರಿ-ಊಳಿಗಮಾನ್ಯ ಪಾಳೆಗಾರಿಕೆ ಕ್ರಿಯಾ

([illegible]ನೇ ಪುಟ ನೋಡಿ)

## ವಿಪರ್ಯಾಸ




''ಚಲೇ ಜಾವ್'' ಹೋರಾಟ
ನಲವತ್ತರ ದಶಕದಲ್ಲಿ

ಬಹುರಾಷ್ಟ್ರೀಯ ಕಂಪನಿಗಳಿಗೆ
''ಆ ಜಾವ್'' ಹೋರಾಟ
ತೊಂಬತ್ತರ ದಶಕದಲ್ಲಿ

- ಮ. ಶ್ರೀ. ಮುರಳಿಕೃಷ್ಣ

# ಕರ್ನಾಟಕವು ಬಿಹಾರದ ಹಾದಿ ಹಿಡಿಯುವುದೇ?

ಏಕಲವ್ಯ

ಜೆ. ಎಂ. ಲಿಂಗ್ಡೋ ಹೆಸರು ಯಾರಿಗೆ ತಿಳಿಯದು ? ಎಲೆಯ ಮರೆಯಲ್ಲೇ ಉಳಿದುಕೊಂಡು, ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಂಚನೆಯಾಗಿ ನಿರ್ವಹಿಸುವವರನ್ನು ನಮ್ಮ ಸಮಾಜ ಗುರುತಿಸಲೇ ಅರಿಯದು. ಒಮ್ಮೆ ಗುರುತಿಸಿಬಿಟ್ಟರೆ ಅವರು ಹಾಗೇ ಇರಲು ಬಿಡುವುದೂ ಅಪರೂಪ. ನಮ್ಮ ಚುನಾವಣಾ ಆಯೋಗದಲ್ಲಿ ಕಣ್ಣರಳಿಸಿ, ಹೊಕ್ಕಳಿಂದ ಧ್ವನಿ ತೆಗೆದು, ಕೆಕ್ಕರಿಸಿ, ಹೇಗಾದರೂ ಸರಿ ವರದಿಗಾರರ ಗಮನ ಸೆಳೆದು ಪ್ರಸಿದ್ಧಿ ಅರಸದ ಸದಸ್ಯ ಶ್ರೀ ಲಿಂಗ್ಡೋ. ಅವರು ಹಿಂದೆ ಬಿಹಾರದ ಪೂರ್ನಿಯಾ ಜಿಲ್ಲೆಯ ಡೆಪ್ಯೂಟಿ ಕಮಿಷನರ್ ಆಗಿದ್ದರು. ಇವರ ಉನ್ನತ ಅಧಿಕಾರಿ ಆಗ ಕೋಸಿ ಡಿವಿಜನ್ನಿನ ಕಮೀಷನರಾಗಿದ್ದ ಸಿ. ಎಸ್. ಅಪ್ಪೂ. ಅವರು ಅದಕ್ಕೆ ಮುಂಚೆ ಕೇಂದ್ರದ ಕೃಷಿ ಖಾತೆಯಲ್ಲಿ ಭೂ ಸುಧಾರಣೆಯ ವಿಷಯ ನಿರ್ವಹಿಸುತ್ತಿದ್ದರು. ಇಂದಿನ ಚುನಾವಣಾ ಆಯೋಗದ ಮುಖ್ಯ ಆಯುಕ್ತ ಶ್ರೀ ಎಂ. ಎಸ್. ಗಿಲ್ಲರೂ ಕೇಂದ್ರದ ಕೃಷಿ ಖಾತೆಯ ಮುಖ್ಯ ಕಾರ್ಯ ದರ್ಶಿಗಳಾಗಿದ್ದವರೇ.

ಗಿಲ್ಲರು ಬಿಹಾರದ ಚುನಾವಣಾ ಸಂಬಂಧ ಜರುಗಿದ ತೀವ್ರ ಹಿಂಸಾಚಾರ-ಕೊಲೆಯ ಬಗೆಗೆ ಪ್ರತಿಕ್ರಿಯಿಸುತ್ತ ಆ ಹಿಂಸೆಯ ಸ್ವರೂಪ ಅಲ್ಲಿನ ಆರ್ಥಿಕ-ಸಾಮಾಜಿಕ-ರಾಜಕೀಯ ಹಾಗೂ ಸೈದ್ಧಾಂತಿಕ ಸಮಸ್ಯೆಗಳ ಸ್ವರೂಪ ವೆಂದೂ, ಮುಂಬರುವ ರಾಜಕೀಯ ಧುರೀಣರೂ, ಪಕ್ಷಗಳೂ ಅದರತ್ತ ಗಮನ ನೀಡಬೇಕೆಂದೂ ವ್ಯಾಖ್ಯಾನಿಸಿದ್ದಾರೆ. ಅಲ್ಲಿ ನಡೆಯುತ್ತಿರುವ ಹಿಂಸೆಗೆ ಅರ್ಥವಿದೆ ಯೆಂದು ಹೇಳಿದಂತಾಯ್ತು! ಇಂತಹ ''ಯಾದವೀ'' ಕಲಹ ಬರಲಿದೆಯೆಂದು ೧೯೭೩ರಷ್ಟು ಹಿಂದೆಯೇ ಶ್ರೀ ಅಪ್ಪೂ ಅಂದಿನ ರಾಜ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿಗೆ ಬರೆದಿದ್ದ ವರದಿಯಲ್ಲಿ ತಿಳಿಸಿದ್ದರು. ಚುನಾವಣಾ ಆಯೋಗದ ಸದಸ್ಯ ಜಿ. ವಿ. ಕೃಷ್ಣಮೂರ್ತಿಯವರೂ ಚುನಾವಣೆಗೆ ಮುಂಚಿನ ಸಮೀಕ್ಷೆಯಲ್ಲಿ, ಬಿಹಾರದಲ್ಲಿ ತೀವ್ರ ಹಿಂಸಾಚಾರ ಆಗಿಯೇ ಆಗುತ್ತದೆಂಬ ಮುನ್ಸೂಚನೆ ನೀಡಿದ್ದರು.

೧೯೭೩ರ ಸಂಗತಿ ಇದು : ಅಪ್ಪೂ, ಲಿಂಗ್ಡೋ ಮತ್ತು ಅವರ ಜೊತೆಯ ಸಬ್ ಡಿವಿಜನಲ್ ಆಫೀಸರ್ ತಾರಕೇಶ್ವರಿ ಪ್ರಸಾದರ ಒಟ್ಟಾರೆ ಪ್ರಯತ್ನದಿಂದ ಅಂದಿನ ಭೂಸುಧಾರಣಾ ಕಾನೂನನ್ನು ೧೯೭೨-೭೩ರಲ್ಲಿ ಪೂರ್ನಿಯಾ ಜಿಲ್ಲೆಯಲ್ಲಿ ಅಕ್ಷರಶಃ ಪಾಲನೆ ಮಾಡಲಾಯಿತು. ಬೆಳೆದ ಬೆಳೆಯನ್ನು ಭೂಮಾಲಿಕ ಮತ್ತು ಜಿದ್ದಾಗಿ ಕೃಷಿ ಮಾಡುವ ರೈತ, ಇಬ್ಬರೂ ಒಪ್ಪಂದದ ಪ್ರಕಾರ ಹಂಚಿಕೊಳ್ಳುವ ಪದ್ಧತಿ ಇತ್ತು. ಆದರೆ ಭೂಮಾಲೀಕರು ಹಿಂಸಾಚಾರ-ಗೂಂಡಾಗಿರಿಯ ಮೂಲಕ ಪೋಲೀಸ್ ರನ್ನೂ, ಅಧಿಕಾರಿಗಳನ್ನು ಒಳಗೆ ಹಾಕಿಕೊಂಡು, ರಾಜಕೀಯ ಪ್ರಭಾವ ಬಳಸಿ, ರೈತ [illegible] ಬೆಳೆಸಿದ ಬೆಳೆಯನ್ನು ತಾವೇ ಕಬಳಿಸಿ ಕಟಾವು ಮಾಡಿಕೊಳ್ಳುವ [illegible] ವ್ಯಾಪಕವಾಗಿತ್ತು. ಬಹುಶಃ ಈಗಲೂ

ಮುಂದುವರಿದಿದೆ. ಈ ಮೂವರು ಅಧಿಕಾರಿಗಳ ಆಡಳಿತದಲ್ಲಿ ಸಶಸ್ತ್ರ ಪಡೆಯ ಕಾವಲಿರಿಸಿ ಆ ವರುಷ ಹೀಗಾಗದಂತೆ ನೋಡಿಕೊಂಡು ಕಾನೂನು ಜಾರಿಗೊಳಿಸಿದ್ದರು. ಕೆಲವು ಭೂಮಾಲೀಕರ ವಿರುದ್ಧ ಕಾಯಿದೆ ಕ್ರಮ ಕೈಗೊಂಡಿದ್ದು ವಿಶೇಷ ಸಂಗತಿ. ಪರಿಣಾಮವಾಗಿ ಲಿಂಗ್ಡೋ ಅವರನ್ನು ವರ್ಗಾಯಿಸ

> **ರಾಜ್ಯೋತ್ಸವವನ್ನು ಆಚರಿಸುವ ಯಾಂತ್ರಿಕ ಕ್ರಿಯೆಯ ಹಿಂದೆ ನಮ್ಮ ಆಗು ಹೋಗುಗಳ ಪರಿವೆ ಸ್ವಲ್ಪವೂ ಕಾಣದಿರುವುದು ಶೋಚನೀಯ. ನಮ್ಮ ಸಾಮಾಜಿಕ-ಆರ್ಥಿಕ ಸನ್ನಿವೇಶ ಹಾಗೂ ಸಂಬಂಧಗಳು ರಾಜ್ಯದ ಜನತೆಗೆ ಮಾರಕವಾಗುವ ರೀತಿಯಲ್ಲಿ ಬೆಳೆಯುತ್ತಿವೆ. ಇಂದಿನ ಅಡಚಣೆ ಗಳನ್ನು ನಿವಾರಿಸಿಕೊಳ್ಳಲು ಸ್ವ-ವಿಮರ್ಶೆಯಲ್ಲಿ ತೊಡಗದಿದ್ದರೆ ನಮ್ಮ ಮುಂದಿನ ಹಾದಿ ದುರ್ಗಮ ವಾಗಿರುತ್ತದೆ. ದುರಂತಮಯವೂ ಆದರೆ ಆಮೇಲೆ ಮೈಪರಚಿಕೊಳ್ಳುವುದು ನಿರರ್ಥಕ. ಪಟ್ಟಭದ್ರ ಹಿತಾಸಕ್ತಿಗಳ ರಕ್ಷಣೆಯಷ್ಟೇ ಪ್ರಭುತ್ವದ ಕರ್ತವ್ಯ ಎನ್ನುವ ರೀತಿಯಲ್ಲಿ ನಡೆದುಕೊಳ್ಳುವ ಸರ್ಕಾರವು ಭವಿಷ್ಯವನ್ನು ಕರಾಳವಾಗಿಸುತ್ತದೆ, ಜನರನ್ನು ಬಲಿ ತೆಗೆದುಕೊಳ್ಳುತ್ತದೆ. ಆಸ್ತಿ ಹಾಗೂ ಅಧಿಕಾರಗಳ ವಿಕೇಂದ್ರೀಕರಣ ಇಂದಿನ ತುರ್ತು ಅಗತ್ಯವಾಗಿದೆ. ಅದನ್ನು ಪೂರೈಸುವಂತಹ ಆರ್ಥಿಕ ನೀತಿ ಇಲ್ಲದಿದ್ದರೆ ಹಿಂಸೆ-ಪ್ರತಿಹಿಂಸೆಗಳು ಅಗಾಧವಾಗಿ ಬೆಳೆಯಬಹುದೆಂಬ ಪ್ರಜ್ಞೆ ನಮ್ಮನ್ನು ಕಾಡಬೇಕು.**

ಲಾಯಿತು. ಅಷ್ಟರೊಳಗೆ ತಾರಕೇಶ್ವರಿ ಪ್ರಸಾದರಿಗೆ ಬಡ್ತಿ ಬಂದು ಅವರನ್ನೂ ವರ್ಗಾಯಿಸಲಾಯಿತು. ವರ್ಗಾವಣೆ ಗಳನ್ನು ತಡೆಯಲು ಅಧಿಕಾರಿಗಳಿಂದ ಆಗಲಿಲ್ಲ.

ಅಪ್ಪೂರವರು ಮುಖ್ಯಕಾರ್ಯದರ್ಶಿಯವರಿಗೆ ಬರೆದ ಒಂದು ಪತ್ರದಲ್ಲಿ ತಮ್ಮ ವೇದನೆಯನ್ನು ತೋಡಿ ಕೊಂಡಿದ್ದಾರೆ. ರಾಜ್ಯ ಲಂಚನಿರೋಧಕ ಆಯೋಗದ ಅಧ್ಯಕ್ಷ ಕೆಲವು ಸರ್ಕಾರಿ ಅಧಿಕಾರಿಗಳ ಮೂಲಕ ಭೂಮಾಲಿಕರ ಪರವಾಗಿ ನೇರವಾಗಿ ಹಸ್ತಕ್ಷೇಪ ಮಾಡಿ [illegible] ಅಧಿಕಾರಿಗಳು ತಮ್ಮ ಕಾರ್ಯ ನಿರ್ವಹಿಸದಂತೆ ಮಾಡಿದ್ದರೆಂದು ಅಲ್ಲಿ ಹೇಳಲಾಗಿದೆ. ವರದಿಯ ಕೊನೆಯಲ್ಲಿ ಅವರ ಕೆಲವು ಟೀಕೆಗಳು ಹೀಗಿವೆ:

ಶ್ರೀ ಲಿಂಗ್ಡೋ ಅವರ ವರ್ಗಾವಣೆ ವೈಯಕ್ತಿಕ ದುರಂತವಲ್ಲ. ಅವರೂ ಹಾಗೆ ಭಾವಿಸಿಲ್ಲ. ಅತನ

ಅಮೂಲ್ಯ ಸೇವೆಗೆ ದೊರಕಿದ ಪ್ರತಿಫಲವೆಂದರೆ, ಅಲ್ಲಿಯ ಪ್ರಬಲ ಭೂಮಾಲೀಕರು ಮತ್ತು ಅವರ ಕೆಲವು ತೊತ್ತುಗಳನ್ನು ಬಿಟ್ಟು, ಮಿಕ್ಕಂತೆ ಎಲ್ಲಾ ಜನತೆಯಿಂದಲೂ ಅವರು ಸಂಪಾದಿಸಿರುವ ಅಪಾರ ಗೌರವ ಮತ್ತು ಪ್ರೀತಿ. ಈತನಿಂದ ದೊರೆಯುತ್ತಿದ್ದ ನ್ಯಾಯ ಸಮ್ಮತವೂ ಮತ್ತು ವಿಶ್ವಾಸಪೂರ್ವಕವೂ ಆದ ಸೇವೆ ಇನ್ನುಮುಂದೆ ಈ ರೈತರಿಗೆ ದೊರೆಯದೇ ಹೋಗುತ್ತದೆ. ಪೂರ್ನಿಯಾದ ಈ ಅಸಹಾಯಕರು ಪಾಶವೀವೃತ್ತಿಯ ಭೂಮಾಲೀಕರ ಕನಿಕರದ ಕ್ಷಣಗಳಿಗೆ ಕಾಯುತ್ತಾ ಸಂಪೂರ್ಣ ಅವರ ಅಡಿಯಾಳಾಗುತ್ತಾರೆ. **ಅವರ ಭವಿಷ್ಯ, ಹಿಂದಿನಂತೆ ಅಂಧಕಾರ ಮಯವೇ. ಅವರು ತಮ್ಮ ಹಕ್ಕಿಗಾಗಿ, ಜಯಪ್ರದವಾಗಿ ಹೋರಾಟ ನಡೆಸಬಲ್ಲ ಪ್ರಬಲ ಪ್ರತಿಭಟನೆಯ ಬಂಡುಕೋರ ಸಶಕ್ತ ಸಂಘಟನೆಯನ್ನು ನಿರ್ಮಿಸಿಕೊಳ್ಳುವವರೆಗೂ ಇದು ಮುಂದುವರಿಯುತ್ತದೆ. ಆಡಳಿತಾತ್ಮಕ ಪರಿಹಾರಗಳು ಕೇವಲ ತಾತ್ಕಾಲಿಕ ಶಮನ ನೀಡುವಂಥವಷ್ಟೆ**

ಈ ವರದಿ ಜನವರಿ ೧೯೭೩ರದು. ರೈತಾಪಿ ಜನರ ಪರಿಸ್ಥಿತಿ ಅಂದಿನಂತೆಯೇ ಇಂದೂ ಇದೆ. ರಾಜ್ಯದ ಪ್ರಭುತ್ವ ಶಕ್ತಿ ಅವರ ಪರವಾಗಿ ಏನೂ ಮಾಡಿಲ್ಲ. ಬಡಜನರ ಜೀವನದ ಕಗ್ಗತ್ತಲೆಯನ್ನು ನಿವಾರಿಸುವ ಬೆಳಕು ನೀಡುತ್ತಿಲ್ಲ. ದಾರಿದ್ರ್ಯದಿಂದ ಕಂಗಾಲಾದ ಅಲ್ಲಿಯ ಜನ ಸಾಯಲು ಹಿಂಜರಿಯದೇ ಹಿಂಸೆಯಲ್ಲಿ ತೊಡಗುತ್ತಿರು ವುದು ಏನನ್ನು ತೋರಿಸುತ್ತದೆ ? ಅವರ ಕೆಚ್ಚನ್ನೋ, ಬದುಕಲು ಅನ್ಯಥಾ ಮಾರ್ಗವಿಲ್ಲದ ಹತಾಶೆಯನ್ನೋ ಅಥವಾ ಪ್ರಭುತ್ವದ- ಭೂಮಾಲಿಕರ ಹಿಂಸೆಗೆ ಪ್ರತಿಹಿಂಸೆ ಯನ್ನೋ ? ನಮ್ಮ ಮಾಧ್ಯಮಗಳ ವರದಿಗಾರರು ಮೇಲ್ನೋಟದ ಸಂಗತಿಗಳನ್ನು ಮಾತ್ರ ವರದಿ ಮಾಡಿ ತೃಪ್ತರಾಗದೆ, ಸಮಸ್ಯೆಯ ಮೂಲಕ್ಕೆ ಸ್ವಲ್ಪ ಬೆಳಕು ಚೆಲ್ಲುವ ಧೈರ್ಯ ಮಾಡಿಯಾರೇ ? ನಮ್ಮ ಕರ್ನಾಟಕದಲ್ಲೂ ಹಾಸನದ ಕಡೆಯ ಜನ ''ರಾವಣ'' ಎಂದು ಹೇಳುವಂಥ ಸಮಾಜ ಶೋಷಕರು ಎಲ್ಲಾ ಕಡೆಯೂ ಹೆಚ್ಚಿದ್ದಾರೆ. ಬಾಗೂರು-ನವಿಲೆಯಲ್ಲಿ ನಡೆದಂತಹ ದಾರುಣ ಹಿಂಸಾಚಾರ ಅಮಾಯಕ ಜನತೆಯ ಮೇಲೆ ಅಲ್ಲಲ್ಲೇ ಕಾಣಿಸಿಕೊಳ್ಳುತ್ತಿದೆ. ಮಧುಗಿರಿ ಬಳಿಯ ಬಡವನಹಳ್ಳಿ ಇನ್ನೊಂದು ಉದಾಹರಣೆ, ಅಷ್ಟೆ. ಮಾನವ ಹಕ್ಕುಗಳ ನಿರಂತರ ಅತಿಕ್ರಮ ವ್ಯಾಪಕವಾಗುತ್ತಿದೆ. ದೇವರಾಜ ಅರಸು ಕಾಲದಲ್ಲಿ ನಡೆದ ಒಂದಿಷ್ಟು ಭೂಸುಧಾರಣಾ ಕ್ರಮಗಳನ್ನು ವಿಕೃತಗೊಳಿಸುವ, ಅಷ್ಟೇನೂ ಸೂಕ್ಷ್ಮವಲ್ಲದ ಕಾನೂನು ಕ್ರಮಗಳು ಈಗ ತಲೆದೋರುತ್ತಿವೆ.

ಈ ಲೇಖಕ ಮಂಡ್ಯ ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಕಂಡಂತೆ, ಹೊರಗಿನವರನ್ನು ಕೃಷಿಕಾರ್ಮಿಕ ರಾಗಿ ಭೂಮಾಲಿಕರು ಆಮದು ಮಾಡಿಕೊಳ್ಳುತ್ತಿದ್ದಾರೆ. ಸ್ಥಳೀಯ ಕೂಲಿಕಾರರನ್ನು ನಂಬುತ್ತಿಲ್ಲ. ನಮ್ಮ ಹಳ್ಳಿಯ ನಿರುದ್ಯೋಗಸ್ಥ ಭೂರಹಿತ ಬಡವರ ಸಂಖ್ಯೆ ಹೆಚ್ಚಿದೆ. ಆದರೂ ಇವರ್‍ಯಾರೂ ಸಂಘಟಿತರಾಗದೆ ಇರುವುದು

(ಮುಂದಿನ ಪುಟಕ್ಕೆ)

# ನಾಳಿನ ಕನ್ನಡ ಚಳವಳಿಗಳು

ಪ್ರೊ॥ ಬರಗೂರು ರಾಮಚಂದ್ರಪ್ಪ

ನಾಳಿನ ಕನ್ನಡ ಚಳವಳಿಗಳನ್ನು ಕುರಿತು ಯೋಚಿಸುವಾಗ ನೆನ್ನೆ ಮತ್ತು ಇಂದುಗಳನ್ನು ಗಮನಿಸುವುದು ಅಗತ್ಯ.

ಆಧುನಿಕ ಪೂರ್ವ ಕನ್ನಡ ಸಾಹಿತ್ಯದಲ್ಲಿ ನೆಲೆಗೊಂಡಿರುವ ಕನ್ನಡ ಪರ ಆಶಯಗಳು ಸಂಸ್ಕೃತ ಮತ್ತು ಕನ್ನಡದ ಮುಖಾಮುಖಿಯನ್ನು ಪರಿಚಯಿಸುತ್ತವೆ. ಪಂಪಕವಿಯ 'ದೇಸಿ' ಕಲ್ಪನೆಯಿಂದಲೇ ಇದು ಪ್ರಾರಂಭವಾಗುತ್ತದೆ; ವಚನಕಾರರು, ಹರಿಹರ, ಕುಮಾರವ್ಯಾಸ ಮುಂತಾದವರ ಅಭಿವ್ಯಕ್ತಿಯಲ್ಲಿ ಅನಾವರಣಗೊಳ್ಳುತ್ತದೆ. ಆದರೆ ಹೆಚ್ಚು ನಿರ್ದಿಷ್ಟವಾಗಿ, ಮೂರ್ತವಾಗಿ, ಸಂಸ್ಕೃತ ಬಳಕೆಯ ಬಗ್ಗೆ ಪ್ರತಿಕ್ರಿಯಿಸಿದವರು ನಯಸೇನ, ಆಂಡಯ್ಯ ಮತ್ತು ಮುದ್ದಣ. ಇವರ ಪ್ರತಿಕ್ರಿಯೆಯು ತಂತಮ್ಮ ಕಾವ್ಯಗಳ ಅಭಿವ್ಯಕ್ತಿ ವಿಧಾನದಲ್ಲೂ ಅನುಷ್ಠಾನಗೊಂಡದ್ದು ಒಂದು ವಿಶೇಷ.

ನಯಸೇನ ಕವಿಯು 'ಸಂಸ್ಕೃತದಲ್ಲಿ ಬರೆಯುವವರು ಸಂಸ್ಕೃತದಲ್ಲಿ ಬರೆಯಲಿ; ಕನ್ನಡದಲ್ಲಿ ಬರೆಯುವವರು ಕನ್ನಡದಲ್ಲಿ ಬರೆಯಲಿ; ಎಣ್ಣೆ ಮತ್ತು ತುಪ್ಪವನ್ನು ಬೆರೆಸುವುದು ಸರಿಯೆ?' ಎಂಬ ಪ್ರಶ್ನೆಯ ಮೂಲಕ ಪ್ರತಿಕ್ರಿಯಿಸಿ, ಜನಪದೀಯ ಪರಿಭಾಷೆಯ ಮೂಲಕ ಕಾವ್ಯರಚನೆ ಮಾಡಿದ. ಆಂಡಯ್ಯ ಕವಿ ಸಂಸ್ಕೃತ ಬಳಕೆಗೆ ಸೆಡ್ಡುಹೊಡೆದು ಬರೀ ತದ್ಭವಗಳಲ್ಲೇ ಕಾವ್ಯ ರಚಿಸಿದ. ಮುದ್ದಣನ ಕಾಲಕ್ಕೆ ಹದಗೊಂಡ ಸನ್ನಿವೇಶವನ್ನು ಕಾಣಬಹುದು. ಸಂಸ್ಕೃತವನ್ನು ಸಂಪೂರ್ಣ ನಿರಾಕರಿಸುವಂತಿಲ್ಲ; ಯಾಕೆಂದರೆ ಸಂಸ್ಕೃತ ಶಬ್ದಭಂಡಾರವು ಕನ್ನಡ ಭಾಷೆಗೆ ತನ್ನದೇ ಕೊಡುಗೆ ನೀಡಿದೆ; ಕನ್ನಡ ಬಳಕೆಯ ಭಾಗವಾಗಿದೆ. ಇಂಥ ಸನ್ನಿವೇಶದಲ್ಲಿ ಸಂಸ್ಕೃತವು ಕನ್ನಡದ ಕಾಂತಿಯನ್ನು ಹೆಚ್ಚಿಸಬೇಕೇ ಹೊರತು ಕನ್ನಡಕ್ಕೆ ಮಾರಕವಾಗಬಾರದು. ಮುದ್ದಣನ ಕಾವ್ಯದಲ್ಲಿ ಬರುವ 'ಕರ್ಮಾಣಿ ಸರದೊಳ್ ಚೆಂಬವಳಂ ಕೋದಂತಿರೆ' ಎಂಬ ಮಾತು ಕನ್ನಡವನ್ನು 'ಕರಿಮಣಿ ಸರ'ವಾಗಿ, ಸಂಸ್ಕೃತವನ್ನು 'ಕೆಂಪು ಹವಳವಾಗಿ' ಪರಿಭಾವಿಸುತ್ತದೆ. ಕರಿಮಣಿ ಸರದ ಕಾಂತಿಗೆ ಪೂರಕವಾಗಿ ಕೆಂಪು ಹವಳ ಬೇಕು. ಅದೇ ಕರಿಮಣಿ ಸರವಾಗಬಾರದು.

ಹೀಗೆ ಆಧುನಿಕ ಪೂರ್ವ ಸಂದರ್ಭದಲ್ಲಿ ಸಂಸ್ಕೃತದ ಹಿಡಿತದಿಂದ ಹೊರಬಂದು ತನ್ನ ಅಂತಃಶಕ್ತಿಯನ್ನು ಸ್ಥಾಪಿಸಲು ಪ್ರಯತ್ನಿಸಿದ ಕನ್ನಡ ಭಾಷೆ - ಸಂಸ್ಕೃತಿಗಳು ಬ್ರಿಟಿಷ್ ವಸಾಹತುಶಾಹಿಯ ಆಗಮನದೊಂದಿಗೆ ಹೊಸ ಸವಾಲನ್ನು ಎದುರಿಸಿದವು. ಕೈಗಾರಿಕೀಕರಣ, ಶಿಕ್ಷಣ, ಸಾರಿಗೆ-ಸಂಪರ್ಕ ಸಾಧನಗಳ ಮೂಲಕ ಸುಧಾರಣೆ ಸಾಧಿಸಿದ ವಸಾಹತುಶಾಹಿ ಆಡಳಿತವು ಸಾಂಸ್ಕೃತಿಕ ಪರಿಣಾಮವನ್ನು ಉಂಟುಮಾಡಿತು. ಆನಂತರದಲ್ಲಿ ಜಾಗೃತಗೊಂಡ ರಾಷ್ಟ್ರೀಯ ಚಳವಳಿಯ ಅಂಗವಾಗಿ ವಸಾಹತುಶಾಹಿ ಸಂಸ್ಕೃತಿಗೆ ಎದುರಾದದ್ದು ನಿಜವಾದರೂ ರಾಷ್ಟ್ರೀಯತೆಯ ಸಂದರ್ಭದಲ್ಲೇ ಹುಟ್ಟಿದ 'ಉಪ ರಾಷ್ಟ್ರೀಯತೆ'ಯ ಕಲ್ಪನೆಯು ಪ್ರಾಂತೀಯ ಭಾಷಾ ಸಂಸ್ಕೃತಿಗಳಿಗೆ ಪ್ರೇರಕವಾಯಿತು. ಉಪರಾಷ್ಟ್ರೀಯತೆಯ ನೆಲೆಯಲ್ಲಿ ಬರುವ ಜನಭಾಷೆ-ಸಂಸ್ಕೃತಿಗಳು ಏಕಕಾಲಕ್ಕೆ ಇಂಗ್ಲೀಷ್, ಹಿಂದಿ ಮತ್ತು ಸಂಸ್ಕೃತಗಳ ಹಿಡಿತದಿಂದ ವಿಮೋಚನೆಗೊಳ್ಳುವ ಸವಾಲು ಎದುರಾಯಿತು. ರಾಜಭಾಷೆ (ಇಂಗ್ಲೀಷ್), ದೇವಭಾಷೆ (ಸಂಸ್ಕೃತ), ರಾಷ್ಟ್ರಭಾಷೆ (ಹಿಂದಿ)ಗಳೆಂಬ ಹಣೆಪಟ್ಟಿ ಅಂಟಿಸಿಕೊಂಡು ತ್ರಿಮುಖ ಪ್ರವೃತ್ತಿಗಳು ಜನಭಾಷೆಗಳಿಗಿಂತ 'ಮೇಲು' ಎಂಬ ಭಾಷಿಕ ವರ್ಣವ್ಯವಸ್ಥೆಯನ್ನು ರೂಪಿಸಿದ್ದು ಈಗ ಇತಿಹಾಸ. ಕನ್ನಡ ಭಾಷೆಗೆ ಒದಗಿದ ಈ ಬಿಕ್ಕಟ್ಟು ಇವತ್ತಿಗೂ ಸಂಪೂರ್ಣ ದೂರವಾಗಿಲ್ಲ.

ನಾಳಿನ ಕನ್ನಡ ಚಳವಳಿಗಳು ಮುಖ್ಯವಾಗಿ ಈ ಹಿನ್ನೆಲೆಯನ್ನು ಗಮನಿಸಿ ಕಾರ್ಯಪ್ರವೃತ್ತವಾಗಬೇಕು. ನಮ್ಮ 'ಕನ್ನಡ ಚಳವಳಿ' ಒಂದೇ ಮಾದರಿಯಾಗಿಲ್ಲ. ವಿವಿಧ 'ಚಳವಳಿಗಳು' ನಡೆಯುತ್ತಿರುವ ಇಂದಿನ ವಾಸ್ತವವನ್ನು ಈ



(ಹಿಂದಿನ ಪುಟದಿಂದ)

ಚೋದ್ಯ. ಇದು ನಮ್ಮ ಅನೇಕ ರಾಜಕೀಯ ಪಕ್ಷಗಳ ಇಬ್ಬಂದಿತನವನ್ನು, ಪಟ್ಟಣಗಳಲ್ಲೇ ಬೇರೂರಿರುವ ವಾಮ ಪಕ್ಷಗಳ ವೈಫಲ್ಯವನ್ನು ತೋರಿಸುತ್ತದೆಯೆ? ಬಿಹಾರದ ಬಡ ಸಾಧಾರಣ ಜನತೆಗಿರುವಷ್ಟೂ ಸಾಮಾಜಿಕ-ರಾಜಕೀಯ ಪ್ರಜ್ಞೆ ನಮ್ಮಲ್ಲಿ ಇಲ್ಲವೋ ಏನೋ !

ನಮ್ಮ ನಾಡಿನ ಕೃಷಿಭೂಮಿಯನ್ನು ಹೊರಗಿನವರು ಬಹು ದೊಡ್ಡ ಪ್ರಮಾಣದಲ್ಲಿ ಖರೀದಿಸುತ್ತಿದ್ದಾರೆ. ಭೂಮಿಯನ್ನು ಕೊಳ್ಳುವ ಕಾನೂನನ್ನು ಸಡಿಲಗೊಳಿಸಿದ್ದು ಆಶ್ರಮಗಳು ಹಾಗೂ ರಿಸಾರ್ಟ್‌ಗಳು ಹೇರಳವಾಗಿ ಬೆಳೆಯಲು ಹಾದಿಯಾಗಿದೆ. ಕೃಷಿ ಭೂಮಿಯ ಉಪಯೋಗ ಕೃಷಿಯೇತರ ಉದ್ದೇಶಕ್ಕೆ ತೀರಾ ಹೆಚ್ಚುತ್ತಿದೆ. ಕೃಷಿ ಉತ್ಪಾದನೆಯ ಮೊತ್ತ ಹಾಗೂ ಮಟ್ಟ ದಿನೇ ದಿನೇ ಕುಂಠಿತವಾಗುತ್ತಿದೆ. ಕರ್ನಾಟಕಕ್ಕೆ ಬೇಕಾದಷ್ಟು ಆಹಾರವನ್ನು ನಾವು ಈಗ ಬೆಳೆಯುತ್ತಿಲ್ಲ. ರಾಜಕೀಯ ಶಕ್ತಿಯ ಆಸರೆ ಪಡೆದು ಕಾಡುಗಳ್ಳರು ಕಾಕನಕೋಟೆಯಿಂದ ಬೆಂಗಳೂರಿಗೆ ನಿಸೂರಾಗಿ ಮರ ತರಬಲ್ಲರು. ದಾರಿಯುದ್ದಕ್ಕೂ ಇರುವ ಅಧಿಕಾರದ ಜಾಲಕ್ಕೆ ಅರ್ಥವೇನು ? ಪಶ್ಚಿಮ ಘಟ್ಟದ ವನ ಸಂಪತ್ತು ಬರಿದಾಗುತ್ತಿದೆ. ಅಲ್ಲಿಯ ಮಳೆ-ಹವೆಯ ಪ್ರಾಕೃತಿಕ ರಚನೆಯಲ್ಲಿ ಏರುಪೇರು ಆಗಿದೆ. ತಿನ್ನುವ ಅನ್ನ ಬೆಲ್ಲವಾಗುವಷ್ಟು ಆಹಾರೇತರ ವಾಣಿಜ್ಯ ಫಸಲುಗಳನ್ನು ಬಂಡವಳಿಗ-ಭೂಮಾಲಿಕರು ಬೆಳೆಯುತ್ತಿದ್ದಾರೆ. ರಾಸಾಯನಿಕಗಳ ತೀವ್ರ ಬಳಕೆಯ ಕೃಷಿ ಕ್ರಮದಿಂದ ಭೂಮಿ ಬಂಜರಾಗುವ ಪರಿಸ್ಥಿತಿ ತಲೆದೋರುವಂತಿದೆ. ಉತ್ಪಾದಿತ ಸಕ್ಕರೆಯನ್ನು ಕೊಳ್ಳುವವರೇ ಇಲ್ಲದಿರುವಾಗ ಮತ್ತೆ ಮತ್ತೆ ಸಕ್ಕರೆ ಕಾರ್ಖಾನೆಗಳ ಸೃಷ್ಟಿಯ ಮರ್ಮವೇನು? ನಾವು ಸಾಧಿಸಿರುವ ಅಲ್ಪಸ್ವಲ್ಪ ನೀರಾವರಿ ಮತ್ತು ವಿದ್ಯುಚ್ಛಕ್ತಿಯ ಸೌಲಭ್ಯಗಳೂ, ಸರ್ಕಾರದ ಸಾಲ-ವಿನಾಯಿತಿ ಸೌಲಭ್ಯಗಳೂ ಮೇಲುವರ್ಗದ ಭೂಮಾಲೀಕರಿಗೇ ದಕ್ಕುವಂತಾಗುತ್ತಿದೆ. ಬಡವರ ಹೆಸರಿನ ಸವಲತ್ತುಗಳನ್ನೆಲ್ಲಾ ಶ್ರೀಮಂತ ಭೂಮಾಲೀಕರೇ, ಪಟ್ಟಣದ ಬಂಡವಾಳ ಪತಿಗಳೇ ಕಬಳಿಸಿಬಿಡುತ್ತಿದ್ದಾರೆ.

ರಾಜ್ಯದಲ್ಲಿ ಎಂದೋ ಆದ ಕೇಂದ್ರ ಸರ್ಕಾರಸ್ವಾಮ್ಯದ ಸಾರ್ವಜನಿಕ ಕೈಗಾರಿಕೆಗಳೂ ಕೃಶವಾಗುತ್ತಿವೆ. ಕಂಪ್ಯೂಟರ್ ಕ್ಷೇತ್ರದ ಬೆಳವಣಿಗೆ ಜನಸಾಮಾನ್ಯರನ್ನು ಸ್ವಲ್ಪವೂ ತಟ್ಟದ, ತೋರಿಕೆ-ಹಾರಿಕೆಯ ಬೆರಗಿನ ಬೆಳವಣಿಗೆಯಷ್ಟೆ. ನಮ್ಮ ನಾಡಿನವರಿಂದಲೇ ನಮ್ಮ ನಾಡಿನದೇ ಬಂಡವಾಳ ಸಂಚಯವಾಗಿಲ್ಲ, ಕೈಗಾರಿಕೆ ಬೆಳೆದಿಲ್ಲ. ಮಂಡ್ಯದ ಜಮೀನ್ದಾರ ಮರ್ಸಿಡಿಸ್ ಕಾರು ಕೊಳ್ಳುವ ಬದಲು ಅಲ್ಲೇ ಕೈಗಾರಿಕೆ ಆರಂಭಿಸುವಷ್ಟು ಆಧುನಿಕ ಬಂಡವಾಳಿಗನಾಗುವುದು ಯಾವಾಗ ?

ಕಳೆದ ಇಪ್ಪತ್ತು ವರ್ಷಗಳಲ್ಲಿ ಕರ್ನಾಟಕದಲ್ಲಿ ಯಾವ ಸರ್ಕಾರವೂ ಬೇರೂರಿ ಕೆಲಸ ಮಾಡಿಲ್ಲ. ಉತ್ತರ, ಪಶ್ಚಿಮ, ಕೊಡಗು, ಹಳೇ ಮೈಸೂರು ಭಾಗಗಳ ಸಾಮಾಜಿಕ-ಆರ್ಥಿಕ ಅಸಮತೋಲನಗಳ ಜೊತೆ [illegible] ರಾಜಕೀಯ ವಿಭಿನ್ನತೆಯ ಬಿರುಕು ಎದ್ದು ಕಾಣುತ್ತಿದೆ. ಬರೇ ಕವಿಗಳೂ, ಕಲಾವಿದರೂ ಬುದ್ಧಿಜೀವಿಗಳೂ ಕನ್ನಡ-ಕರ್ನಾಟಕ ಎಂದ ಮಾತ್ರಕ್ಕೆ [illegible] ಪಕ್ಕ ಮಾತ್ರ ಆಗುವುದಿಲ್ಲ. [illegible] ಪ್ರಕ್ರಿಯಾಗುವಂತಾಗುವುದು ಅಗತ್ಯ. [illegible]

ಸಂದರ್ಭದಲ್ಲಿ ಗಮನಿಸಬೇಕು. ಈ ಕನ್ನಡ ಚಳವಳಿಗಳು ಇಂಗ್ಲೀಷ್, ಹಿಂದಿ, ಸಂಸ್ಕೃತಗಳ ಪ್ರಭಾವವನ್ನು ಎಷ್ಟರಮಟ್ಟಿಗೆ, ಯಾವ ಯಾವ ಕ್ಷೇತ್ರಗಳಲ್ಲಿ ತಡೆಯಬೇಕಾಗಿದೆಯೆಂಬ ವಿವೇಕವನ್ನು ಮೊದಲು ಪಡೆಯಬೇಕು. ಮೇಲಿನ ಮೂರು ಭಾಷೆಗಳ ಕಲಿಕೆ, ಅಧ್ಯಯನ, ಸಂಶೋಧನೆಗಳನ್ನು ಕನ್ನಡ ಚಳವಳಿಗಳು ವಿರೋಧಿಸಬೇಕಾಗಿಲ್ಲ. ಅದು ಸಾಧುವೂ ಅಲ್ಲ. ಆದರೆ ಕನ್ನಡ ಕಲಿಕೆ, ಅಧ್ಯಯನ, ಸಂಶೋಧನೆಗಳಿಗೆ ಮಾರಕವಾಗುವ ಹಾಗೆ ಅವುಗಳ ಪ್ರಭಾವವನ್ನು ಬೆಳೆಸಬೇಕಾಗಿಲ್ಲ. ಇಂಗ್ಲೀಷ್ ಇಲ್ಲದೆ ಬದುಕು ಸಾಧ್ಯವಿಲ್ಲವೆಂಬ ವಾತಾವರಣ ನಿರ್ಮಾಣವಾಗುತ್ತಿರುವ ಇಂದಿನ ಸಂದರ್ಭದಲ್ಲಿ ಕನ್ನಡವಿಲ್ಲದೆ ಆಡಳಿತವಿಲ್ಲವೆಂಬ ವಾತಾವರಣ ನಿರ್ಮಾಣವಾಗಬೇಕು. ಕನ್ನಡ ಕಲಿತವರಿಗೆ ಆದ್ಯತೆಯಿರಬೇಕು. ಹಿಂದಿಯು ರಾಷ್ಟ್ರಭಾಷೆಯೆಂದರೆ, ಕನ್ನಡವೂ ರಾಷ್ಟ್ರಭಾಷೆಯೇ. ಈ ರಾಷ್ಟ್ರ ರೂಪುಗೊಂಡಿರುವುದು ಒಂದೇ ಭಾಷೆಯಿಂದಲ್ಲ, ಭಾಷೆ ಸಂಸ್ಕೃತಿಗಳನ್ನು ಬಹುಮತದಿಂದ ಅಳೆಯಲಾಗುವುದಿಲ್ಲ. ಎಲ್ಲ ಭಾಷೆ-ಸಂಸ್ಕೃತಿಗಳೂ ರಾಷ್ಟ್ರೀಯವೇ ಎಂಬ ವೈವಿಧ್ಯತೆಗೆ ಆದ್ಯತೆ ಕೊಡುವ ವಾದ ಕನ್ನಡ ಚಳುವಳಿಯದಾಗಬೇಕು. ಇನ್ನು ಸಂಸ್ಕೃತದ ವಿಚಾರಕ್ಕೆ ಬಂದರೆ ನಮ್ಮವರಿಗೆ ಭಯ-ಭಕ್ತಿ ಜಾಸ್ತಿ. 'ದೇವಭಾಷೆ'ಯೆಂಬ ಭ್ರಮೆಯಲ್ಲಿ ಅದನ್ನು ಎಲ್ಲರಿಗೂ ಕಲಿಸುವ ಹವಣಿಕೆ ಇಂದು ಹೆಚ್ಚಾಗುತ್ತಿದೆ. ಇದಕ್ಕೆ ತೋರಿಸುವ ವಿರೋಧ ಕ್ಷೀಣವಾಗುತ್ತಿದೆ. ರಾಷ್ಟ್ರದಲ್ಲಿ ಮತೀಯ ಮೂಲಭೂತ ವಾದಿಗಳ ಪ್ರಭಾವ ಹೆಚ್ಚಾಗುತ್ತಿದ್ದಂತೆ ಸಂಸ್ಕೃತದ ಪ್ರಭಾವವನ್ನು ವಿಸ್ತರಿಸುವ ಹುನ್ನಾರವೂ ಹೆಚ್ಚಾಗುತ್ತಿರುವುದು ಕಾಕತಾಳೀಯವಲ್ಲ. ಇವೆರಡಕ್ಕೂ ಪರಸ್ಪರ ಸಂಬಂಧವಿದೆ. ಯಾಕೆಂದರೆ ಸಂಸ್ಕೃತ ಕಲಿಕೆ ಇಂದು ಕನ್ನಡದಂಥ ಜನಭಾಷೆಯ ಕಲಿಕೆಯಂತೆ ಧರ್ಮನಿರಪೇಕ್ಷವಾಗಿಲ್ಲ. ಅದು ಮಠಮಾನ್ಯಗಳ 'ಪವಿತ್ರ ಭಾಷೆ'ಯಾಗಿ ಪರಿಗಣಿತವಾಗಿದೆ. ವೈದಿಕ ಮಠಮಾನ್ಯಗಳಷ್ಟೇ ಅಲ್ಲ, ವೀರಶೈವ, ಒಕ್ಕಲಿಗ, ಕುರುಬ, ನಾಯಕ - ಹೀಗೆ ಎಲ್ಲ ಮಠಗಳಲ್ಲಿ ಸಂಸ್ಕೃತಕ್ಕೆ ಇರುವ ಆದ್ಯತೆ, 'ಪವಿತ್ರತೆ' ಕನ್ನಡಕ್ಕೆ ಇರುವುದಿಲ್ಲ. ಸಂಸ್ಕೃತದ ಬೋಧನಾಕ್ರಮದಲ್ಲೂ (ಪಠ್ಯಕ್ರಮವನ್ನು ಒಳಗೊಂಡಂತೆ) ಸನಾತನತೆಯದೇ ಮೇಲುಗೈ.

ಬಿ.ಜೆ.ಪಿ. ನೇತೃತ್ವದ ಕೇಂದ್ರ ಸರ್ಕಾರವು ಸಂಸ್ಕೃತವನ್ನು ಪ್ರಾಥಮಿಕ ಶಿಕ್ಷಣದಲ್ಲಿ ಕಡ್ಡಾಯ ಮಾಡುವ ಇರಾದೆಯನ್ನು ಸೂಚಿಸಿತ್ತು. ತಕ್ಷಣ ಅದು ಸಾಧ್ಯವಾಗದೆ ಇದ್ದಾಗ 'ಸಂಸ್ಕೃತ ವರ್ಷಾಚರಣೆ'ಗೆಂದು ಇಪ್ಪತ್ತು ಕೋಟಿ ರೂಪಾಯಿಗಳನ್ನು ಮಂಜೂರು ಮಾಡಿ ಹಳ್ಳಿಗಳಿಗೂ ಸಂಸ್ಕೃತ ಪ್ರಸಾರ ಮಾಡುವ ಅಪೇಕ್ಷೆಯನ್ನು ಪ್ರಕಟಿಸಿದೆ. ಈ ಕೆಲಸ ಅಲ್ಲಲ್ಲೇ ಪ್ರಾರಂಭವಾಗಿದೆ. ಹಳ್ಳಿಹಳ್ಳಿಗೆ ಸಂಸ್ಕೃತ ಬಂದರೆ ಕೇವಲ ಭಾಷೆಯಷ್ಟೇ ಬರುವುದಿಲ್ಲ. ಅದರೊಂದಿಗೆ ಸನಾತನ ಸಂಸ್ಕೃತಿಯ ಜಡ ನೆಲೆ ನಿಲುವುಗಳೂ ಬರುತ್ತವೆ. ಇದು ಏಕಕಾಲಕ್ಕೆ ಕನ್ನಡದಂಥ ಜನಭಾಷೆಗೆ ಮತ್ತು ಜನಸಂಸ್ಕೃತಿಗೆ ಮಾರಕವಾಗುತ್ತದೆ. ನಾಳಿನ ಕನ್ನಡ ಚಳವಳಿಗಳು ಈ ಅಂಶವನ್ನು ಮುಖ್ಯವಾಗಿ ಮನವರಿಕೆ ಮಾಡಿಕೊಳ್ಳಬೇಕಾಗಿದೆ. ಕನ್ನಡ ಚಳವಳಿ ಎನ್ನುವುದು ಕೇವಲ ಭಾಷಾಚಳವಳಿಯಲ್ಲ, ಮೂಲಭೂತವಾದದ ವಿರುದ್ಧ ದನಿಮಾಡುವ ಜನಸಂಸ್ಕೃತಿ ಚಳವಳಿ ಎಂಬುದನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಇಲ್ಲದಿದ್ದರೆ ಉರ್ದು, ತಮಿಳು ಮುಂತಾದ ಭಾಷೆಗಳ - ಜನಾಂಗಗಳ ವಿರುದ್ಧ ಮಾತ್ರ ಹುರಿಗಟ್ಟುತ್ತ ಉಳಿದ ಸಂದರ್ಭದಲ್ಲಿ ಮೆದುವಾಗುತ್ತ ಹೋಗುವ ಅಪಾಯವಿದೆ.

ಚರ್ಚುಗಳಲ್ಲಿ ಕನ್ನಡದಲ್ಲಿ ಪ್ರಾರ್ಥನೆ ಮಾಡಬೇಕೆಂಬ ಕಳಕಳಿ ಅರ್ಥವಾಗುತ್ತದೆಯಾದರೂ ಇದೇ ಕಳಕಳಿ ದೇವಾಲಯಗಳ ಸಂಸ್ಕೃತ ಪ್ರಾರ್ಥನೆಗೆ ಯಾಕೆ ಎದುರಾಗುವುದಿಲ್ಲ ಎಂಬ ಪ್ರಶ್ನೆಯೂ ಏಳುತ್ತದೆ. 'ಚರ್ಚ್ ಕನ್ನಡ ಚಳವಳಿ' ವಾಸ್ತವವಾಗಿ ಕನ್ನಡ ಮತ್ತು ತಮಿಳಿನ ನಡುವೆ ನಡೆಯುತ್ತಿರುವ ತಿಕ್ಕಾಟ ಮಾತ್ರವೆ. ಇದರ ಆಳದಲ್ಲಿ ಕನ್ನಡಕ್ಕಿಂತ ಚರ್ಚಿನ ಆಧಿಪತ್ಯದ ಪ್ರಶ್ನೆಯೂ ಇರಬಹುದೆ? - ಈ ರೀತಿಯ ಅನುಮಾನಗಳು ಒಮ್ಮೊಮ್ಮೆ ಕಾಡಿಸುವುದುಂಟು. ಇಂಥ ಅನುಮಾನಗಳನ್ನು ನಾಳಿನ ಕನ್ನಡ ಚಳವಳಿಗಳು ನಿವಾರಿಸಬೇಕಾಗಿದೆ.

ಹಿಂದೆ ಕನ್ನಡ ದೂರದರ್ಶನದಲ್ಲಿ ಉರ್ದು ಸುದ್ದಿ ಪ್ರಸಾರವನ್ನು ವಿರೋಧಿಸಿ ನಡೆದ ಚಳವಳಿಯು ಕೇವಲ ಕನ್ನಡ ಚಳವಳಿಯಾಗಿರಲಿಲ್ಲ. ಕನ್ನಡ ಪರ ಹೋರಾಟದಲ್ಲಿ ಮತೀಯ ಶಕ್ತಿಗಳು ಸೇರಿಕೊಂಡದ್ದರಿಂದ ಅಂದಿನ ಸಂದರ್ಭ ಉಗ್ರರೂಪ ತಾಳಿತು; ಹಿಂಸಾಚಾರ ತಲೆ ಎತ್ತಿತು. ಈ ಉಗ್ರತೆಯು ಉರ್ದು ಸುದ್ದಿಪ್ರಸಾರದ ವಿರೋಧಿಯಾಗಿರಲಿಲ್ಲ; ಮುಸ್ಲಿಂ ಮತಬಾಂಧವರ ವಿರೋಧಿಯಾಗಿತ್ತು. ಕರ್ನಾಟಕದ ದೂರದರ್ಶನದಲ್ಲಿ ಕನ್ನಡಕ್ಕೆ ಆದ್ಯತೆಯಿರಬೇಕೆಂದು ನಾನೂ ಪ್ರಬಲವಾಗಿ ಪ್ರತಿಪಾದಿಸುತ್ತೇನೆ. ಆದರೆ ಕನ್ನಡಕ್ಕೆ ಕೇಳುವ ಆದ್ಯತೆಯ ಹಿಂದೆ ಜನಸಂಸ್ಕೃತಿಯ ಆಶಯಗಳು ಕೆಲಸ ಮಾಡಬೇಕೇ ಹೊರತು, ಮತೀಯ ಮೂಲಭೂತವಾದಿತನ ಇರಬಾರದು. ಉರ್ದು, ತಮಿಳು, ಮಲೆಯಾಳಂ ಎಂದಾಗ ಉಗ್ರವಾಗುವ ಕೆಲವರು ಸಂಸ್ಕೃತವೆಂದಾಗ ಕೈಮುಗಿಯಬಲ್ಲರು; ಹಿಂದಿ ಎಂದಾಗ ಎದೆಯುಬ್ಬಿಸಬಲ್ಲರು; ಇಂಗ್ಲೀಷ್ ಎಂದಾಗ ಎರಡಾಗಬಲ್ಲರು. ಈ ದ್ವಂದ್ವ ನೀತಿ ಯಾಕೆ? ಇಷ್ಟಕ್ಕೂ ಜನಭಾಷೆಯ ಚಳವಳಿಯ ಒಳಗೆ ಮತೀಯತೆ ಕೆಲಸ ಮಾಡುವುದು ಅಕ್ಷಮ್ಯ.

ನೈರುತ್ಯ ರೈಲ್ವೆ ವಲಯಕ್ಕೆ ಸಂಬಂಧಿಸಿದ ವಿವಾದವನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಮೊದಲು ಈ ರೈಲ್ವೆವಲಯ ಹುಬ್ಬಳ್ಳಿಯಲ್ಲಿ ಇರಲಿ ಎಂದವರು ಆನಂತರ ತಜ್ಞರ ವರದಿಯ ಕಾರಣ ನೀಡಿ ಬೆಂಗಳೂರಿಗೆ ಇರಲಿ ಎಂದದ್ದೂ, ಮೊದಲು ಬೆಂಗಳೂರಲ್ಲಿ ಇರಲಿ ಎಂದವರು ಆನಂತರ ಹುಬ್ಬಳ್ಳಿಗೇ ಇರಬೇಕೆಂದು ಉಗ್ರವಾಗಿ ವಾದಿಸಿದ್ದು ಈಗ ಇತಿಹಾಸ. ಈ ವಿವಾದವು ಕನ್ನಡಪರ ಅಥವಾ ಕರ್ನಾಟಕಪರ ನೆಲೆಗಿಂತ, ಕರ್ನಾಟಕದ ಎರಡು ಪ್ರಮುಖ ಜಾತಿಗಳ ನಡುವಿನ ಜಗಳದಂತೆ ಕಾಣಿಸಿದ್ದು, ಕನ್ನಡ ಪರ ಹೋರಾಟಗಳು ತೆಗೆದುಕೊಳ್ಳುತ್ತಿರುವ ಅನಪೇಕ್ಷಿತ ತಿರುವುಗಳಿಗೆ ಕನ್ನಡಿ ಹಿಡಿಯುತ್ತದೆ.

ಇನ್ನೊಂದು ಅಂಶವನ್ನೂ ಇಲ್ಲಿ ಅರಿಯಬೇಕು. ಕನ್ನಡಕ್ಕೆ ಆದ್ಯತೆ ಇರಬೇಕೆಂಬ ಬಗ್ಗೆ ಎರಡು ಮಾತಿಲ್ಲವಾದರೂ ಆದ್ಯತೆ ಎಂದರೆ ಯಜಮಾನಿಕೆ ಎಂದು ತಿಳಿಯಬೇಕಾಗಿಲ್ಲ. ಕನ್ನಡದ ಮೂಲಕ ಸಂಸ್ಕೃತಿ - ಉಪಸಂಸ್ಕೃತಿಗಳನ್ನು ಒಳಗೊಳ್ಳುವ ಆದ್ಯತೆ, ಪ್ರಜಾಪ್ರಭುತ್ವದ ಆಶಯಗಳಿಗೆ ಸಿಗುವ ಆದ್ಯತೆ - ಎಂದು ಗ್ರಹಿಸಬೇಕಾಗಿದೆ.

ಮುಂದೆ, ಕನ್ನಡ ಚಳವಳಿಗಳಿಗೆ ಎದುರಾಗುವ ಮುಖ್ಯ ಅಪಾಯವೆಂದರೆ - ಆರ್ಥಿಕ ಉದಾರೀಕರಣ ನೀತಿ. ಜಾಗತೀಕರಣ ಮತ್ತು ಖಾಸಗೀಕರಣಗಳನ್ನು ಒಳಗೊಂಡ ಈ ನೀತಿಯು ತನ್ನದೇ ಆದ 'ಏಕರೂಪ ವ್ಯಾಪಾರೀ ಸಂಸ್ಕೃತಿ'ಯನ್ನು ಬೆಳೆಸುತ್ತದೆ. ಜಾಗತೀಕರಣದ ನೆಪದಲ್ಲಿ ಪ್ರಾಂತೀಯ ಭಾಷೆ ಮತ್ತು ಸಂಸ್ಕೃತಿಗಳನ್ನು ನಿರ್ಲಕ್ಷಿಸುತ್ತದೆ. ಜಾಹೀರಾತನ್ನೇ ತನ್ನ ಸಂಸ್ಕೃತಿಯ ಮುಖ್ಯ ಸಾಧನವಾಗಿ ಬಳಸುವ ಈ ಉದಾರೀಕರಣ ನೀತಿಯು ದೂರದರ್ಶನದ ಖಾಸಗಿ ಚಾನೆಲ್‌ಗಳ ಮೂಲಕ ಒದಗಿಸುವ ವಿನ್ಯಾಸಗಳು ಯುವಜನರಲ್ಲಿ ಬೇರೆಯದೇ ಜೀವನವಿಧಾನವನ್ನು ಉತ್ತೇಜಿಸುತ್ತವೆ. ಉದ್ಯೋಗದ ವಿಷಯದಲ್ಲೂ ಕನ್ನಡಿಗರಿಗೆ ಆದ್ಯತೆ ಇರುವುದಿಲ್ಲ. ಇವತ್ತು ಕನ್ನಡವನ್ನು ನಂಬಿರುವ ಹಾಗೂ ಕನ್ನಡವು ನಂಬಿರುವ ಜನವರ್ಗಗಳು ಪ್ರಧಾನವಾಗಿ ಗ್ರಾಮೀಣ ಪ್ರದೇಶದಲ್ಲಿವೆ; ಹಿಂದುಳಿದ ಹಾಗೂ ದಲಿತ ಸಾಮಾಜಿಕ ವಲಯಕ್ಕೆ ಸೇರಿವೆ. ಹೀಗಾಗಿ ಆರ್ಥಿಕ ಉದಾರೀಕರಣವು ಏಕಕಾಲಕ್ಕೆ ಪ್ರಾದೇಶಿಕ ಜನಭಾಷೆ-ಸಂಸ್ಕೃತಿಗಳಿಗೆ ಮತ್ತು ಸಾಮಾಜಿಕ ನ್ಯಾಯ ನೀತಿಗೆ ವಿರುದ್ಧ ವಾತಾವರಣವನ್ನು ರೂಪಿಸುತ್ತದೆ. ಆದ್ದರಿಂದ ನಾಳಿನ ಕನ್ನಡ ಚಳವಳಿಗಳು ಆರ್ಥಿಕ ಉದಾರೀಕರಣ ನೀತಿಯನ್ನು ವಿರೋಧಿಸಬೇಕು. ಇಂಥ ಹೋರಾಟದ ಭಾಗವಾಗಬೇಕು.

ಕನ್ನಡ ಚಳವಳಿಯು ತನ್ನ ಸಾಮಾಜಿಕ-ಆರ್ಥಿಕ ಸೈದ್ಧಾಂತಿಕತೆಯನ್ನು ಗುರುತಿಸಿಕೊಂಡು ಆ ಮೂಲಕ ಕ್ರಿಯಾಶೀಲವಾದರೆ ಮಾತ್ರ ಅರ್ಥಪೂರ್ಣವಾದೀತು. ಇಲ್ಲದಿದ್ದರೆ, ಮೂಲಭೂತವಾದಿಗಳ, ಬಂಡವಾಳಶಾಹಿಗಳ 'ವಸಾಹತು'ವಾಗುವ ಅಪಾಯವಿದೆ.

ಸಂಸ್ಕೃತಿಯ ಜಡನೆಲೆಗಳನ್ನು ನಿರಾಕರಿಸುತ್ತ ಚಲನಶೀಲ ಅಂತಃಶಕ್ತಿಯನ್ನು ಪಡೆಯುತ್ತ ಕನ್ನಡ ಚಳವಳಿಗಳು ಗಟ್ಟಿಗೊಳ್ಳಬೇಕು. ಇದು ನಮ್ಮ ಒಟ್ಟಾರೆ ಆಶಯವಾಗಬೇಕು.

ಬರಗೂರು ರಾಮಚಂದ್ರಪ್ಪ
ನಂ. ೧೧, ೧೪, 'ಬಿ' ಕ್ರಾಸ್, ಜೆ. ಪಿ. ನಗರ, ೨ನೇ ಹಂತ,
ಬೆಂಗಳೂರು - ೫೬೦ ೦೭೮

ಜಾತಿ-ಕುಲ-ಮತ-ಕರ್ಮ, ಕಟ್ಟಳೆ ಕುಹಕ ಧರ್ಮ,
ಕಟ್ಟಿ ಕೂಡಿಸಿ ಕಿಚ್ಚು ಕೊಟ್ಟು ಸುಡಿರಿ!
ಸೋದರತೆ, ಮಾನವತೆ, ಸತ್ಯ-ಶಾಂತತೆ ಸಮತೆ
ಅಸ್ತಿವಾರದಿ ಜನತೆ ಕಟ್ಟಿ ಬಿಡಿರಿ!
- ಕಯ್ಯಾರ ಕಿಞ್ಞಣ್ಣ ರೈ

# ಉಚ್ಚ ನ್ಯಾಯಾಲಯದ ದ್ವಿತೀಯ ಪೀಠ ಆವಶ್ಯಕತೆ, ಸಾಧ್ಯತೆ, ಔಚಿತ್ಯ

ಕೋ. ಚೆನ್ನಬಸಪ್ಪ



ಉತ್ತರ ಕರ್ನಾಟಕದಲ್ಲಿ, ಕರ್ನಾಟಕ ಉಚ್ಚ ನ್ಯಾಯಾಲಯದ ದ್ವಿತೀಯ ಪೀಠವನ್ನು ಸ್ಥಾಪಿಸಬೇಕೆಂಬ-ಪ್ರಾರಂಭದಲ್ಲಿ ಬೇಡಿಕೆಯಾದದ್ದು, ಕ್ರಮೇಣ ಹಕ್ಕೊತ್ತಾಯವಾಗಿ, ಬರಬರುತ್ತಾ ರಸ್ತೆ ರೋಕೋ, ಉಪವಾಸ ಸತ್ಯಾಗ್ರಹ, ನ್ಯಾಯಾಲಯಗಳ ಬಹಿಷ್ಕಾರ ರೂಪ ತಾಳಿ, ಕೊನೆಯ ಹಂತದಲ್ಲಿ ಬಸ್ಸುಗಳಿಗೆ, ಸಾರ್ವಜನಿಕ ಮತ್ತು ಸರ್ಕಾರೀ ಆಸ್ತಿಗೆ ಬೆಂಕಿಹಚ್ಚುವ ಉಗ್ರ ಅತ್ಯುಗ್ರ ರೂಪ ತಾಳಿತು. ದ್ವಿತೀಯ ಪೀಠಸ್ಥಾಪನೆಯ ಚಳವಳಿಯ ಕಾಲದಲ್ಲಿ - ಈ ಬೇಡಿಕೆ ಈಡೇರದಿದ್ದರೆ ಕರ್ನಾಟಕ ಇಬ್ಭಾಗವಾಗಬೇಕಾದೀತು ಎಂದು ಘೋಷಿಸಿದರು. ಎರಡು ಕರ್ನಾಟಕದ ಮಾತೆತ್ತಿದ ಶ್ರೀ ಪಾಟೀಲ ಪುಟ್ಟಪ್ಪನವರನ್ನು, ಏಕೀಕರಣಕ್ಕಾಗಿ ಒಂದೆಳೆಯನ್ನೂ ನೂಲದ ಒಂದೇ ಒಂದು ಕಡ್ಡಿ ಮುರಿಯದ ಅಖಂಡ ಏಕೀಕರಣ ವಾದಿಗಳು ಕಟುಮಾತಿನಲ್ಲಿ ಖಂಡಿಸಿದರು. ಪೊಟ್ಟಿ ಶ್ರೀರಾಮುಲು ಭಾಷೆಯನ್ನಾಡುವ ಮಟ್ಟಕ್ಕೆ ಪುಟ್ಟಪ್ಪ ಹೋಗಬೇಕಾದರೆ ಈ ಸಮಸ್ಯೆಯ ಸಾಧಕ ಬಾಧಕಗಳನ್ನು ತೂಗಿನೋಡಬೇಕು. ಉಚಿತಾನುಚಿತವನ್ನು ಚರ್ಚಿಸಬೇಕು. ಪುಟ್ಟಪ್ಪನವರದು ತಪ್ಪಾಗಿದ್ದರೆ ಎತ್ತಿ ತೋರಿಸಬೇಕು. ಅದನ್ನು ಬಿಟ್ಟು ಬಿರುನುಡಿಯ ಬಾಣಬಿಡುವುದು ಏಕೀಕರಣಕ್ಕಾಗಿ ದುಡಿದು ಹಣ್ಣಾದವರನ್ನು 'ಕಟಕಟೆ'ಯಲ್ಲಿ ನಿಲ್ಲಿಸುವ ಅವಿವೇಕ ಆಗಬಾರದು. ಈ ದೃಷ್ಟಿಯಿಂದ ಈ ಸಮಸ್ಯೆಯನ್ನು ಇಲ್ಲಿ ಪ್ರಸ್ತಾವಿಸುತ್ತೇನೆ. ಅದಕ್ಕೆ ನನಗಿರುವ ಅರ್ಹತೆ- ಒಂದನೆಯದಾಗಿ ಈ ರಾಜ್ಯವನ್ನು ಕಟ್ಟುವುದರಲ್ಲಿ ಪಾಪು ಅಂತೆ ನಾನೂ ಅಷ್ಟೋ ಇಷ್ಟೋ ಹೆಣಗಿದ್ದೇನೆ. ಎರಡನೆಯದಾಗಿ ನ್ಯಾಯಾಂಗದಲ್ಲಿ ಕನಿಷ್ಠ ಐವತ್ತು ವರ್ಷಗಳ ಅನುಭವವಿದೆ. ಆಡಳಿತೆಯ ಅನುಭವವೂ ಇದೆ. ಕನಿಷ್ಠ ಹನ್ನೆರಡು ವರ್ಷ.

ಒಂದೇ ರಾಜ್ಯದಲ್ಲಿ ಉಚ್ಚ ನ್ಯಾಯಾಲಯದ ಎರಡು ನ್ಯಾಯಪೀಠಗಳಿರುವುದರಲ್ಲಿ ಅನುಚಿತವೇನೂ ಇಲ್ಲ. ರಾಜ್ಯ ದೊಡ್ಡದು ಸಣ್ಣದು ಎಂಬುದು ಮುಖ್ಯವಲ್ಲ. ಕೇರಳ ನಮ್ಮ ರಾಜ್ಯಕ್ಕಿಂತ ವಿಸ್ತಾರದಲ್ಲೂ, ಪ್ರಜಾಸಂಖ್ಯೆಯಲ್ಲೂ ಸಣ್ಣದು. ಆ ರಾಜ್ಯದ ಉಚ್ಚ ನ್ಯಾಯಾಲಯದ ವ್ಯಾಜ್ಯಗಳ ಸಂಖ್ಯೆಯೂ ನಮ್ಮ ರಾಜ್ಯಕ್ಕಿಂತ ಕಡಿಮೆ. ಆದರೂ ಅಲ್ಲಿ ಎರಡು ನ್ಯಾಯಪೀಠಗಳಿವೆ. ಕೋಚಿಯಲ್ಲಿ ಒಂದು; ತಿರುವನಂತಪುರದಲ್ಲಿ ಇನ್ನೊಂದು. ಆದರೆ ನಮ್ಮ ರಾಜ್ಯಕ್ಕಿಂತಲೂ ದೊಡ್ಡದಾದ ತಮಿಳುನಾಡು ಮತ್ತು ಆಂಧ್ರ ಪ್ರಾಂತಗಳಲ್ಲಿ ಉಚ್ಚ ನ್ಯಾಯಾಲಯದ ಒಂದೊಂದೇ ಪೀಠವಿದೆ. ಮುಂಬೈ ಉಚ್ಚ ನ್ಯಾಯಾಲಯದ ದ್ವಿತೀಯ ಪೀಠ ನಾಗಪುರದಲ್ಲಿದೆ. ಅದು ಮಹಾರಾಷ್ಟ್ರದಲ್ಲಿ ವಿಲಯನವಾದ ಮಧ್ಯಪ್ರಾಂತ್ಯ ಇದ್ದಾಗಿನಿಂದಲೂ ಹಾಗೇ ಇತ್ತು. ಒಂದು ವೇಳೆ ಕರ್ನಾಟಕ ಏಕೀಕರಣ ಆಗುವಾಗ ವಿಲಯನವಾಗುವ ಪ್ರದೇಶಗಳಿಗಾಗಿ ಒಂದು ಉಚ್ಚ ನ್ಯಾಯಾಲಯದ ಪೀಠ ಆಗಲೇಬೇಕೆಂಬ ಒಡಂಬಡಿಕೆಯೋ, ಪುನರ್ವಿಂಗಡನಾ ಆಯೋಗದ ಶಿಫಾರಸೋ ಇದ್ದುದಾಗಿದ್ದರೆ ದ್ವಿತೀಯ ನ್ಯಾಯಪೀಠ ಸ್ಥಾಪನೆ ಆಗಲೇಬೇಕಾಗಿತ್ತು. ಅಂಥ ಒಪ್ಪಂದವೂ ಆಗಿರಲಿಲ್ಲ. ಶಿಫಾರಸೂ ಮಾಡಿರಲಿಲ್ಲ. ಹೇಗಾದರೂ ಮಾಡಿ ಮೈಸೂರು ಸೀಮೆಯನ್ನು ಒಳಗೊಂಡ ಏಕೀಕೃತ ಕರ್ನಾಟಕ ರಾಜ್ಯ ರಚನೆಯಾಗಲಿ ಎಂದು ದುಂಬಾಲು ಬಿದ್ದವರು ನಾವು. ಅಂಥ ರಾಜ್ಯ ರಚನೆಯಾಯಿತು.

ಹಿಂದೆ ಒಪ್ಪಂದವಾಗಿರಲಿ ಆಗದಿರಲಿ, ಶಿಫಾರಸು ಮಾಡಿರಲಿ ಮಾಡದೇ ಇರಲಿ ರಾಜ್ಯ ಪುನರ್ವಿಂಗಡನಾ ಆಯೋಗ ಉಚ್ಚ ನ್ಯಾಯಾಲಯಗಳ ಸ್ಥಾಪನೆಯ ಬಗ್ಗೆ ಸಾಮಾನ್ಯ ರೂಪುರೇಷೆಗಳನ್ನು ಸೂಚಿಸಿದೆ. ಆಯೋಗದ ವರದಿಯನ್ನು ಆಧರಿಸಿ ರಾಜ್ಯ ಪುನರ್ವಿಂಗಡನಾ ಕಾಯಿದೆ (1956)ಯ ಸೆಕ್ಷನ್ 49, 50, 51ರಲ್ಲಿ ಉಚ್ಚ ನ್ಯಾಯಾಲಯ ಮತ್ತು ಅದರ ಪೀಠಗಳ ಸ್ಥಾಪನೆಯ ಬಗ್ಗೆ ಶಾಸನ ಮಾಡಲಾಗಿದೆ. ಇಲ್ಲಿ ನಮ್ಮ ಪ್ರಶ್ನೆಗೆ ಪ್ರಸ್ತುತವಾದದ್ದು ಸೆಕ್ಷನ್ 51 (2). ಅದರ ಪ್ರಕಾರ ರಾಷ್ಟ್ರಪತಿಗಳು ಉಚ್ಚ ನ್ಯಾಯಾಲಯದ ಮುಖ್ಯ ಸ್ಥಾನವಲ್ಲದೆ ಇತರೆಡೆಗಳಲ್ಲೂ ಶಾಶ್ವತವಾದ ಪೀಠ ಅಥವಾ ಪೀಠಗಳನ್ನು, ನೂತನ ರಾಜ್ಯದ ರಾಜ್ಯಪಾಲರು ಮತ್ತು ಆ ರಾಜ್ಯದ ಉಚ್ಚ ನ್ಯಾಯಾಲಯದ ಶ್ರೇಷ್ಠ ನ್ಯಾಯಮೂರ್ತಿಗಳೊಡನೆ ಸಮಾಲೋಚನೆ ಮಾಡಿ ಸ್ಥಾಪಿಸಬಹುದು.

*ಉಚ್ಚ ನ್ಯಾಯಾಲಯದಲ್ಲಿ ಉತ್ತರ ಕರ್ನಾಟಕದ ಕೇಸುಗಳು ಶೇಕಡ 30ಕ್ಕೂ ಕಡಿಮೆ ಎನ್ನಲಾಗಿದೆ. ಬೆಂಗಳೂರೊಂದರಲ್ಲೇ ನ್ಯಾಯಾಲಯವಿರುವುದೂ ಅದಕ್ಕೊಂದು ಕಾರಣ ವಿರಬಹುದು. ಸುಪ್ರೀಂಕೋರ್ಟಿನಲ್ಲಿ ಕರ್ನಾಟಕದ ಕೇಸುಗಳು ಎಷ್ಟಿರಬಹುದೋ ಅಷ್ಟಿಲ್ಲ. ಕಾರಣ: ಖರ್ಚು, ಸಮಯ, ದೂರ. ಹೀಗೆ ವಾದ ಹೂಡುವುದೂ ಸಾಧ್ಯವಿದೆ. ಎರಡು ಪೀಠಗಳಿರುವ ರಾಜ್ಯಗಳಲ್ಲಿ ದಸ್ತಾವೇಜುಗಳು ಮಂದಗತಿಯಲ್ಲಿ ಚಲಿಸದಿರಲು ವ್ಯವಸ್ಥೆ ಏನಾದರೂ ಇದೆಯೆ ? ಒಂದೇ ಪೀಠವಿರುವಾಗಲೂ ವಿಳಂಬವಿಲ್ಲವೆ ? ಯಾವುದೂ ಬದಲಾಯಿಸಲು ಸಾಧ್ಯವೇ ಇಲ್ಲದಂತಹ ತೀರ್ಮಾನವಾಗಬಾರದು. ಆ ದೃಷ್ಟಿಯಿಂದ ಲೇಖಕರ ವಿಶ್ಲೇಷಣೆಯನ್ನು ಚರ್ಚೆಗೆ ಒಳಪಡಿಸಬಹುದು. ಸಂಕ್ಷಿಪ್ತ ಪ್ರತಿಕ್ರಿಯೆಗಳಿಗೆ ಸ್ವಾಗತವಿದೆ.*

ಧಾರವಾಡ-ಹುಬ್ಬಳ್ಳಿ ಅವಳಿ ನಗರಗಳಲ್ಲಿಯೇ ಆಗಲಿ ಅಥವಾ ಬೆಳಗಾವಿ, ಬಿಜಾಪುರ ಇಲ್ಲವೇ ಗುಲ್ಬರ್ಗಾದಲ್ಲಿಯೇ ಆಗಲಿ ಇನ್ನೊಂದೋ, ಎರಡೋ ನ್ಯಾಯಪೀಠಗಳನ್ನು ರಚಿಸಬೇಕಾದರೆ ಸೆಕ್ಷನ್ 51(2)ರ ವಿಧಿ ವಿಧಾನಗಳನ್ನು ಅನುಸರಿಸಿಯೇ ತೀರಬೇಕು. 1969ರಲ್ಲಿ ಗುಲ್ಬರ್ಗಾದಲ್ಲಿ ದ್ವಿತೀಯ ನ್ಯಾಯಪೀಠ ಸ್ಥಾಪನೆ ಮಾಡುವ ಪ್ರಸ್ತಾವನೆಯನ್ನು ಸರ್ಕಾರ ಉಚ್ಚ ನ್ಯಾಯಾಲಯಕ್ಕೆ ಕಳಿಸಿತ್ತು. ಉಚ್ಚ ನ್ಯಾಯಾಲಯ ಅದಕ್ಕೆ ಸಮ್ಮತಿಸಲಿಲ್ಲ. ಆ ಪ್ರಸ್ತಾವನೆ ತಿರಸ್ಕೃತವಾಯಿತು. ತರುವಾಯ 1973ರಲ್ಲಿ ಹುಬ್ಬಳ್ಳಿ-ಧಾರವಾಡ ಅವಳಿ ನಗರದಲ್ಲಿ ದ್ವಿತೀಯ ಪೀಠಸ್ಥಾಪನೆಯ ಪ್ರಸ್ತಾಪ ಬಂತು. ಸರ್ಕಾರ ಪೀಠಸ್ಥಾಪನೆ ನ್ಯಾಯನಿರತ ಪಕ್ಷಗಾರರ ಹಿತದೃಷ್ಟಿಯಿಂದ ಅಗತ್ಯವೆಂದು ಉಚ್ಚ ನ್ಯಾಯಾಲಯಕ್ಕೆ ಪ್ರಸ್ತಾವನೆಯನ್ನು ಕಳುಹಿಸಿತು. ಆಗ ಉಚ್ಚ ನ್ಯಾಯಾಲಯ ಈ ಬಗ್ಗೆ ನಿರ್ಧಾರ ತೆಗೆದುಕೊಳ್ಳಬೇಕಾದ ಸಂದರ್ಭ ಮತ್ತು ಅಗತ್ಯ ಉಂಟಾಯಿತು.

ಎಂಥ ಸಂದರ್ಭ ಮತ್ತು ಸನ್ನಿವೇಶಗಳಲ್ಲಿ ಉಚ್ಚ ನ್ಯಾಯಾಲಯದ ದ್ವಿತೀಯ ಪೀಠಸ್ಥಾಪನೆ ಮಾಡಬೇಕು ? ಈ ವಿಚಾರವಾಗಿ ರಾಜ್ಯ ಪುನರ್ವಿಂಗಡನಾ ಕಾಯಿದೆ ಯಾವ ನಿಯಮ, ನಿರ್ದೇಶನಗಳನ್ನೂ ಸೂಚಿಸಿಲ್ಲ. ಆದರೆ ಭಾರತೀಯ ನ್ಯಾಯ ಆಯೋಗವು ತನ್ನ ನಾಲ್ಕನೆಯ ವರದಿಯಲ್ಲಿ ಉಚ್ಚ ನ್ಯಾಯಾಲಯದ ಪೀಠಗಳನ್ನು ಬೇರೆ ಬೇರೆ ಕಡೆ ಸ್ಥಾಪಿಸುವುದು ಕೇವಲ ಅನಪೇಕ್ಷಣೀಯ ಎಂದು ಖಡಾಖಂಡಿತವಾಗಿ ಅಭಿಪ್ರಾಯಪಟ್ಟಿದೆ. ಆ ವರದಿಯ ಸಂಪುಟ 1 (ಪುಟ 104-105) ಪ್ಯಾರಾ 81ರಲ್ಲಿ ಈ ಕೆಳಗಿನಂತೆ ಹೇಳಿದೆ:

''ರಾಜಕೀಯ ಉದ್ದೇಶಗಳಿಂದ ನ್ಯಾಯಾಲಯಗಳ ರಚನೆ, ಸ್ಥಾಪನೆ, ಪ್ರತಿಭಾವಿತವಾಗಲೇ ಕೂಡದು.... ಆ ಪಥವನ್ನು ಅನುಸರಿಸುವುದರಿಂದ ಉಚ್ಚ ನ್ಯಾಯಾಲಯದ ಕಾರ್ಯಸಾಧನ ಸಾಮರ್ಥ್ಯವನ್ನು ಕುಂಠಿತಗೊಳಿಸಿದಂತಾಗುತ್ತದೆ. ತತ್ಫಲವಾಗಿ ನ್ಯಾಯಪರಿಪಾಲನಾ ಮಟ್ಟವು ಕುಸಿಯುತ್ತದೆ.'' ನ್ಯಾಯ ಆಯೋಗದ ಈ ನಾಲ್ಕನೆಯ ವರದಿ ಬಂದ ಮೇಲೆ ಉಚ್ಚ ನ್ಯಾಯಾಲಯದ ಶ್ರೀ ನ್ಯಾ. ಮೂ. ಜೆ. ಸಿ. ಷಹ ಅವರ ಅಧ್ಯಕ್ಷತೆಯಲ್ಲಿ ರಚಿಸಿದ್ದ 'ಉಚ್ಚ ನ್ಯಾಯಾಲಯಗಳಲ್ಲಿ ಬಾಕಿ ಉಳಿದ ಕೇಸುಗಳ ಸಮಿತಿ' ತನ್ನ ವರದಿಯನ್ನು [illegible] ನ್ಯಾಯ ಆಯೋಗದ ಅಭಿಪ್ರಾಯವನ್ನು ಸ್ಪಷ್ಟವಾದ ಶಬ್ದಗಳಿಂದ ಸಮರ್ಥಿಸಿತು. ಈ [illegible] ಅಭಿಪ್ರಾಯವನ್ನು 1972ರಲ್ಲಿ ಸೇರಿದ್ದ ಉಚ್ಚ ನ್ಯಾಯಾಲಯಗಳ ಶ್ರೇಷ್ಠ ನ್ಯಾಯಮೂರ್ತಿಗಳ ಸಮ್ಮೇಳನ ಸರ್ವಾನುಮತದಿಂದ ಅನುಮೋದಿಸಿತು. (ವರದಿಯ 11ನೇ ಪುಟ)

ಇದು ತತ್ವದ ಮಾತಾಯಿತು. ಆದರೆ ವಾಸ್ತವ ಸಂಗತಿಗಳಿಂದ ದ್ವಿತೀಯ [illegible] ಅಗತ್ಯವೆಂದು [illegible] ಆಗ [illegible] ಕೈಗೊಳ್ಳಬೇಕಾಗುತ್ತದೆ. [illegible] ಹುಬ್ಬಳ್ಳಿ-ಧಾರವಾಡ ದ್ವಿತೀಯ [illegible]

ಪ್ರಸ್ತಾವನೆಯನ್ನು ರಾಜ್ಯ ಸರ್ಕಾರ ಕಳಿಸಿದಾಗ ಕರ್ನಾಟಕ ರಾಜ್ಯದ ಬಾರ್ ಕೌನ್ಸಿಲ್ ದ್ವಿತೀಯ ಪೀಠ ಸ್ಥಾಪನೆ ಏಕೀಕೃತ ಕರ್ನಾಟಕವೆಂಬ ಐಕ್ಯ ಮನೋಭಾವಕ್ಕೆ ಧಕ್ಕೆಯುಂಟು ಮಾಡುವುದೆಂದೂ, ನ್ಯಾಯ ಪರಿಪಾಲನೆಯಲ್ಲಿ ಉಚ್ಚ ನ್ಯಾಯಾಲಯದ ಸಾಮರಸ್ಯಕ್ಕೆ ಭಂಗ ಬರಬಹುದೆಂದೂ ನ್ಯಾಯಪರಿಪಾಲನೆಗೆ ಆಡಳಿತಾತ್ಮಕ ಅಡಚಣೆ ಉಂಟಾಗುವುದೆಂದೂ ಅಭಿಪ್ರಾಯಪಟ್ಟು ಒಂದು ಗೊತ್ತುವಳಿಯನ್ನು ಸ್ವೀಕರಿಸಿ ದ್ವಿತೀಯ ನ್ಯಾಯಪೀಠವನ್ನು ವಿರೋಧಿಸಿತು.

ಬಾರ್ ಕೌನ್ಸಿಲ್ಲಿನ ಅಭಿಪ್ರಾಯ ಏನೇ ಇರಲಿ, ಪಕ್ಷಗಾರರ ಹಿತಸಾಧನೆಯ ದೃಷ್ಟಿಯಿಂದ ದ್ವಿತೀಯ ನ್ಯಾಯಪೀಠ ಸ್ಥಾಪನೆ ಅಗತ್ಯವೆಂದು ಕಂಡುಬಂದರೆ ಏಕೆ ಮಾಡಬಾರದು ? ಪಕ್ಷಗಾರರ ಹಿತ ಯಾವುದರಲ್ಲಿದೆ ? ಶೀಘ್ರವಾಗಿ, ಕಡಮೆ ವೆಚ್ಚದಲ್ಲಿ ನ್ಯಾಯದಾನ ಆಗಬೇಕೆಂಬುದು ಮೂಲಭೂತವಾದ ಸಿದ್ಧಾಂತ. ದ್ವಿತೀಯ ನ್ಯಾಯಪೀಠವನ್ನು ವಿರೋಧಿಸುವವರೂ ಇದನ್ನು ಒಪ್ಪುತ್ತಾರೆ. ಉತ್ತರ ಕರ್ನಾಟಕದ ಜಿಲ್ಲೆಗಳಿಂದ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗುವ ಮೊಕದ್ದಮೆಗಳು ಶೇ. 45ರಿಂದ 50ರಷ್ಟು ಇರುವುದರಿಂದ ಉತ್ತರ ಕರ್ನಾಟಕದಲ್ಲಿ ಇನ್ನೊಂದು ಪೀಠ ಯಾಕೆ ಸ್ಥಾಪನೆ ಆಗಬಾರದು ಎಂದು ವಾದಿಸಲಾಗುತ್ತಿದೆ. ಈ ಬಗ್ಗೆ ಅಂಕೆ ಸಂಖ್ಯೆಗಳನ್ನು ಪರಿಶೀಲಿಸಿದರೆ ಇದು ವಾಸ್ತವವಲ್ಲವೆಂದೇ ಕಂಡುಬರುತ್ತದೆ. 1997ರ ನವೆಂಬರ್ ಕೊನೆಯಲ್ಲಿ ಉಚ್ಚ ನ್ಯಾಯಾಲಯದಲ್ಲಿ ಒಟ್ಟು 1,10,421 ಕೇಸುಗಳಿದ್ದವು. ಅವುಗಳಲ್ಲಿ ಬಳ್ಳಾರಿಯನ್ನೊಳಗೊಂಡು ಉತ್ತರ ಕರ್ನಾಟಕದ ಎಂಟು ಜಿಲ್ಲೆಗಳ ಕೇಸುಗಳು 33,597. ಅಂದರೆ ಶೇ. 30.42 ಕೇಸುಗಳು ಮಾತ್ರ ಉತ್ತರ ಕರ್ನಾಟಕಕ್ಕೆ ಸಂಬಂಧಿಸಿದವುಗಳು. ದಿನಾಂಕ 1-10-98ರಲ್ಲಿ ಉಚ್ಚ ನ್ಯಾಯಾಲಯದಲ್ಲಿದ್ದ ಒಟ್ಟು ಕೇಸುಗಳ ಸಂಖ್ಯೆ 96,759. ಅವುಗಳಲ್ಲಿ ಉತ್ತರ ಕರ್ನಾಟಕದ ಎಂಟು ಜಿಲ್ಲೆಗಳಿಗೆ ಸಂಬಂಧಿಸಿದ ಕೇಸುಗಳು 27,543. ಅಂದರೆ ಶೇ. 28.46. ಈ ಎಂಟು ಜಿಲ್ಲೆಗಳ ಪೈಕಿ ಮುಂಬೈ ಕರ್ನಾಟಕದ ನಾಲ್ಕು ಜಿಲ್ಲೆಗಳ ಕೇಸುಗಳು ಶೇ. 17.42. ಹೈದರಾಬಾದ್ ಕರ್ನಾಟಕದ ಕೇಸುಗಳು ಶೇ. 11.04. ಈ ಅಂಕೆ ಸಂಖ್ಯೆಗಳಿಂದ ಉತ್ತರ ಕರ್ನಾಟಕದಲ್ಲಿ ತತ್ರಾಪಿ ಹುಬ್ಬಳ್ಳಿ-ಧಾರವಾಡದಲ್ಲಿ ದ್ವಿತೀಯ ಪೀಠ ಸ್ಥಾಪನೆ ಉಚಿತವೆ ? ಸಮಂಜಸವೆ ? ಶ್ರೀ ಪಾಟೀಲ ಪುಟ್ಟಪ್ಪನವರು ಏನು ಹೇಳುತ್ತಾರೆ ?

ಮಾನವ ಕಲ್ಯಾಣದ ತನು, ಮನ, ಮಾನಗಳಿಗೆ ಬಾಧೆ ಉಂಟಾದಾಗ ಪರಿಹಾರ ಕೊಡುವ ವಿಚಾರದಲ್ಲಿ ಅಂಕೆ ಸಂಖ್ಯೆ, ವೆಚ್ಚದ ಪ್ರಶ್ನೆ ಬರಬಾರದು. ಈ ಮೇಲಿನ ಅಂಕೆ ಸಂಖ್ಯೆಗಳು ಹೇಳುವಂತೆ ಉ.ಕ.ದ ಮೊಕದ್ದಮೆಗಳು ಶೇ. ಮೂವತ್ತೇ ಇದ್ದರೂ, ಅಷ್ಟು ದೂರದ ಪಕ್ಷಗಾರರ ನೊಂದ ಎದೆಗೆ ಪರಿಹಾರ ಕೊಡಬಾರದೇಕೆ ? ಈ ಪ್ರಶ್ನೆಯನ್ನು ಪರಿಶೀಲಿಸಿದ ನಿವೃತ್ತ ಶ್ರೇಷ್ಠ ನ್ಯಾಯಮೂರ್ತಿ ಶ್ರೀ ಡಿ. ಎಂ. ಚಂದ್ರಶೇಖರ್ ಅವರು 29.10.79ರಲ್ಲಿ ಹುಬ್ಬಳ್ಳಿ/ಧಾರವಾಡದಲ್ಲಿ ಕೆಲವು ಷರತ್ತುಗಳಿಗೆ ಒಳಪಟ್ಟು ಒಂದು ದ್ವಿತೀಯ ಪೀಠ ಸ್ಥಾಪನೆಯನ್ನು [illegible] ? ಎಂದೂ ಪ್ರಶ್ನಿಸಿ[illegible] [illegible] ಉಚ್ಚ ನ್ಯಾಯಾಲಯಕ್ಕೆ [illegible] ನ್ಯಾಯಮೂರ್ತಿಗಳಿಗೆ [illegible] ಯೋಗ್ಯ ವಸತಿ ಗೃಹಗಳು [illegible] [illegible]

ಪೂರೈಸದಿದ್ದರೆ ಧಾರವಾಡದ ನ್ಯಾಯಪೀಠಕ್ಕೆ ಅವರು ಸರ್ವಥಾ ವಿರೋಧಿಗಳೆಂದು ತಿಳಿಸಿದ್ದಾರೆ.

1979ರಿಂದ 99ರವರೆಗೂ ಈ ಯಾವ ಷರತ್ತನ್ನೂ ಸರ್ಕಾರ ಪೂರೈಸದೆ ಇರುವಾಗ ಉಚ್ಚ ನ್ಯಾಯಾಲಯದ ದ್ವಿತೀಯ ಪೀಠ ಎಲ್ಲಿ ಕುಳಿತುಕೊಳ್ಳಬೇಕು ? ನ್ಯಾಯಮೂರ್ತಿಗಳು ಸಿಬ್ಬಂದಿ ವರ್ಗ ಎಲ್ಲಿ ಬದುಕಬೇಕು ? ಇದನ್ನು ತೆರೆದ ಮನಸ್ಸಿನಿಂದ ಆಲೋಚಿಸಬೇಕು. ಯಾಕೆ ? ಧಾರವಾಡದಲ್ಲಿ ಕರ್ನಾಟಕ ಕಾಲೇಜಿನ ಕಟ್ಟಡ ಇಲ್ಲವೆ ? ಕಲಾಮಂದಿರವಿಲ್ಲವೆ ? ಲಿಂಗಾಯತ ಟೌನ್‌ಹಾಲ್ ಇಲ್ಲವೆ ? ಬೇಕಾದಷ್ಟಿವೆ ! ಆದರೆ ಅವು ಉಚ್ಚ ನ್ಯಾಯಾಲಯಕ್ಕೆ ಯೋಗ್ಯವಾಗಿವೆ ಎಂದು ಹಠ ಹಿಡಿದರೆ- 'ಹಾರಲಾರದ ಗಿರಿಯ ಹಾರ್‍ಯಾನು ಎಂದೊಡೆ ಹಾರ್‍ಯಾನು ಎನ್ನಿ, ಅವನೊಡನೆ ಹೋರಾಡಬೇಡಿ ಸರ್ವಜ್ಞ' ಎಂದು ಸುಮ್ಮನಾಗಬೇಕಾಗುತ್ತದೆ.

ಉಚ್ಚ ನ್ಯಾಯಾಲಯ ಮತ್ತು ರಾಜಧಾನಿ ಒಂದೇ ಸ್ಥಳದಲ್ಲಿದ್ದು ರಸ್ತೆ ಆಚೆಗಿರುವ ವಿಧಾನಸೌಧದಿಂದ ದಸ್ತಾವೇಜುಗಳು ರಸ್ತೆ ದಾಟಿ ಬರಬೇಕಾದರೆ ತಿಂಗಳುಗಟ್ಟಲೆ ಕಳೆಯುತ್ತದೆ. ದಿನದಿನವೂ ಈ ಉಚ್ಚ ನ್ಯಾಯಾಲಯದಲ್ಲಿ ತಲೆಚಚ್ಚಿಕೊಳ್ಳುವ ವಕೀಲರಿಗೆ, ಹತಾಶರಾದ ನ್ಯಾಯಮೂರ್ತಿಗಳಿಗೆ ಈ ಸಂಕಟ ನಿತ್ಯಾನುಭವ. ಅಂದಮೇಲೆ ಧಾರವಾಡದಲ್ಲಿ ಕುಳಿತ ನ್ಯಾಯಪೀಠ ಬೆಂಗಳೂರಿನ ವಿಧಾನಸೌಧವನ್ನು ಎಚ್ಚರಿಸುವುದು ಎಷ್ಟು ಕಷ್ಟ ಎನ್ನುವುದು ಬಲ್ಲವರಿಗೇ ಗೊತ್ತು. ಆದ್ದರಿಂದಲೇ ನಾನು ಬಹು ವರ್ಷಗಳ ಹಿಂದೆಯೇ ಬರೆದಿದ್ದೆ; ದ್ವಿತೀಯ ನ್ಯಾಯಪೀಠ ಬೇಕಾದರೆ ದ್ವಿತೀಯ ರಾಜಧಾನಿಯಾಗಬೇಕು. ದ್ವಿತೀಯ ರಾಜಧಾನಿ ಬೇಕೆಂದರೆ ರಾಜ್ಯ ಎರಡಾಗಲೇಬೇಕು. ವಿಕೇಂದ್ರೀಕರಣವನ್ನು ಅದರ ಆತ್ಯಂತಿಕ ತಾರ್ಕಿಕ ಮಟ್ಟಕ್ಕೆ ಕೊಂಡೊಯ್ಯುವುದಾದರೆ ಅದು ಸ್ವಾಗತಾರ್ಹವೆ. 43 ವರ್ಷ ಈ ಅಖಂಡ ಕರ್ನಾಟಕದ ಸುಖಭೋಗ ಉಂಡ ಜನ ಇನ್ನೊಂದು ಕರ್ನಾಟಕ ಬೇಕೆಂದು ಹೋರಾಡಿದರೆ ತಪ್ಪೇನಿದೆ ? ಪಾಪು ನಿಲುಮೆಗೆ ನಾನೂ ದನಿಗೂಡಿಸೇನು !!

ಸತ್-ಚಿತ್-ಆನಂದ

ಕಣ್ಣ ರೆಪ್ಪಿ ಕುದರಿ ಏರಿ
ಸುತ್ತಾ ನದಿ ಸಾಗರ ಹಾರಿ
ಕನಸು ತೇಲಿ ಬರತಾವ
ಸುಖದ ಸುಗ್ಗಿ ತರತಾವ..

ಬೆಳಗಾಗೆದ್ದು ಕಣ್ಣು ತಗದು
ನೋಡಿದಲ್ಲೆಲ್ಲಾ ಹೂವ ಸುರದು
ಮನಿ (ಮನಾ) ಎಲ್ಲಾ ಕಂಪು ತುಂಬಿ
ಮನಸು ಹಾಡಿ ಆಡತಾವ..

ಹಾರಿದ ಕನಸು ಮತ್ತ ಬರಲಿ
ತೇಲಿದೂ ಗಂಧಾ ಸದಾ ಇರಲಿ
ಆಡೊ ಮಾತು ಮುತ್ತಾಗಲಿ
ಆ ಸಚ್ಚಿದಾನಂದ ಸದಾ ಇರಲಿ.

ಶೇ. ನಾ. ಕುಲಕರ್ಣಿ

ರಾಜ್ಯ ಪುನರ್ವಿಂಗಡನೆ ಆದಾಗ ಒಂದು ಉಚ್ಚ ನ್ಯಾಯಾಲಯದಿಂದ ಇನ್ನೊಂದು ಉಚ್ಚ ನ್ಯಾಯಾಲಯಕ್ಕೆ ಮೊಕದ್ದಮೆಗಳು ವರ್ಗವಾದದ್ದರ ಗೋಳನ್ನು ಪ್ರಜೆಗಳು ಅನುಭವಿಸಿದ್ದಾರೆ. 1953ರಲ್ಲಿ ಬಳ್ಳಾರಿ ಜಿಲ್ಲೆಯ ಕೆಲವು ಮೊಕದ್ದಮೆಗಳು ಕರ್ನೂಲು, ಅನಂತಪುರಕ್ಕೆ ಹೋದವು. ಆಗ ಮದ್ರಾಸ್ ಉಚ್ಚ ನ್ಯಾಯಾಲಯದಲ್ಲಿದ್ದ ಕೇಸುಗಳು ಗುಂಟೂರಿಗೆ ಹೋದವು. ಅಲ್ಲಿಂದ 1956ರಲ್ಲಿ ಹೈದರಾಬಾದಿಗೆ ಹೋದವು ! ಅಲ್ಲಿಂದ ಯಾವುದೋ ಕಾರಣಕ್ಕಾಗಿ ಮೈಸೂರು ಉಚ್ಚ ನ್ಯಾಯಾಲಯಕ್ಕೆ 1994-95ರಲ್ಲಿ ವರ್ಗವಾಗಿ ಬಂದವು ! ಮುಂಬೈ ಹೈಕೋರ್ಟಿನಲ್ಲಿ 1956ರ ಆದಿಯಲ್ಲಿ ದಾಖಲಾಗಿದ್ದ ವಿಜಾಪುರ ಜಿಲ್ಲೆಯ ಮೊಕದ್ದಮೆಗಳು ಮೈಸೂರು ಉಚ್ಚ ನ್ಯಾಯಾಲಯಕ್ಕೆ ಬಂದು, ಅಲ್ಲಿಂದ ವಿಜಾಪುರ ಜಿಲ್ಲಾ ನ್ಯಾಯಾಲಯಕ್ಕೆ 1945ರಲ್ಲಿ ವರ್ಗವಾಗಿ 1976ರಲ್ಲಿ ಕೊನೆಗೊಂಡ ವಿಳಂಬ ನ್ಯಾಯದಾನವನ್ನು ನಾನು ಪ್ರತ್ಯಕ್ಷ ಕಂಡಿದ್ದೇನೆ. ಇಂಥ ಯದ್ವಾತದ್ವಾ ವಿಳಂಬವನ್ನು ಪಕ್ಷಗಾರರು ನಿಭಾಯಿಸಲು ಸಿದ್ಧರೆ ?

ಅಲ್ಲದೆ ಇನ್ನೊಂದು ವ್ಯಾವಹಾರಿಕ ಕಗ್ಗಂಟೂ ಇದೆ. ಈಗ ಜಿಲ್ಲೆಗಳ ಪುನರ್ವಿಂಗಡಣೆ ಆಗಿದೆ. ದಾವಣಗೆರೆ ಜಿಲ್ಲಾ ನ್ಯಾಯಾಲಯ ಸ್ಥಾಪನೆ ಆಗಬೇಕಾದರೆ, ಹರಪನಹಳ್ಳಿ ತಾಲ್ಲೂಕಿನ ವಿಚಾರವಾಗಿ ಬಳ್ಳಾರಿ ಜಿಲ್ಲಾ ನ್ಯಾಯಾಧೀಶ, ಚನ್ನಗಿರಿ ತಾಲೂಕಿನ ವಿಚಾರವಾಗಿ ಶಿವಮೊಗ್ಗ ಜಿಲ್ಲಾ ನ್ಯಾಯಾಧೀಶ, ಚಿತ್ರದುರ್ಗ ಜಿಲ್ಲಾ ನ್ಯಾಯಾಧೀಶ - ಈ ಮೂವರೂ ಏಕಕಾಲಕ್ಕೆ ಕ್ರಮ ಕೈಗೊಳ್ಳಬೇಕು. ಈ ಮೂವರು ಮಾಡಿದ ಕ್ರಮಗಳನ್ನು ಉಚ್ಚ ನ್ಯಾಯಾಲಯ ಪರಿಶೀಲಿಸಿ ಅಧಿಸೂಚನೆ ಹೊರಡಿಸಬೇಕು. ಆ ಅಧಿಸೂಚನೆ ಹೊರಬಿದ್ದ ತತ್‌ಕ್ಷಣವೇ ಆಯಾ ತಾಲೂಕುಗಳ ಎಲ್ಲ ಕಡತಗಳೂ ದಾವಣಗೆರೆ ಜಿಲ್ಲಾ ನ್ಯಾಯಾಲಯದ ದಸ್ತಾವೇಜುಗಳ ಕೊಠಡಿ ಸೇರಬೇಕು. ಸೆಷನ್ಸ್ ಕೇಸುಗಳಾದರೆ ಆಯಾ ತನಿಖಾಧಿಕಾರಿಗಳ ಕಡತ ಬಂದು ಸೇರಬೇಕು. ಕಡತಗಳಲ್ಲಿ ಒಂದೇ ಒಂದು ಗೈರ್‌ವಿಲೆ ಆದರೆ, ಸಾಗಾಟದಲ್ಲಿ ಕಳೆದರೆ ಏನು ಗತಿ ?

ಈಗ ಉಚ್ಚ ನ್ಯಾಯಾಲಯದ ಮಾತಿಗೆ ಬರೋಣ. ಬೆಂಗಳೂರಿನಲ್ಲಿ ಉಚ್ಚ ನ್ಯಾಯಾಲಯ ವಿಸ್ತರಣೆಗೊಂಡಾಗ ಕಡತಗಳನ್ನು ಒಂದು ಕೊಠಡಿಯಿಂದ ಇನ್ನೊಂದು ಕೊಠಡಿಗೆ ವರ್ಗಾಯಿಸಿದಾಗ ಆದ ವಿಳಂಬವನ್ನು ರಸ್ತೆ ರೋಕೋ ಮಾಡಿದವರು, ಉಪವಾಸ ಕುಳಿತವರು, ಬಸ್ಸಿಗೆ ಬೆಂಕಿ ಇಟ್ಟವರು ಏನು ಬಲ್ಲರು ? ವರ್ಷಾನುಗಟ್ಟಲೆ ಗೈರ್‌ವಿಲೆ ಆದ ದಸ್ತಾವೇಜುಗಳನ್ನು ಪತ್ತೆ ಮಾಡಲಾಯ್ತು. ಕೊನೆಗೂ ದಸ್ತಾವೇಜು ಬಯಲಿಗೆ ಬಂದು ಕೇಸು ಬೋರ್ಡಿನ ಮೇಲೆ ಬಂದಾಗ ಅರ್ಜಿದಾರ, ಅಪೀಲುದಾರ, ಪ್ರತಿವಾದಿ ಸತ್ತು ಹೋಗಿದ್ದರು... ಇಂಥ ಘನಘೋರ ವಿಪತ್ತು ಚಳುವಳಿಗಾರರಿಗೆ ಅನುಭವ ಇದೆಯೋ ಇಲ್ಲವೋ ಕಾಣೆ !!

ದ್ವಿತೀಯ ನ್ಯಾಯಪೀಠ ಸ್ಥಾಪನೆ ಆದರೆ ಕೆಲವರಿಗೆ ಪ್ರಯೋಜನ ಆಗುತ್ತದೆ. ಸಂಶಯವಿಲ್ಲ. ಪಕ್ಷಗಾರರಿಗಂತೂ ಹೆಚ್ಚು ಪ್ರಯೋಜನ ಖಂಡಿತ ಆಗಲಾರದು. ಅಂದಮೇಲೆ ಆಲೋಚಿಸಬೇಕು. ದುಡುಕಿ ಫಲವಿಲ್ಲ. ಆಸ್ತಿಹರಣ ಹಾನಿ ಆದೀತು. ಆದರೆ ನ್ಯಾಯಪೀಠ ಸ್ಥಾಪನೆ ಆಗುವುದು ಸಂದೇಹ.

ಕೋ. ಚೆನ್ನಬಸಪ್ಪ
ನಂ. ೧೨೭, ರಾಜಾಜಿನಗರ, ವೆಸ್ಟ್ ಆಫ್ ಕಾರ್ಡ್ ರೋಡ್,
ಬೆಂಗಳೂರು - ೫೬೦ ೦೮೬

# ಹುಲಿ ಮೀಸೆಯ ಪಾಷ

'ಸಾವರಿ'

ಆಕಾಶವಾಣಿ ಭವನದ ಮುಂದೆ ಸವಾರಿಯನ್ನು ಇಳಿಸಿದ ಪಾಷ, ಯಾವುದೋ ಹಾಡು ಗುನುಗುತ್ತ ಮತ್ತೊಂದು ಸವಾರಿಗಾಗಿ ಸೂಕ್ಷ್ಮವಾಗಿ ಗಮನಿಸುತ್ತ ಬಂದ ದಾರಿಯಲ್ಲಿ ನಿಧಾನವಾಗಿ ಆಟೋ ಓಡಿಸುತ್ತ ಸಾಗಿದ. ಆಕಾಶದ ತುಂಬ ಕಪ್ಪು ಮೋಡಗಳು. ಇಂದು ಸಹ ಇದ್ದಕ್ಕಿದ್ದಂತೆ ಮಳೆ ಬರಬಹುದೆನ್ನಿಸಿತು.

ಸ್ಯಾಂಕಿ ಕೆರೆಯ ಏರಿ ಮೇಲಿನಿಂದ ಮಲ್ಲೇಶ್ವರ ಹದಿನೆಂಟನೇ ಕ್ರಾಸಿನ ಮೂಲೆಗೆ ತಲುಪಿದ. ರಸ್ತೆಯಂಚಿನಲ್ಲಿ, ಇಬ್ಬರು ಹುಡುಗಿಯರನ್ನು ಮೂವರು ಗಂಡಸರು ಅಟಕಾಯಿಸುತ್ತಿರುವಂತೆ ಕಾಣಿಸಿತು. ಅದು ಬಸ್ ನಿಲ್ದಾಣವಲ್ಲ. ಹುಡುಗಿಯರು ಹೆದರಿ ಕಂಗಾಲಾಗಿರುವಂತಿತ್ತು. ಗಂಡಸರು ಅವರನ್ನು ಪೀಡಿಸುತ್ತಿದ್ದಾರೆಂದು ಪಾಷನಿಗೆನ್ನಿಸಿತು. ಅರೇ ! ಹುಡುಗಿಯರನ್ನು ಎಲ್ಲಿ ನೋಡಿದ್ದೇನೆ ? ಆಹ್ಞಾ! ಕೆಂಪು ಮತ್ತು ಗುಲಾಬಿ ಹೂವಿನ ಚೂಡಿದಾರದ ಹುಡುಗಿಯರು. ಬೆಳಗ್ಗೆಯಷ್ಟೆ ಅವರನ್ನು ಬಸ್‌ಸ್ಟ್ಯಾಂಡಿನಿಂದ ಸದಾಶಿವನಗರಕ್ಕೆ ಕರೆದೊಯ್ದುದು. ಅಲ್ಲಿ ಅವರು ಸುನಂದಾ ಗಂಗಾಧರ ಎಂಬುವರ ಮನೆ ಹುಡುಕುತ್ತ ನಾಲ್ಕಾರು ಅಡ್ಡ ರಸ್ತೆಗಳನ್ನು ಹಾದದ್ದು ನೆನಪಿಗೆ ಬಂತು. ''ಇಂಥಾ ಕಡೆ ಬರುವಾಗ ಸರಿಯಾದ ವಿಳಾಸ ತರಬೇಕು ಕಣ್ರಮ್ಮ !'' - ಎಂದು ಈತ ಗೊಣಗಿಕೊಂಡಿದ್ದ. ಅವರ ಉಡುಪಿನಿಂದ ಅವರ ಮುಖ ನೆನಪಾಗದಿದ್ದಲ್ಲಿ, ಪಾಷ ಸಹ ಎಲ್ಲರಂತೆ ತನ್ನ ದಾರಿ ಹಿಡಿದು ಸಾಗುತ್ತಿದ್ದ. ಆ ಹುಡುಗಿಯರು ಅಪಾಯಕ್ಕೆ ಸಿಕ್ಕಿರುವುದು ಖಂಡಿತ ಎನ್ನಿಸಿದ ಕೂಡಲೇ ರಿಕ್ಷಾ ನಿಲ್ಲಿಸಿ ಚಕ್ಕನೆ ಕೆಳಕ್ಕಿಳಿದ.

ಗಂಟು ಮುಖದ, ಬೊಂಬಿನ ಹಾಗೆ ತೆಳ್ಳಗಿನ, ಆದರೆ ಹುಲಿ ಮೀಸೆಯ ಪಾಷನನ್ನು ಆ ಹುಡುಗಿಯರೂ ಥಟ್ಟನೆ ಗುರುತಿಸಿದರು. ಕೆಂಪು ಚೂಡಿದಾರದವಳು ಪಾಷನಿಗೆ ಏನನ್ನೋ ಹೇಳಲು ಪ್ರಯತ್ನಿಸಿದಳು.

''ನಿಮ್ಮನ್ನೇ ಹುಡುಕ್ತಾ ಬಂದೆ ಕಣ್ರಮ್ಮ. ನಿಮ್ಮ ಸುನಂದಾ ಮೇಡಂ ಸಿಕ್ಕಿದ್ರು. ನೀವು ಬಂದಿದೀರಿ ಅಂತಾನೂ ಹೇಳ್ದ್ರು!'' ಎಂದು ತನಗೇ ಆಶ್ಚರ್ಯವೆನ್ನಿಸುವಂತೆ ಒಂದು ಸಮಯೋಚಿತ ಸುಳ್ಳು ಹೇಳಿದ.

ಈ ಅನಿರೀಕ್ಷಿತ ತಿರುವಿನಿಂದ, ಹುಡುಗಿಯರ ಪರಿಚಿತ ಯಾರೋ ವಕ್ಕರಿಸಿದನೆಂದು ಆ ಗಂಡಸರು ಸ್ವಲ್ಪ ಬೆಚ್ಚಿದರು.

''ಹೊರಡಿ, ಅವ್ರು ಕಾಯ್ತಾ ಇದ್ದಾರೆ !'' ಎಂದು ಪಾಷ ಬೇಕೆಂದೇ ಅವಸರಪಡಿಸಿದ.

ಇದ್ದಕ್ಕಿದ್ದಂತೆ ದಪ್ಪ ಹನಿಗಳು ಬೀಳತೊಡಗಿದವು. ಆ ಕ್ಷಣಕ್ಕಾಗಿ ಕಾಯುತ್ತಿದ್ದವರಂತೆ ಹುಡುಗಿಯರು ಆ ಗಂಡಸರ ಚಕ್ರವ್ಯೂಹದಿಂದ ತಪ್ಪಿಸಿಕೊಂಡು ಸರಕ್ಕನೆ ರಿಕ್ಷಾ ಹತ್ತಿ ಕುಳಿತರು !

ಮಳೆ ಬಿರುಸಾಯಿತು. ಹುಡುಗಿಯರನ್ನು ಪೀಡಿಸುತ್ತಿದ್ದವರು ಮಳೆಯಿಂದ ರಕ್ಷಣೆ ಪಡೆಯಲು ಅತ್ತಿತ್ತ ಓಡಿದರು. ಅವರಲ್ಲೊಬ್ಬ ಪಾಷನತ್ತ ಕೆಂಗಣ್ಣು ಬಿಡಲು ಮರೆಯಲಿಲ್ಲ.

ಪಾಷ ರಿಕ್ಷಾ ಚಾಲೂ ಮಾಡಿದ. ಆ ಪೋಲಿಗಳು ತಮ್ಮನ್ನು ಹಿಂಬಾಲಿಸಬಹುದೆ ಎಂಬುದನ್ನು ಗಮನಿಸುತ್ತ ಸ್ವಲ್ಪ ವೇಗವಾಗಿಯೇ ಸಾಗಿದ. ಆದರೆ ಮಳೆ ಮತ್ತು ವಾಹನಗಳ ದಟ್ಟಣೆಯ ಕಾರಣ ವೇಗ ತಗ್ಗಿಸಬೇಕಾಯಿತು.

ಆ ಹುಡುಗಿಯರು ಹುಡುಕುತ್ತಿದ್ದ ವಿಳಾಸದಾರರು ಊರಿನಲ್ಲಿಲ್ಲವಂತೆ. ಅವರು ಹಗಲೆಲ್ಲಾ ಸಿಕ್ಕಿದ ಕಡೆ ಅಲೆದಾಡಿದರಂತೆ. ಪಾರ್ಕಿನಲ್ಲಿ ಕುಳಿತಿದ್ದಾಗ ಆ ಪಟಿಂಗರ ಕಣ್ಣಿಗೆ ಬಿದ್ದರಂತೆ. ಅಲ್ಲಿಂದಲೂ ಹಿಂಬಾಲಿಸಿದ್ದರಂತೆ.

''ಈಗ ನಿಮ್ಮನ್ನ ಎಲ್ಲಿ ಬಿಡಲಿ ?'' ಎಂಬ ಪಾಷನ ಪ್ರಶ್ನೆಗೆ ಅವರಲ್ಲಿ ತತ್‌ಕ್ಷಣದ ಉತ್ತರವಿರಲಿಲ್ಲ. ಇದ್ದಕ್ಕಿದ್ದಂತೆ ಕೆಂಪು ಚೂಡಿದಾರಿಣಿ ಬಿಕ್ಕತೊಡಗಿದಳು. ಮಧ್ಯೆ 'ಎಲ್ಲ ನಿನ್ನಿಂದ' ಎಂದು ತನ್ನ ಗೆಳತಿಯ ಮೇಲೆ ಆರೋಪ ಹೊರಿಸತೊಡಗಿದಳು.

ಮಳೆಯ ಜೊತೆಗೆ ಗಾಳಿಯೂ ಬೀಸಿ, ಒಳಗಿದ್ದವರು ತೋಯ್ದು ತೊಪ್ಪೆಯಾದರು. ಪಾಷನಿಗೆ ನಿಜವಾಗಿ ಪೇಚಾಟಕ್ಕಿಟ್ಟುಕೊಂಡಿತು. ಆ ಹುಡುಗಿಯರನ್ನು ಸದ್ಯಕ್ಕೆ ಪಟಿಂಗರ ಕೈಯಿಂದ ಪಾರುಮಾಡುವ ಹಮ್ಮಿನಿಂದ ಕರೆತಂದುದಾಯಿತು. ಈಗ ಅವರನ್ನು ಎಲ್ಲಿಗೆ ಕರೆದೊಯ್ಯಬೇಕು ? ಸೀದಾ ಪೊಲೀಸ್ ಠಾಣೆಗೆ ಹೋಗಬೇಕೆ ? ಹೀಗೆ ಗೊಂದಲದಲ್ಲಿಯೇ ಆತನ ಆಟೋ ಗೊರಗುಂಟೆಪಾಳ್ಯದ ಮನೆಯ ದಾರಿ ಹಿಡಿಯಿತು.

ನೀರು ನಿಂತ ರಸ್ತೆಯಲ್ಲಿ ಈಜಾಡುತ್ತ ಮನೆಗೆ ತಲುಪಿದಾಗ ಮುಸ್ಸಂಜೆ. ಮಳೆ ನಿಂತಿತ್ತು. ಎಂದಿನಂತೆ ಕರೆಂಟ್ ಇರಲಿಲ್ಲ. ಸಾರಾ ಪುಸ್ತಕಗಳಿಗೆ ರಟ್ಟು ಹಾಕುತ್ತಿದ್ದಳು. ಫಾತಿಮಾ ಇನ್ನೂ ಬಂದಿರಲಿಲ್ಲ. ಗಾರ್ಮೆಂಟ್ಸ್‌ನಲ್ಲಿ ಓವರ್‌ಟೈಂ ಇದ್ದರೆ ರಾತ್ರಿ ಎಂಟು ಗಂಟೆಯಾಗುತ್ತದೆ.

ಆಟೋದಿಂದ ಇಳಿದ ಅಪರಿಚಿತ ಹುಡುಗಿಯರನ್ನು ಪಾಷ ಮನೆಗೆ ಕರೆತಂದಾಗ, ಸಾರಾ 'ಇವರು ಯಾರು ?' ಎನ್ನುವಂತೆ ಹುಬ್ಬೇರಿಸಿದಳು. ಅದನ್ನು ಅರ್ಥಮಾಡಿಕೊಂಡವನಂತೆ ''ಸಾರಾ ಮಗಳೇ, ಸ್ವಲ್ಪ ಚಾ ಮಾಡ್ತೀಯಾಮ್ಮ. ಇವರು ನಮ್ಮ ಪರಿಚಯದವರೇ !'' ಎಂದ - ಪಾಷ.

ಪಾಷ ಆಪದ್ಬಾಂಧವನಂತೆ ಬಂದು ಆ ಹುಡುಗಿಯರನ್ನು ಆಪತ್ತಿನಿಂದ ಪಾರು ಮಾಡಿದ್ದ. ಆ ಪಟಿಂಗರಿಂದ ತಪ್ಪಿಸಿಕೊಂಡರೆ ಸಾಕೆಂದು ಅವರು ಪಾಷನ ಆಟೋ ಹತ್ತಿದ್ದರು. ಆದರೆ, ಇನ್ನೂ ಅವರ ಭಯ ಕಡಿಮೆ



ಬಾಗಿರಲಿಲ್ಲ. ಹೆದರಿಕೆಯಿಂದ ಅವರ ಮುಖಗಳು ಬಿಳಿಚಿಕೊಂಡಿದ್ದವು. ಇದು ನೋಡಿದರೆ ಮುಸಲ್ಮಾನರ ಮನೆ! ಮತ್ತೆ ಏನೋ ಎಂತೋ ಎಂಬ ಚಡಪಡಿಕೆ.

"ನೋಡಮ್ಮಾ ನೀವೇನೂ ಹೆದರಬೇಕಾಗಿಲ್ಲ, ಧೈರ್ಯವಾಗಿರಿ. ನಿಮಗೆ ತೊಂದ್ರೆ ಆಗೊಲ್ಲ," ಎಂದು ಪಾಷ ಅವರಿಗೆ ಧೈರ್ಯ ಹೇಳಿದ.

ಅವರಿಂದ ತಿಳಿದ ಮಾಹಿತಿ ಎಂದರೆ : ಸುಧಾ (ಕೆಂಪು ಚೂಡಿದಾರ) ಮತ್ತು ಸೀತಾ ದಾವಣಗೆರೆಯವರು. ಆತ್ಮೀಯ ಗೆಳತಿಯರು. ಒಂಬತ್ತನೇ ತರಗತಿಯಲ್ಲಿ ಕಲಿಯುತ್ತಿದ್ದಾರೆ. ಕನಸುಗಾರ್ತಿಯರು. ಮಾಡೆಲ್‌ಗಳಾಗುವ, ಟಿ. ವಿ. ಸೀರಿಯಲ್‌ಗಳಲ್ಲಿ ಅಭಿನಯಿಸುವ ಹಂಬಲ ಬೆಳಸಿಕೊಂಡವರು. ಒಮ್ಮೆ ಸುನಂದಾ ಗಂಗಾಧರ ಎಂಬ ಇವರ ಮೆಚ್ಚಿನ ಅಭಿನೇತ್ರಿಯ ಪರಿಚಯವಾಗಿತ್ತು. ಆಕೆಯ ಆಟೋಗ್ರಾಫ್ ಪಡೆದಿದ್ದರು. ವಿಳಾಸ ತೆಗೆದುಕೊಂಡಿದ್ದರು. ಆದರೆ ಬೆಂಗಳೂರಿಗೆ ಬರುವ ಬಗ್ಗೆ ಅಭಿನೇತ್ರಿಗೆ ತಿಳಿಸಿರಲಿಲ್ಲ. ಇವರಿಗೆ ಸಹಾಯ ಮಾಡುವ ಆಶ್ವಾಸನೆಯನ್ನೇನೂ ಆಕೆ ನೀಡಿರಲಿಲ್ಲ. ಹಗಲುಗನಸಿನಲ್ಲಿ ವಿಹರಿಸುತ್ತಿದ್ದ ಈ ಹುಡುಗಿಯರು ಮನೆಯವರಿಗೆ ತಿಳಿಯದಂತೆ ರಾತ್ರಿ ಬಸ್ಸಿನಲ್ಲಿ ಬೆಂಗಳೂರು ತಲಪಿದ್ದರು. ಅಭಿನೇತ್ರಿ ಊರಿನಲ್ಲಿಲ್ಲ. ಪ್ರಾಯಶಃ ಕಾಲು ನೋಯುವವರೆಗೆ ಹಗಲು ಅಲೆದಾಡಿದರು. ಸಮಯ ಕಳೆದಂತೆ ಅಧೀರರಾಗತೊಡಗಿದರು. ಇವರನ್ನು ಗಮನಿಸುತ್ತಿದ್ದ ಪಟಿಂಗರು ಗಂಟುಬಿದ್ದರು.

ಇದೆಲ್ಲ ಅನಿರೀಕ್ಷಿತವಾಗಿ, ಅಷ್ಟೇ ಕ್ಷಿಪ್ರಗತಿಯಲ್ಲಿ ನಡೆದುಹೋಗಿತ್ತು. ಮಬ್ಬುಗತ್ತಲ ಕೋಣೆಯಲ್ಲಿ ಅತಿಯಾದ ಭಯ ಆತಂಕಗಳಿಂದ ತತ್ತರಿಸುತ್ತ, ತಾವು ಅಪಾಯದಿಂದ ಪಾರಾದೆವೋ, ಅಥವಾ ಮತ್ತೊಂದು ಅಪಾಯಕ್ಕೆ ಸಿಕ್ಕಿಕೊಂಡೆವೋ ಎಂಬ ಗೊಂದಲದಲ್ಲಿ, ಗೋಡೆಗಂಟಿದಂತೆ ಕುಳಿತಿದ್ದರು ಅವರು.

ಹೊರಗೆ ಕುಳಿತಿದ್ದ ಪಾಷನಿಗೆ ಮತ್ತೊಂದು ರೀತಿಯ ಚಡಪಡಿಕೆ.

ಸಾರಾ ಚಾ ತಯಾರಿಸಿ, ಅಪ್ಪನಿಗೂ ನೀಡಿ, 'ಟೀ ತಗೊಳ್ಳಿ' ಎಂದು ಉಪಚರಿಸುತ್ತ ಅವರ ಸಮೀಪ ಕುಳಿತಳು. ಅವರಿಗೆ ಸ್ವಲ್ಪ ಧೈರ್ಯ ಬಂತು. ಚಾ ಗುಟುಕರಿಸಿದ ನಂತರ ಶರೀರಕ್ಕೆ ಸ್ವಲ್ಪ ಚೈತನ್ಯ ಬಂದಂತಾಯಿತು.

ಹೊರಗೆ ಫಾತಿಮಾಳ ಗೊಣಗಾಟ ಕೇಳಿಸಿತು. ಆಟೋ ಇಷ್ಟು ಬೇಗ ಬಂದು ಮನೆಯ ಮುಂದೆ ನಿಂತಿದೆಯಲ್ಲ ಎಂಬ ಗೊಂದಲ ಆಕೆಗೆ. ಅಷ್ಟರಲ್ಲಿ ಕರೆಂಟೂ ಬಂದಿತು. ಫಾತಿಮಾ ಕರೆಂಟಿನವರನ್ನು, ಮಳೆಯನ್ನು, ತಮ್ಮ ಸೆಕ್ಷನಿನ ಸೂಪರ್‌ವೈಸರನ್ನು ಶಪಿಸುತ್ತಲೇ ಬಾಗಿಲಿಗೆ ಬಂದಳು.

ಸಾರಾ ಜೊತೆಗೆ ಕುಳಿತಿದ್ದ ಹುಡುಗಿಯರನ್ನು ನೋಡಿ "[illegible] ಮಗಾ... ನಿನ್ ಫ್ರೆಂಡ್ಸಾ ?" ಎಂದಳು.

"[illegible] ಮಕ್ಳು ಅಂತ ಸುಮ್ನೆ [illegible] [illegible] ಅದಕ್ಕೆ [illegible] [illegible]" —ಎಂದು ಪಾಷ ನಕ್ಕ.

ಅವರ ಬಗ್ಗೆ ಅಲ್ಪಸ್ವಲ್ಪ ವಿವರ ತಿಳಿದನಂತರ ಫಾತಿಮಾ ತಲೆಯ ಮೇಲೆ ಕಲ್ಲು ಬಿದ್ದವಳಂತೆ ತತ್ತರಿಸಿ, ಅವರನ್ನು ಅಪ್ಪಿಕೊಂಡೇ ಕುಳಿತಳು. "ಅಲ್ಲಾಕಣ್ರೇ ನನ್ ತಾಯೀರಾ. ನೀವು ಓದಿರು ಮಕ್ಳು, ಬುದ್ಧಿವಂತ್ರು. ಇಂಗ್ ಮಾಡ್ಬೌದಾ ? ನಿಮ್ಮ ಅಪ್ಪ ಅಮ್ಮ ಎಷ್ಟ್ ಗಾಬ್ರಿ ಪಟ್ಟಿರ್ಬೋದು... ಅಯ್ಯೋ ಮಕ್ಳೇ... ಈ ಪಟ್ಣಾ ಎಷ್ಟ್ ಕೆಟ್ಟು ಅಂತ ನಿಮಗ್ಗೊತ್ತಿಲ್ಲ" ಎಂದು ಕಣ್ಣೀರು ಹಾಕಿಕೊಂಡಳು.

"ಏ ಯಜಮಾನಿ...! ಈ ಮಕ್ಳು ಈಗ್ಲೆ ಸಾಕಷ್ಟು ಹೆದರಿವೆ. ನೀನೂ ಹೆದರಿಸ್ತಾ ಇದ್ದಿ..."

ಫಾತಿಮಾ ಕುಳಿತಲ್ಲಿಂದ ಮೇಲೆದ್ದಳು. ಪಾಷ ಆಕೆಯೊಂದಿಗೆ ಅಡಿಗೆ ಕೋಣೆಗೆ ಹೋಗಿ ಏನೋ ಪಿಸಪಿಸ ಮಾತಾಡಿದ.

"ಯಜಮಾನಿ ನಿಮ್ಗೂ ಇಲ್ಲೇ ಅಡಿಗೆ ಮಾಡ್ತಾಳೆ. ನೀವು ಉಣ್ತೀರಲ್ವ ? ಯಾಕೆಂದ್ರೆ, ನಾವು ಮುಸಲ್ಮಾನ್ರು ಅದಕ್ಕೆ. ನಿಮ್ಗೆ ಆಗೊಲ್ಲ ಅಂದ್ರೆ, ದರ್ಶಿನಿಯಿಂದ ಊಟ ತರ್ತೀನಿ !" ಎಂದು ಪಾಷ, ಆ ಹುಡುಗಿಯರನ್ನು ಉದ್ದೇಶಿಸಿ ಹೇಳಿದ.

"ಹೂಕಣ್ರವ್ವಾ... ಆಮ್ಯಾಲೆ ಜಾತಿ ಕೆಡ್ತು ಅನ್ನಬಾರ್ದಲ್ಲ" ಎಂದಳು ಫಾತಿಮಾ.

ಅವರು ಪರಸ್ಪರ ಮುಖ ನೋಡಿಕೊಂಡರು. "ಜಾತಿ ಕೆಡುತ್ತೆ ಅಂತ ಅಲ್ಲ ಆಂಟಿ. ನಮ್ಮಿಂದ ನಿಮ್ಗೆ ಸುಮ್ನೆ ತೊಂದ್ರೆ ಆಗುತ್ತಲ್ಲ ಅಂತ!" ಎಂದಳು ಸುಧಾ.

"ಇದ್ರಲ್ಲಿ ತೊಂದ್ರೆ ಏನ್ಬಂತು ಮಗಾ. ನಮ್ಮನೆಗೆ ದಿಢೀರ್ ಅಂತ ಯಾರಾದ್ರೂ ಬಂದ್ರೆ ಅಡ್ಗೆ ಮಾಡೊಲ್ವೆ ? ಅದನ್ನ ತೊಂದ್ರೆ ಅನ್ನೂಕಾಗುತ್ತೆ ?" ಎಂದಳು ಫಾತಿಮಾ.

"ಆ ಕ್ಷಣಕ್ಕೆ ಅಂಕಲ್ ಮಾತ್ರ ಅಲ್ಲಿಗ್ಬರ್ದೆ ಇದ್ದಿದ್ರೆ, ನಾವಿಬ್ರೂ ಕೆಟ್ಟು ಹಾಳಾಗಿರ್ತಿದ್ವಿ" ಎನ್ನುತ್ತ ಸೀತಾ ಬಿಕ್ಕಿ ಬಿಕ್ಕಿ ಅಳತೊಡಗಿದಳು.



*ಅನ್ನವಿಲ್ಲದೆ ಸೊರಗಿ ಕೃಶರಾದವರ ಗುಂಪೊಂದು*
*ತಿಂದುಂಡುತೇಗಿ ಬೀಗುತಿರುವ ಮತ್ತೊಂದು*
*ತಿಂದುದರಗದೆ ಏಗುತಿರುವುದಿನ್ನೊಂದು*
*ಮೈಮುರಿದು ದುಡಿದು ಅರೆಹೊಟ್ಟೆಯಲ್ಲಿಹುದೊಂದು*

*- ಬಿ. ಚನ್ನಬಸವಯ್ಯ, ದೊಡ್ಡ ಎಣ್ಣೇಗೆರೆ*

"ಪುಕ್ಕಲು ಹುಡ್ಗೀರು ನೀವು. ಜೋರಾಗ್ ಬೊಬ್ಬೆ ಹಾಕಿದ್ರೆ ನಾಲಕ್ ಜನ ಸೇರಿ ಆ ಪೋಲಿ ನನ್ ಮಕ್ಕಳ್ನ ಹಣ್ಣಾಗಾಯ್ ಮಾಡಿರ್ತಿದ್ರು ! ಈಗಿನ್ಕಾಲ್ದಲ್ಲಿ ಹೆಣ್‌ಮಕ್ಳು ನೀನು ಅಂದ್ರೆ, ನಿನ್ನಪ್ಪ ಅನ್ನುವಂಗಿರ್ಬೇಕು. ಆಯ್ತು ಅಳ್ಬಾರ್ದು. ಕಷ್ಟದಲ್ಲಿರೋರ್ನ ಅಲ್ಲಾಹ್ ಕಾಪಾಡ್ತಾನೆ !" ಎಂದು ಫಾತಿಮಾ ಆಕೆಯ ಬೆನ್ನು ನೇವರಿಸಿ ಸಮಾಧಾನಪಡಿಸಿದಳು.

"ಅದೇನೋ ಟೈಮು ಅಂತಾರಲ್ಲ ಅಂಗೆ. ನಾನೂ ಏನೋ ಯೋಚ್ನೆ ಮಾಡ್ತ ಆ ದಾರೀಲಿ ಬರ್ತಿದ್ದೆ. ಪ್ರತಿ ದಿನ ಎಷ್ಟೋ ಮುಖ ನೋಡ್ತಿರ್ತೀವಿ. ಎಲ್ಲ ಮುಖಾನೂ ನೆನಪಿರೊಲ್ಲ. ನಿಮ್ ಡ್ರೆಸ್ ನೋಡದ್‌ಕೂಡ್ಲೆ ನೀವು ಬೆಳಗ್ಗೆ ನನ್ ಆಟೋದಲ್ಲಿ ಬಂದದ್ದು ನೆನಪಾಯ್ತು. ಆಟೋ ನಿಲ್ಲಿಸ್ದೆ. ನಿಮ್ ನಸೀಬೂ ಚನ್ನಾಗಿತ್ತು. ಎಲ್ಲಾ ಒಳ್ಳೇದೆ ಆಯ್ತು. ರಾತ್ರಿ ಊಟ ಮಾಡಿ, ಚನ್ನಾಗಿ ನಿದ್ದೆ ಮಾಡಿ. ನಾಳೆ ಬೆಳಗ್ಗೆ ನಿಮ್ಮನ್ನ ಫಸ್ಟ್ ಬಸ್ಗೆ ಕಳಿಸ್ಕೊಡ್ತೀನಿ. ಊರ್ ಸೇರ್ಕಳಿ. ನಿಮ್ ತಂದೆ ತಾಯ್ಗಳು ನಿಮ್ಮನ್ನ ಎಲ್ಲೆಲ್ಲಿ ಹುಡುಕ್ತಾ ಇದ್ದಾರೋ ಏನೋ," ಎಂದ ಪಾಷ.

ಅವರು ಮೌನವಾದರು. ತಂದೆ ತಾಯಿಗಳ ಮುಂದೆ ನಿಲ್ಲುವ ನೈತಿಕ ಶಕ್ತಿ ಕಳೆದುಕೊಂಡವರಂತೆ ಗೋಡೆಯತ್ತ ಶೂನ್ಯ ದೃಷ್ಟಿ ಬೀರಿದರು.

ತನ್ನ ಒಳ್ಳೆಯ ಉದ್ದೇಶ ನಿರರ್ಥಕವಾಗಬಹುದೆನ್ನಿಸಿ ಪಾಷನಿಗೆ ಗೊಂದಲವಾಯಿತು. ಇವರು ತಂದೆ ತಾಯಿಗಳಿಗೆ ಹೆದರಿ, ಮನೆಗೆ ಹೋಗುವ ಬದಲು ಬೇರೆಲ್ಲಿಗಾದರೂ ಹೋಗಿ ಇಂಥದೇ ಪರಿಸ್ಥಿತಿಗೆ ಸಿಕ್ಕಿಕೊಂಡರೆ ?

ಇದೀಗ ಬರುವುದಾಗಿ ಹೇಳಿ ಪಾಷ ಆಟೋದಲ್ಲಿ ಗೆಳೆಯರನ್ನು ಹುಡುಕುತ್ತ ಹೊರಟ. ಲೋಕಿ, ರಾಜು, ಚಿಕ್ಕಣ್ಣ - ಅದೇ ಬಡಾವಣೆಯ ಯುವಕರು. ಸ್ವಂತ ಆಟೋ ಇಟ್ಟಿರುವವರು. ಆಟೋ ಸಂಬಂಧಿಸಿದಂತೆ ಪಾಷ ಅವರ ಸಲಹೆಗಾರ, ಗುರು. ಆಟೋ ಸ್ಟ್ಯಾಂಡಿನಲ್ಲಿ ಪರಸ್ಪರ ತಮಾಷೆ, ಕೀಟಲೆ, ಲೇವಡಿ ಮಾಡುತ್ತಾರೆ. ಚುಡಾಯಿಸುತ್ತಾರೆ. ಎಲ್ಲ ಸ್ನೇಹದ ಚೌಕಟ್ಟಿನೊಳಗೆ. ಗಂಭೀರವಾಗಿ ರಾಜಕೀಯ ಚರ್ಚಿಸುತ್ತಾರೆ. ಸಿನೆಮಾ ವಿಮರ್ಶಿಸುತ್ತಾರೆ. ಸರಳ ಸ್ನೇಹಿಗಳು. ಪರಸ್ಪರ ಬೇಕಾದ ವ್ಯಕ್ತಿಗಳು.

ಪಾಷನ ಪ್ರಕರಣ ಕೇಳಿದಾಗ ಲೋಕಿ, "ನೀನೇನೂ ಸಾಮಾನ್ಯ ಅಲ್ಲ ಗುರೂ, ನೀನು ಗೊರಗುಂಟೆಪಾಳ್ಯದ ಹೀರೋ !" ಎಂದು ಉದ್ಗರಿಸಿದ.

"ನಿನ್ ಹುಡ್ಗಾಟ್ಕೆ ಇರ್ಲಿ, ಈಗೇನ್ಮಾಡಾನ ಹೇಳು ?"

"ನಂಗೆ ಇಂಥಾ ಚಾನ್ಸ್ ಸಿಕ್ದೆ ಹೋಯ್ತಲ್ಲ ! ಪೇಪರ್ನೋರ್ಗೆ ನ್ಯೂಸ್ ಕೊಡ್ಬೇಕಾಗಿತ್ತು. ನಿನ್ ಫೋಟೋ ಹಾಕಿ 'ರೌಡಿಗಳಿಂದ ಹುಡುಗಿಯರನ್ನು ರಕ್ಷಿಸಿದ ಹುಲಿ ಮೀಸೆ ಪಾಷ'-ಅಂತ ನ್ಯೂಸ್ ಬಂದಿರ್ತಿತ್ತು !" ಎಂದು ಲೋಕಿ ಜೋರಾಗಿ ನಗತೊಡಗಿದ.

"ಲೋ ಇದು ತಮಾಷಿ ವಿಷ್ಯಾ ಅಲ್ಲ...."

ಲೋಕಿ ಮುಂದುವರಿಸಿದ : "ಗೊರಗುಂಟೆಪಾಳ್ಯದ

ಪಾಷ ಇಬ್ಬರು ಹುಡುಗಿಯರನ್ನು ಕಿಡ್‌ನ್ಯಾಪ್ ಮಾಡಿದ' ಅಂತ ನ್ಯೂಸ್ ಬಂದ್ರೆ ಹೆಂಗಿರುತ್ತೆ?'' ಎಂದು ಮತ್ತಷ್ಟು ಜೋರಾಗಿ ನಗತೊಡಗಿದ.

''ಲೋ ಮನೆಮುರ್ಕ! ಏನಾದ್ರೂ ಐಡಿಯಾ ಕೊಡು ಅಂದ್ರೆ, ಬರೀ ತರ್ಲೆ ಮಾತೇ ಆಡ್ತೀಯ....'' ಪಾಷನಿಗೆ ಸಿಟ್ಟು ಬರತೊಡಗಿತ್ತು.

ಲೋಕಿಯೇನೂ ಗೋಳು ಹೊಯ್ದುಕೊಳ್ಳುವುದರಲ್ಲಿ ಯಾರಿಗೂ ಕಡಮೆಯಲ್ಲ. '''ಇಬ್ಬರು ಹಿಂದು ಹುಡುಗಿಯರ ಅಪಹರಣ. ಗೊರಗುಂಟೆಪಾಳ್ಯದಲ್ಲಿ ಉದ್ರಿಕ್ತ ವಾತಾವರಣ. ಪೊಲೀಸರು ಅಪಹರಣಕಾರನ ಬೆನ್ನು ಹತ್ತಿದ್ದಾರೆ.' ನ್ಯೂಸ್ ಇಂಗಿದ್ರೆ, ಇನ್ನೂ ಮಜವಾಗಿರ್ತದೆ. ಮೊದ್ಲೆ ಗೊತ್ತಾಗಿದ್ದಿದ್ರೆ, ನಾನೇ ನ್ಯೂಸ್ ಕೊಟ್ಬಿರ್ತಿದ್ದೆ'' -ಎಂದು ಗಹಗಹಿಸಿದ.

ಲೋಕಿ ತಮಾಷೆ ಮಾಡುತ್ತಿದ್ದರೂ, ಈ ಸಾಮಾನ್ಯ ಪ್ರಕರಣ ಎಷ್ಟೆಲ್ಲ ಅರ್ಥಪಡೆದುಕೊಳ್ಳಬಹುದೆಂಬ ಕಲ್ಪನೆಯಿಂದ ಪಾಷನಿಗೆ ನಿಜವಾಗಿಯೂ ಹೆದರಿಕೆಯಾಯಿತು.

''ಥೂ ನಿಂಗೆ ಯಾವಾಗ್ಲೂ ಹುಡುಗಾಟ್ಕೆ. ಪರಿಸ್ಥಿತಿ ಸ್ವಲ್ಪಾನೂ ಅರ್ಥ ಆಗೊಲ್ಲ'' ಎಂದು ಸಿಟ್ಟುಗೊಂಡ ಪಾಷ ಆಟೋ ಚಾಲೂ ಮಾಡಿದಾಗ, ಲೋಕಿ ಓಡುತ್ತ ಬಂದು ಆತನನ್ನು ತಡೆದ.

''ನಾನು ಏನ್ಮಾಡ್ಬೇಕು ಅಂತ ಹೇಳು ಗುರು. ಆ ಹುಡುಗೀರ್ನ ಆಟೋದಲ್ಲೇ ದಾವಣಗೆರೆಗೆ ಕಳಿಸಿ ಬರ್ಲೆ?''

ಈ ಪ್ರಕರಣದ ಸಾಧಕ-ಬಾಧಕಗಳ ಕುರಿತು ಇಬ್ಬರೂ ಗಂಭೀರ ಆಲೋಚನೆ ನಡೆಸಿದರು. ಪಾಷ ತನ್ನ ಮನಸ್ಸಿನ ಸಂಶಯಗಳನ್ನೆಲ್ಲ ತೋಡಿಕೊಂಡ. ಪೊಲೀಸರ ನೆರವು ಪಡೆಯುವುದಾಗಲಿ, ಅವರನ್ನು ಅವರ ಪಾಡಿಗೆ ಕಳಿಸುವುದಾಗಲೀ ಸರಿಯಲ್ಲವೆಂಬುದು ಲೋಕಿಯ ಅಭಿಪ್ರಾಯ. ಹೇಗಾದರೂ, ಅವರ ಮನೆಯವರಿಗೆ ಸುದ್ದಿ ತಲುಪಿಸುವುದು ಸರಿಯಾದ ಉಪಾಯ.

ತಮ್ಮ ಮನೆಗಳ ವಿಳಾಸವನ್ನೇನೋ ಅವರು ನೀಡಿದರು. ಮನೆಗಳಿಗೆ ದೂರವಾಣಿ ಸಂಪರ್ಕ ಇರಲಿಲ್ಲ. ಅವರ ಗೆಳತಿಯರ ಮನೆಗಳ ದೂರವಾಣಿ ಸಂಖ್ಯೆ ನೀಡಲು ಹಿಂಜರಿದರು.

ಪಾಷನಿಗೆ ಅಲ್ಲೊಬ್ಬ ಪರಿಚಿತರಿರುವುದು ನೆನಪಿಗೆ ಬಂತು. ಪಾಷ ಈ ಮೊದಲು ಪುಸ್ತಕ ಪ್ರಕಾಶನ ಸಂಸ್ಥೆಯೊಂದರಲ್ಲಿ ಡ್ರೈವರ್ ಆಗಿದ್ದಾಗ, ಪುಸ್ತಕ ಪ್ರದರ್ಶನ ನಿಮಿತ್ತ ದಾವಣಗೆರೆಗೆ ಹೋಗುವುದಿತ್ತು. ಆಗ, ಅಲ್ಲಿನ ಜನಪ್ರಿಯ ಪತ್ರಿಕೆಯ ಸಂಪಾದಕರಾದ ಷಣ್ಮುಖಪ್ಪನವರ ಪರಿಚಯವಾಗಿತ್ತು. ಅವರ ದೂರವಾಣಿ ನಂಬರು ತಿಳಿದಿರಲಿಲ್ಲ, ಅವರ ಮನೆ ಮತ್ತು ಪತ್ರಿಕಾ ಆಫೀಸು ಒಂದೇ ಕಟ್ಟಡದಲ್ಲಿರುವ, ಅವರು ರಾತ್ರಿ ಒಂದು-ಎರಡು ಗಂಟೆಯವರೆಗೆ ಕೆಲಸಮಾಡುವ ವಿಷಯ ಈತನಿಗೆ ತಿಳಿದಿತ್ತು. ಐದಾರು ಕಡೆ ಅಲೆದಾಡಿ, ಒಂದು ಲಾರಿ ಸರ್ವೀಸ್ ಆಫೀಸಿನಿಂದ ಅವರ ನಂಬರು ದೊರಕಿಸಿದ್ದಾಯಿತು.

ಸಂಪಾದಕರು ಫೋನಿನಲ್ಲಿ ಸಿಕ್ಕಿದರು. ಪಾಷ ತನ್ನ ಪರಿಚಯ ಹೇಳಿಕೊಂಡು, ನಿಮ್ಮಿಂದ ಒಂದು ತುರ್ತು ಸಹಾಯ ಆಗಬೇಕಿದೆ ಎಂದ. ಚುಟುಕಾಗಿ ಹುಡುಗಿಯರ ಪ್ರಕರಣ ತಿಳಿಸಿ, ಅವರ ಮನೆಗಳ ವಿಳಾಸ ನೀಡಿ, ಹೇಗಾದರೂ ಈ ಸುದ್ದಿ ಅವರ ಮನೆಯವರಿಗೆ ಮುಟ್ಟಿಸಬೇಕೆಂದೂ, ನಾಳೆ ಮುಂಜಾನೆ ಬಸ್ಸಿನಲ್ಲಿ ಹುಡುಗಿಯರನ್ನು ಕಳಿಸಿಕೊಡಲಿರುವುದಾಗಿಯೂ ಹೇಳಿದ.

''ಪಾಷ, ನೀವು ಒಳ್ಳೆ ಕೆಲಸ ಮಾಡಿದಿರಿ. ನನ್ನನ್ನು ಸಂಪರ್ಕಿಸಿದ್ದು ಒಳ್ಳೆಯದಾಯ್ತು. ಅವರ ಮನೆಗಳು ಇಲ್ಲೇ ಎರಡು ಮೂರು ಕಿಲೋಮೀಟರು ದೂರದಲ್ಲಿವೆ. ಈಗಲೇ ನನ್ನ ಸಹಾಯಕನನ್ನು ಕಳಿಸಿ ಅವರ ಮನೆಗಳಿಗೆ ಸುದ್ದಿ ತಿಳಿಸುತ್ತೇನೆ. ಇನ್ನು ಒಂದು ಗಂಟೆ ನಂತರ, ಅಂದರೆ ಸುಮಾರು ಹನ್ನೊಂದು ಗಂಟೆಗೆ ಮತ್ತೆ ಫೋನ್ ಮಾಡಲು ಸಾಧ್ಯವೆ? ನಿಮ್ಮ ಸಂಪರ್ಕ ನಂಬರ್ ತಿಳಿಸಿ. ನಾನೇ ಮಾಡುತ್ತೇನೆ!'' ಎಂದರು.

ಹನ್ನೊಂದು ಗಂಟೆಗೆ ತಾನೇ ಫೋನು ಮಾಡುವುದಾಗಿ ಹೇಳಿದ ಪಾಷ. ಆತನ ಮನಸ್ಸಿನ ಅರ್ಧ ಭಾರ ಇಳಿದಂತಾಗಿತ್ತು.

''ನೀನು ಘಾಟಿ ಗುರೂ! ಎಲ್ಲಾ ಕಡೆ ಫ್ರೆಂಡ್ಸ್ ಇಟ್ಟಿದ್ದೀಯ,'' ಎಂದು ಲೋಕಿ ಅಭಿಮಾನದಿಂದ ಹೇಳಿದ.

ಆಟೋ ಮತ್ತೆ ಮನೆಯ ಕಡೆ ಹೊರಟಿತು. ಮನೆಯಲ್ಲಿ ಎಲ್ಲರ ಊಟ ಮುಗಿದಿತ್ತು. ಫಾತಿಮಾ ತನ್ನ ಬಂಜೆತನದ ಕುರಿತು, ಪ್ರೀತಿಯಿಂದ ಸಾಕಿದ ಇಬ್ಬರು ಮಕ್ಕಳು ಹುಟ್ಟಿದ ಮನೆಗಳಿಗೇ ಹಿಂದಿರುಗಿದ ಬಗ್ಗೆ, ಈಗ ಸಾರಾಳನ್ನು ಸಾಕಿ ಓದಿಸುತ್ತಿರುವ ಬಗ್ಗೆ ಹೇಳುತ್ತಿದ್ದಳು. ಈ ಪಾಷ ಎಂಬುವ ವ್ಯಕ್ತಿ ಸಹ ಯಾರೋ ಬಿಟ್ಟು ಹೋದ ಮಗು, ಸಾಕಿ ಓದಿಸಿದವರು ಕ್ರಿಶ್ಚಿಯನ್ ಫಾದರ್, ಮದುವೆಯಾದದ್ದು ಈ ಫಾತಿಮಾ ಎಂಬ ಸುಂದರಿಯನ್ನು - ಎಂದೆಲ್ಲ ವಿವರ ತಿಳಿಸಿರಬಹುದೇನೋ ಎಂದುಕೊಂಡ.

ಮತ್ತೆ ಹನ್ನೊಂದು ಗಂಟೆಗೆ ಪೆಟ್ರೋಲ್ ಬಂಕಿನಲ್ಲಿರುವ ಟೆಲಿಫೋನು ಬೂತು ತಲುಪಿದರು. ಷಣ್ಮುಖಪ್ಪನವರೇ ಫೋನು ತೆಗೆದುಕೊಂಡರು. ''ಓಹೋ ಪಾಷ! ಕಾಯ್ತಾ ಇದ್ದೆ. ಹೇಗಿದ್ದಾರೆ ನಮ್ಮೂರ ಹುಡಗಿಯರು? ನೋಡಿ, ಸೀತಾಳ ಸೋದರ ಮಾವ ಮಾತಾಡ್ತಾರೆ.'' ಎಂದು ಫೋನನ್ನು ಮತ್ತಾರಿಗೋ ಕೊಟ್ಟರು. ಪಾಷ, ಮತ್ತೊಮ್ಮೆ ಚುಟುಕು ವರದಿ ಒಪ್ಪಿಸಿದ.

''ನಾನು ಶಂಕ್ರಣ್ಣ ಅಂತ ಮಾತಾಡ್ತಿರೋದು. ಮನೆಯವ್ರೆಲ್ಲಾ ಕಂಗಾಲಾಗಿದ್ರು. ನಮ್ ಭಾವನ್ಗೆ ಹುಷಾರೇ ತಪ್ಪಿದೆ. ನಿಮ್ದು ತುಂಬಾ ಉಪ್ಕಾರ ಆಯ್ತು. ದಯವಿಟ್ಟು ನಿಮ್ಮ ವಿಳಾಸ ಕೊಡಿ. ಹೇಗೆ ಬರ್ಬೇಕು ಅಂತ ಹೇಳಿ. ನಾಳೆ ಅಲ್ಲಿಗ್ ತಲುಪ್ತೀವಿ. ನೀವು ತುಂಬಾ ತೊಂದ್ರೆ ತಗೊಂಡ್ರಿ. ನಿಮ್ಗೆ ಎಷ್ಟ್ ಥ್ಯಾಂಕ್ಸ್ ಹೇಳಿದ್ರೂ ಸಾಲ್ದು...''

''ದೊಡ್ ಮಾತಾಯ್ತು. ಮೊದ್ಲು ಷಣ್ಮುಖಪ್ನೋರ್ಗೆ ಹೇಳಿ. ನನ್ ಪರಿಚಯ ಹೇಳಿದ್‌ಕೂಡ್ಲೆ ನೆನಪ್ ಮಾಡ್ಕಂಡು ನಿಮ್ಮನೆಗೆ ಸುದ್ದಿ ಮುಟ್ಸಿದಾರೆ. ನೀವು ನಾಳೆ ಯಾವಾಗ್ಬಂದ್ರೂ ಸರಿ. ನಾನು ಮನೇಲೀ ಇರ್ತೀನಿ. ಅವ್ರ ಅಪ್ಪ ಅಮ್ಮಂದಿರ್ಗೆ ಗಾಬ್ರಿ ಆಗ್ಬೇಡಿ ಅಂತ ಹೇಳಿ. ನಿಮ್ ಮಕ್ಳು ನಮ್ ಮಕ್ಳಿದ್ದಂಗ್ಯೇ...'' ಎಂದ ಪಾಷ.

ಫೋನಿನ ಶುಲ್ಕ ತೆತ್ತು ಹೊರಬಂದಾಗ ಲೋಕಿಯ ಕಣ್ಣಿಗೆ ಪಾಷ ದೊಡ್ಡ ಹೀರೋ ಆಗಿದ್ದ. ಪಾಷನ ಮನಸ್ಸಿನ ಭಾರ ಮತ್ತಷ್ಟು ಇಳಿದಿತ್ತು. ಲೋಕಿಯನ್ನು ಆತನ ಮನೆಗೆ ತಲುಪಿಸಿ ಬಂದ.

ಅವರು ಈಗಿಂದೀಗ ಬಸ್ಸು ಹತ್ತಿದರೆ ಮುಂಜಾನೆ ಇಲ್ಲಿಗೆ ತಲುಪುತ್ತಾರೆ. ಗೊರಗುಂಟೆಪಾಳ್ಯದ ಈ ಕಿಷ್ಕಿಂಧೆ ಹುಡುಕಿ ಬರಲು ಒಂದು ಗಂಟೆಗೂ ಹೆಚ್ಚು ಕಾಲ ಬೇಕಾಗುತ್ತದೆ. ಅಥವಾ ಅಲ್ಲಿಂದ ಹೊರಡುವ ಮೊದಲನೇ ಬಸ್ಸಿನಲ್ಲಿ ಬಂದರೆ ಇಲ್ಲಿಗೆ ಬರಲು ಹನ್ನೊಂದಾಗುತ್ತದೆ. ಫಾತಿಮಾಳನ್ನೂ ಮನೆಯಲ್ಲಿರುವಂತೆ ಹೇಳಬೇಕು.

ಬೆಳಗ್ಗೆ ಮುಖ ತೊಳೆದು ಚಾ ಕುಡಿಯುತ್ತಿರಬೇಕಾದರೆ ಅಂಬಾಸಿಡರ್ ಕಾರೊಂದು ಬಂತು - ಪಾಷನ ವಿಳಾಸ ಹುಡುಕುತ್ತ.

ಪಾಷನಿಗೆ ಆಶ್ಚರ್ಯವಾಯಿತು. ರಾತ್ರಿ ಫೋನಿನಲ್ಲಿ ಸುದ್ದಿ ತಿಳಿದಕೂಡಲೇ ಸೀತೆಯ ಸೋದರ ಮಾವ ಶಂಕ್ರಣ್ಣ ಮತ್ತು ಆತನ ಹೆಂಡತಿ ಬಾಡಿಗೆ ಕಾರಿನಲ್ಲಿ ಹೊರಟು ಬಂದಿದ್ದರು. ಇಬ್ಬರೂ ನಿಧಾನ ಸ್ವಭಾವದವರು. ''ನಿಮ್ಮನ್ನ ಎಲ್ಲೊ ನೋಡಿದ್ದೀನಲ್ಲ'' ಎಂದು ಶಂಕ್ರಣ್ಣ ಹುಡುಗಿಯರನ್ನು ತಮಾಷೆ ಮಾಡಿ ಗಂಭೀರ ವಾತಾವರಣವನ್ನು ತಿಳಿಗೊಳಿಸಲು ಪ್ರಯತ್ನಿಸಿದರು. ತನ್ನ ಕತ್ತು ತಬ್ಬಿಕೊಂಡು ದುಃಖಿಸುತ್ತಿದ್ದ ಹುಡುಗಿಯರನ್ನು ''ಅಲ್ಲಾ ಕಣ್ರೆ, ಇದೇನು ನಿಮ್ಮ ಹುಡುಗಾಟಿಕೆ! ಎಲ್ಲರ್ನೂ ಬೇಜಾರ್‌ಪಡಿಸಿದ್ರಲ್ಲ'' ಎಂದು ನಯವಾಗಿ ಸಮಾಧಾನಪಡಿಸಿದಳು - ಆತನ ಪತ್ನಿ.

ಸ್ವಲ್ಪ ಸಿಡುಕಿನ ಬಂಧುಗಳು ಬಂದಿದ್ದ ಪಕ್ಷದಲ್ಲಿ ಅಕ್ಕಪಕ್ಕದ ಮನೆಯವರು ಇಣಕಿ ನೋಡುವಷ್ಟು ರಾದ್ಧಾಂತವಾಗಿರುತ್ತಿತ್ತು ಎನ್ನಿಸಿತು ಪಾಷನಿಗೆ.

ಬಂದವರು ಚಾ ಕುಡಿದನಂತರ ಕೂಡಲೇ ಹೊರಟುನಿಂತರು. ಹುಡುಗಿಯರು ಫಾತಿಮಾಳನ್ನು, ಸಾರಾಳನ್ನು ಅಪ್ಪಿಕೊಂಡು ಕಣ್ಣೀರ್ಗರೆದರು. ಎಲ್ಲರ ಮಸನಸ್ಸುಗಳೂ ಭಾರವಾಗಿದ್ದವು.

''ಅಣ್ಣಾ ಒಂದ್ ಮಾತೇಳ್ತೀನಿ. ಈ ಮಕ್ಳು ತುಂಬಾ ಹೆದರ್‍ಕೊಂಡಿವೆ. ದಯವಿಟ್ಟು ಯಾರೂ ಏನೂ ಅನ್‌ಬೇಡಿ!'' ಎಂದಳು ಫಾತಿಮಾ. ತಾನು ಹೇಳಬೇಕೆಂದಿದ್ದುದು ಅದೇ ಮಾತನ್ನು ಎಂದುಕೊಂಡ ಪಾಷ.

'ಈ ಲೋಕಿ, ರಾಜು, ಚಿಕ್ಕಣ್ಣ ಯಾವಾಗ್ಲೂ ಹಿಂಗೇನೆ. ಒಳ್ಳೇ ಸಮಯಕ್ಕೆ ಕಣ್ಣಿಗೆ ಬೀಳೊಲ್ಲ' ಎಂದು, ಯಾವುದೋ ಮೂಲೆಗೆ ಸವಾರಿ ಒಯ್ದಿರುವ ಗೆಳೆಯರನ್ನು ಬೈದುಕೊಳ್ಳುತ್ತ ಪಾಷ, ದಾವಣಗೆರೆಯವರನ್ನು ಬೀಳ್ಕೊಡಲು ಮುಖ್ಯ ರಸ್ತೆಯವರೆಗೂ ಹೋದ.

ಸಾವಿತ್ರಿ
[illegible], ೧ನೇ ಅಡ್ಡ ರಸ್ತೆ, ಕೆನರಾ ಬ್ಯಾಂಕ್ ಕಾಲೋನಿ, ವೈರಸಂದ್ರ [illegible], ಬೆಂಗಳೂರು - [illegible]

# ತ್ಸಾರ್‌ಶಾಹಿ ರಷ್ಯಾ - ಸೋವಿಯತ್ ರಷ್ಯಾ - ಯೆಲ್‌ತ್ಸಿನ್ ರಷ್ಯಾ

ಸೀಯಾರ್ಕೆ

1917ರಲ್ಲಿ ರಷ್ಯಾದಲ್ಲಿ ಜರುಗಿದ ಅಕ್ಟೋಬರ್ ಮಹಾಕ್ರಾಂತಿ ಇಪ್ಪತ್ತನೇ ಶತಮಾನದ ಅತ್ಯಂತ ಮಹತ್ವಪೂರ್ಣ ಘಟನೆ. ಕ್ರಾಂತಿಯ ನಂತರ ಕಮ್ಯೂನಿಸ್ಟ್ ನಾಯಕ ಲೆನಿನ್‌ರ ನೇತೃತ್ವದಲ್ಲಿ ಸ್ಥಾಪನೆಗೊಂಡ ದುಡಿಯುವ ಜನರನ್ನು ಪ್ರತಿನಿಧಿಸುವ ಸರಕಾರ ಇತಿಹಾಸದಲ್ಲಿ ಹೊಸ ಪುಟವನ್ನು ತೆರೆಯಿತು. ಬಂಡವಾಳಶಾಹಿ ಜಗತ್ತಿನಿಂದ ಕಳಚಿಕೊಂಡು ಶೋಷಣೆಯಿಂದ ಮುಕ್ತವಾದ ಹೊಸ ಸಮಾಜವಾದಿ ಸಮಾಜವನ್ನು ರೂಪಿಸುವ ದಿಶೆಯಲ್ಲಿ ಅಡಿಯಿರಿಸಿದ ಸೋವಿಯತ್ ರಷ್ಯಾ ಅತ್ಯಲ್ಪ ಕಾಲಾವಧಿಯಲ್ಲೇ ಅದ್ಭುತವಾದ ಸರ್ವವ್ಯಾಪಿ ಪ್ರಗತಿ ಸಾಧಿಸಿ ಜಗತ್ತನ್ನೇ ಅಚ್ಚರಿಗೊಳಿಸಿತು. ಶೋಷಣೆಯ ಸಂಕೋಲೆ ಬಿಡಿಸಿಕೊಂಡು ಎಚ್ಚೆತ್ತ ಕಾರ್ಮಿಕರು ನಿರ್ಮಾಣ ಕಾರ್ಯದಲ್ಲಿ ತೊಡಗಿದರೆ ಏನು ಪ್ರಗತಿ ಸಾಧ್ಯ ಎಂಬುದಕ್ಕೆ ಸೋವಿಯತ್ ಒಕ್ಕೂಟ ಸಾಕ್ಷಿಯಾಯಿತು. ಬಂಡವಾಳಶಾಹಿ ಶೋಷಣೆ ವ್ಯವಸ್ಥೆಗೆ ಸವಾಲಾಗಿ ನಿಂತಿತು.

ಎರಡನೇ ಮಹಾಯುದ್ಧ ಕಾಲದಲ್ಲಿ ಹಿಟ್ಲರನ ಫ್ಯಾಸಿಸ್ಟ್ ಪಡೆಗಳನ್ನು ಎದುರಿಸಿ, ಹಿಮ್ಮೆಟ್ಟಿಸಿ ಮಾತೃಭೂಮಿಯನ್ನು ರಕ್ಷಿಸಿಕೊಂಡ ಸೋವಿಯತ್ ಒಕ್ಕೂಟ ಫ್ಯಾಸಿಸ್ಟ್ ವಿರೋಧಿ ರಾಷ್ಟ್ರಗಳ ಜೊತೆಗೂಡಿ ಫ್ಯಾಸಿಸಂ ಅನ್ನು ಪರಾಜಯಗೊಳಿಸುವುದರಲ್ಲಿ ಸಫಲಗೊಂಡಿತು. ಯುದ್ಧಾನಂತರದಲ್ಲಿ ಪಂಚವಾರ್ಷಿಕ ಯೋಜನೆಗಳ ಮೂಲಕ ರಾಷ್ಟ್ರವನ್ನು ಪುನರುತ್ಥಾಪಿಸಿಕೊಂಡ ಸೋವಿಯತ್ ರಷ್ಯ ಪೂರ್ವ ಯೂರೋಪಿನ ಸಮಾಜವಾದೀ ದೇಶಗಳ ಅಸ್ತಿತ್ವದೊಂದಿಗೆ ಸಮಾಜವಾದಿ ಜಗತ್ತಿನ ನಾಯಕನಾಗಿ ನಿಂತಿತು, ಅಮೆರಿಕದ ನಾಯಕತ್ವದಲ್ಲಿದ್ದ ಸಾಮ್ರಾಜ್ಯಶಾಹಿ ಜಗತ್ತಿಗೆ ಪ್ರತಿಸ್ಪರ್ಧಿಯಾಯಿತು. ಹೊಸದಾಗಿ ಸ್ವತಂತ್ರಗೊಂಡ ದೇಶಗಳಿಗೆ ನಿಸ್ವಾರ್ಥವಾದ ಬೆಂಬಲ ನೀಡಿದ ಸೋವಿಯತ್ ರಷ್ಯ ರಾಷ್ಟ್ರೀಯ ವಿಮೋಚನಾ ಚಳವಳಿಗೆ ನೀಡಿದ ಸಹಾಯ ಸಹಕಾರ ಅತ್ಯಮೂಲ್ಯ. ಶೀತಯುದ್ಧದ ಕಾಲದಲ್ಲಿ ಅಲಿಪ್ತ ರಾಷ್ಟ್ರಗಳ ಚಳವಳಿಗೆ ಸೋವಿಯತ್ ರಷ್ಯ ಸಹಜ ಮಿತ್ರ. ಸಾಮ್ರಾಜ್ಯಶಾಹಿ ರಾಷ್ಟ್ರಗಳು ಒಡ್ಡಿದ ಶಸ್ತ್ರಾಸ್ತ್ರ ಪೈಪೋಟಿಯ ಬಲೆಗೆ ಬಿದ್ದ ಮಹಾ ಶಕ್ತಿ ರಾಷ್ಟ್ರ.

ಪ್ರಪಂಚದಲ್ಲಿ ಪ್ರಗತಿಪರ ಚಿಂತನೆಗೆ ಚಾಲನೆ ಕೊಟ್ಟ, ಶೋಷಿತ ಬಡರೈತರ, ಕಾರ್ಮಿಕರ ಹೋರಾಟಗಳಿಗೆ ಹೊಸ ಆಯಾಮ ನೀಡಿದ ಸೋವಿಯತ್ ರಷ್ಯಾ ಭಾರತದ ಮಟ್ಟಿಗೆ ಪರಮಮಿತ್ರ ರಾಷ್ಟ್ರ. ವಿಶ್ವಸಂಸ್ಥೆಯೊಳಗೆ ಹಾಗೂ ಹೊರಗೆ ಭಾರತಕ್ಕೆ ರಾಜಕೀಯವಾಗಿ ನೀಡಿರುವ ಬೆಂಬಲ ಸ್ಮರಣೀಯ. ಆರ್ಥಿಕವಾಗಿ ಭಾರೀ ಉದ್ಯಮಗಳ ಸ್ಥಾಪನೆಗೆ, ಮುಖ್ಯವಾಗಿ ಉಕ್ಕು, ತೈಲೋತ್ಪಾದನೆ ಇತ್ಯಾದಿಗಳಿಗೆ ಅದು ನೀಡಿದ ನೆರವು ಮೌಲಿಕವಾದ್ದು. ಇನ್ನು ಭಾರತದ ರಕ್ಷಣೆಗೆ ಅಗತ್ಯವಾದ ಶಸ್ತ್ರಾಸ್ತ್ರ ಸರಬರಾಜು ಸೋವಿಯತ್ ರಷ್ಯಾದಿಂದಲೆ. ಈಗಲೂ ರಷ್ಯಾದೊಂದಿಗೆ ಮೈತ್ರಿ ಏಕಪ್ರಕಾರವಾಗಿ ಮುಂದುವರಿಯುತ್ತಿದೆ.

ಎಪ್ಪತ್ತಕ್ಕೂ ಹೆಚ್ಚು ವರ್ಷಗಳ ಕಾಲ ಬಂಡವಾಳಶಾಹಿ ವ್ಯವಸ್ಥೆಗೆ ಪರ್ಯಾಯವಾಗಿ ಸಮಾಜವಾದಿ ವ್ಯವಸ್ಥೆಗೆ ಆದರ್ಶವೆನಿಸಿದ್ದ ಸೋವಿಯತ್ ರಷ್ಯಾ ಈಗ ಬರಿ ರಷ್ಯಾ ಅಷ್ಟೇ. ಸೋವಿಯತ್ ವ್ಯವಸ್ಥೆ ಕುಸಿಯಲು ಕಾರಣಗಳೇನೇ ಇದ್ದರೂ ಸಂಭವಿಸಿದ ಘಟನೆ ದುರದೃಷ್ಟಕರ. ರಷ್ಯದ ಜನತೆಗಂತೂ ದುರಂತ. ಅಕ್ಟೋಬರ್ ಮಹಾಕ್ರಾಂತಿಯನ್ನು ಬಂಡವಾಳಶಾಹಿ ಜಗತ್ತು ಸಹನೆಯಿಂದೇನೂ



ಕಾಣಲಿಲ್ಲ. ಬದಲು ಕ್ರಾಂತಿಯನ್ನು ಮೊಳಕೆಯಲ್ಲೇ ಚಿವುಟಿಹಾಕಲು ಅಂತರ್ಯುದ್ಧ ಪ್ರಚೋದಿಸಿ, ಹಸ್ತಕ್ಷೇಪವನ್ನೂ ನಡೆಸಿತು. ಸೋವಿಯತ್ ಒಕ್ಕೂಟದ ಅಸ್ತಿತ್ವವನ್ನು ಸಹಿಸದೆ ಹೋದ ಸಾಮ್ರಾಜ್ಯಶಾಹಿ ದೇಶಗಳು, ಮುಖ್ಯವಾಗಿ ಅಮೆರಿಕನ್ ಸಾಮ್ರಾಜ್ಯಶಾಹಿಯು, ಸೋವಿಯತ್ ಒಕ್ಕೂಟವನ್ನು ನಾಶಗೊಳಿಸಲು ನಡೆಸಿದ ಸನ್ನಾಹಗಳು ನಾನಾ ಬಗೆಯವು. ಬಂಡವಾಳಶಾಹಿ ಮಾರುಕಟ್ಟೆ ವ್ಯವಸ್ಥೆಯ ಶ್ರೇಷ್ಠತೆಯನ್ನು ಎತ್ತಿಹಿಡಿಯುವ ಅಮೆರಿಕ ಮತ್ತಿತರ ಪಾಶ್ಚಿಮಾತ್ಯ ರಾಷ್ಟ್ರಗಳ ಪೊಳ್ಳು ಪ್ರಚಾರಗಳಿಗೆ, ಒತ್ತಾಯಗಳಿಗೆ, ಒಡ್ಡಿದ ಆಮಿಷಗಳಿಗೆ ಗೊರ್ಬಚೆವ್, ಬೋರಿಸ್ ಯೆಲ್‌ತ್ಸಿನ್‌ನಂಥ ನಾಯಕರು ಬಲಿಬಿದ್ದು ಸಾಧಿಸಿದ್ದಾದರೂ ಏನು?

> ಒಂದು ಶತಮಾನದಲ್ಲಿ ಮಹತ್ತರ ಬದಲಾವಣೆಗಳನ್ನು ಕಂಡಿರುವ ದೇಶ ರಷ್ಯಾ. ತ್ಸಾರ್‌ಶಾಹಿ ನಿರಂಕುಶಾಡಳಿತೆಯಿಂದ ರೋಗಪೀಡಿತವಾಗಿದ್ದ ದೇಶಕ್ಕೆ ಅಕ್ಟೋಬರ್ ಮಹಾಕ್ರಾಂತಿಯಿಂದ ಮುಕ್ತಿ. ಸೋವಿಯತ್ ಒಕ್ಕೂಟದ ಸ್ಥಾಪನೆ. ಬಂಡವಾಳಶಾಹಿ ವ್ಯವಸ್ಥೆಯನ್ನು ತಿರಸ್ಕರಿಸಿ ಸಮಾಜವಾದಿ ಸಮಾಜದ ಸ್ಥಾಪನೆಯತ್ತ ದಾಪುಗಾಲು. ಅಪಾರ ಪ್ರಗತಿಯ ಸಾಧನೆ, ಪ್ರಬಲ ಶಕ್ತಿಯಾಗಿ ಉದಯ. ಎಪ್ಪತ್ತು ವರ್ಷಗಳ ಸೋವಿಯತ್ ಆಡಳಿತೆಯ ನಂತರ ಮುಕ್ತ ಮಾರುಕಟ್ಟೆ ಆರ್ಥಿಕದ ಮರೀಚಿಕೆಯ ಬೆನ್ನು ಹತ್ತಿ ತತ್ತರಿಸುತ್ತ ಈಗ ಹಿನ್ನಡೆ. ಈ ರೂಪಾಂತರಗಳೆಲ್ಲ ಸಂಭವಿಸಿದ್ದು ಈ ಇಪ್ಪತ್ತನೇ ಶತಮಾನದಲ್ಲೆ.

ಮೊದಲನೆಯದಾಗಿ ಸೋವಿಯತ್ ಒಕ್ಕೂಟದ ವಿಸರ್ಜನೆ, ಎರಡನೆಯದಾಗಿ ದೇಶದ ಸಾರ್ವಭೌಮತ್ವದ, ಸ್ವಾಭಿಮಾನದ ಅಳಿವು. ರಷ್ಯಾದ ಇಂದಿನ ಚಿಂತಾಜನಕ ಪರಿಸ್ಥಿತಿಯನ್ನು ನೋಡಿದರೆ ಅದು ವೇದ್ಯವಾಗುತ್ತದೆ. ಒಂದು ಕಾಲದಲ್ಲಿ ಸಾಮ್ರಾಜ್ಯಶಾಹಿ ದೇಶಗಳಿಗೆ ಸಿಂಹಸ್ವಪ್ನದಂತಿದ್ದ ಸೋವಿಯತ್ ರಷ್ಯಾ ಹೋಗಿ, ಈಗ ರಷ್ಯಾ ಆ ದೇಶಗಳ ಮರ್ಜಿಯನ್ನವಲಂಬಿಸಿರುವ ಹೀನ ದುರ್ಬಲ ಸ್ಥಿತಿಗೆ ಇಳಿದಿದೆ. ಕಳೆದ ಸುಮಾರು ಒಂದು ದಶಕದ ಆಡಳಿತೆಯ ಕಾಲದಲ್ಲಿ ಪ್ರಜಾಪ್ರಭುತ್ವ, ಮುಕ್ತಮಾರುಕಟ್ಟೆ ವ್ಯವಸ್ಥೆ, ಆರ್ಥಿಕ ಸುಧಾರಣೆಗಳ ಕುರಿತು ಅಬ್ಬರದ ಬೊಬ್ಬೆ ಹಾಕಿದ ಯೆಲ್‌ತ್ಸಿನ್ ರಷ್ಯದ ಜನರಿಗೆ ಕೊಟ್ಟಿರುವುದೇನು ? ಬಡತನ, ನಿರುದ್ಯೋಗ, ದೈನೇಸಿ ಜೀವನ, ಅವ್ಯವಸ್ಥೆ. ದೇಶ ಇಂದು ಆರ್ಥಿಕ ಬಿಕ್ಕಟ್ಟಿನಿಂದ ತತ್ತರಿಸುತ್ತಿದೆ. ರಷ್ಯಾದ ಅಮೂಲ್ಯವಾದ ನೈಸರ್ಗಿಕ ಸಂಪತ್ತು ಬರಿದಾಗುತ್ತಿದೆ. ಆರ್ಥಿಕ ಸುಧಾರಣೆಗಳಿಗೆ ನೆರವು ನೀಡುವುದಾಗಿ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು ನೀಡಿದ್ದ ಆಶ್ವಾಸನೆಗಳು ಹೆಚ್ಚಿನ ಮಟ್ಟಿಗೆ ಆಶ್ವಾಸನೆಗಳಾಗೇ ಉಳಿದಿವೆ. ಬಂದಷ್ಟು ನೆರವು ಭ್ರಷ್ಟ ಸರಕಾರದ ಅಧಿಕಾರಿಗಳ ಜೇಬಿಗೇ ಹೋಗಿದೆ. ಮಾರುಕಟ್ಟೆ ಸುಧಾರಣೆಗಳಿಗಾಗಿ ಐಎಂಎಫ್ ಹಣ ಒದಗಿಸಲು ವಿಧಿಸಿರುವ ಷರತ್ತುಗಳು ದೇಶದ ನೈಸರ್ಗಿಕ ಸಂಪತ್ತನ್ನು ಅಮೆರಿಕಾಗೆ ಒತ್ತೆಯಾಗಿಸುತ್ತದೆ. ರಷ್ಯಾ ಮಾಜಿ ಪ್ರಧಾನಿ ಸ್ಟೆಪಾಷಿನ್ ಪ್ರಕಾರ ದೇಶದಲ್ಲಿ ಬಡಜನರ ಸಂಖ್ಯೆ ವಿಪರೀತವಾಗಿ ಹೆಚ್ಚಾಗಿದೆ. ರಷ್ಯಾ ಡೂಮಾದ (ಪಾರ್ಲಿಮೆಂಟ್) ಸದಸ್ಯರನ್ನು ಕೊಳ್ಳಲು ಯೆಲ್‌ತ್ಸಿನ್ ಬೆಂಬಲಿಗರು ಹಣ ನೀರಿನಂತೆ ಖರ್ಚು ಮಾಡಿದ್ದಾರೆ. ಕಳೆದ ಹತ್ತು ವರ್ಷಗಳಲ್ಲಿ ಸುಮಾರು ಅಷ್ಟೇ ಸಂಖ್ಯೆಯಲ್ಲಿ ಸರಕಾರಗಳು ಬಂದು ಹೋಗಿವೆ. ಅತಿ ಕುಡಿತ, ಅನಾರೋಗ್ಯ, ಅಸಮರ್ಥತೆಯಿಂದ ತೊಳಲಾಡುತ್ತಿರುವ ಅಧ್ಯಕ್ಷ ಬೋರಿಸ್ ಯೆಲ್‌ತ್ಸಿನ್ ಬಿಕ್ಕಟ್ಟು ಉಂಟಾದಾಗ ಅದನ್ನು ಬಗೆಹರಿಸಲಾಗದೆ ಪ್ರಧಾನಿಗಳನ್ನು ಬದಲಿಸುವುದನ್ನೇ ಹವ್ಯಾಸವಾಗಿ ಮಾಡಿಕೊಂಡಂತಾಗಿದೆ. ಆಹಾರ ಪದಾರ್ಥಗಳ ತೀವ್ರವಾದ ಕೊರತೆಯನ್ನು ಅನುಭವಿಸುತ್ತಿರುವ ರಷ್ಯಾ ಇಂದು ದೊಡ್ಡ ಪ್ರಮಾಣದಲ್ಲಿ ಆಹಾರ ಪದಾರ್ಥಗಳನ್ನು ಆಮದು ಮಾಡಿಕೊಳ್ಳುತ್ತದೆ. ಇದು ದೇಶವನ್ನು ದಾಸ್ಯಕ್ಕೆ ದೂಡುವುದು ಎಂದು ಮಾಜಿ ಪ್ರಧಾನಿ ಸ್ಟೆಪಾಷಿನ್ ಹೇಳಿದ್ದಾರೆ. ಇದು ಇಂದಿನ ರಷ್ಯಾದ ಸ್ಥಿತಿ.

ಸೋವಿಯತ್ ರಷ್ಯಾದ ಪತನದಿಂದಾಗಿ ಸಮಾಜವಾದಿ ವಿಚಾರಗಳು ತಮ್ಮ ಆಕರ್ಷಣೆಯನ್ನು, ಪ್ರಸ್ತುತತೆಯನ್ನು ಕಳೆದುಕೊಂಡಿವೆ ಎಂದೇನಲ್ಲ. ಅವು ಇಂದಿಗೂ ಪ್ರಸ್ತುತ. ಏಕಶಕ್ತಿ ಕೇಂದ್ರಿತ ಇಂದಿನ ಪ್ರಪಂಚದಲ್ಲಿ ಸಾಮ್ರಾಜ್ಯಶಾಹಿಗಳ ಅಟ್ಟಹಾಸ ವಿಪರೀತದ ಮಟ್ಟಕ್ಕೆ ಹೋಗುತ್ತಿದೆ. ಆರ್ಥಿಕ ಜಾಗತೀಕರಣದ ಹೆಸರಿನಲ್ಲಿ ಬಡ ಅಭಿವೃದ್ಧಿಶೀಲ ರಾಷ್ಟ್ರಗಳನ್ನು ಅಧೀನಕ್ಕೊಳಪಡಿಸುವ ದೊಡ್ಡ ಸನ್ನಾಹವೇ ನಡೆದಿದೆ. ಸರ್ವಶಕ್ತನೆನಿಸಿರುವ ಅಮೆರಿಕ ತಾನು ಮಾಡಿದ್ದೇ ಸರಿ ಎನ್ನುವ ಧೋರಣೆಯಿಂದ ಬಲಪ್ರಯೋಗ ನಡೆಸುತ್ತಿದೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಸ್ವಾತಂತ್ರ್ಯ, ಸಾರ್ವಭೌಮತ್ವಗಳ ರಕ್ಷಣೆ, ಆರ್ಥಿಕ ಸ್ವಾತಂತ್ರ್ಯ, ಸಮಾನತೆಗಾಗಿ ಹೋರಾಟ ಮುಂದಿರುವ ದಿನಗಳಲ್ಲಿ ಬಲ ಪಡೆಯುತ್ತವೆ. ಅಕ್ಟೋಬರ್ ಮಹಾಕ್ರಾಂತಿಯ ಆದರ್ಶಗಳು ಜೀವಂತವಾಗುತ್ತಿವೆ.

# ಹೆಣ್ಣು ಮತ್ತು ಜಾಗತೀಕರಣ ಪ್ರಕ್ರಿಯೆ

ಮಹೇಶನ್

ಉಪಭೋಗ ಪ್ರವೃತ್ತಿಯನ್ನು ಹರಡುವ ಜಾಹಿರಾತುಗಳು ಬಳಸುವ ಮಾಧ್ಯಮವೆಂದರೆ ಹೆಣ್ಣು. ಕಾರ್ಲ್ ಮಾರ್ಕ್ಸ್ ಹೇಳಿದಂತೆ, ಹೆಣ್ಣನ್ನು ವ್ಯಾಪಾರದ ವೃದ್ಧಿಗಾಗಿ ಪದಾರ್ಥೀಕರಣ ಗೊಳಿಸುವುದು ಬಂಡವಾಳ ಶಾಹಿಯ ಒಂದು ಪ್ರಮುಖ ಸಾಧನೆ. ಇಂದು ಈ ಮಾತು ಅದೆಷ್ಟು ಸತ್ಯ. ಹೆಣ್ಣಿನ ಸ್ತ್ರೀತ್ವವನ್ನು ಮತ್ತು ಲೈಂಗಿಕತೆಯನ್ನು ವೈಭವೀಕರಿಸಿ ಅವಳ ವ್ಯಕ್ತಿತ್ವಕ್ಕೆ ಕುಂದಾಗುವ ರೀತಿ ಜಾಹಿರಾತುಗಳಲ್ಲಿ ಬಳಸಿಕೊಳ್ಳಲಾಗುತ್ತಿದೆ. ಅವಳ ಅಂಗಾಂಗ ಪ್ರದರ್ಶನದಿಂದ ವಸ್ತುವಿನ ಮಾರಾಟ ಯೋಗ್ಯತೆಯನ್ನು ಹೆಚ್ಚಿಸಿಕೊಳ್ಳಲಾಗುತ್ತಿದೆ.

ಪದಾರ್ಥಗಳೇ ಲೈಂಗಿಕತೆಯನ್ನು ಪ್ರಚೋದಿಸುವ ರೀತಿಯಲ್ಲಿ ಹೆಣ್ಣಿನ ಅಂಗಾಂಗಗಳನ್ನು ಜಾಹಿರಾತಿನ ವಿಷಯವನ್ನಾಗಿಸಿಕೊಂಡಿವೆ. ಇದನ್ನೇ ಮನಶ್ಶಾಸ್ತ್ರಜ್ಞರೊಬ್ಬರು ''ಪದಾರ್ಥದ ಲೈಂಗೀಕರಣವೆಂದು'' ಕರೆದಿದ್ದಾರೆ.

ಲಿಂಗ ಭೇದದ ಅಸಮಾನತೆ ಅನೇಕ ರೀತಿಯಲ್ಲಿ ಕಾಣಿಸಿಕೊಳ್ಳುತ್ತಿದೆ. ಗ್ರಾಮಾಂತರ ಪ್ರದೇಶಗಳಿಂದ ಉದ್ಯೋಗವನ್ನು ಅರಸಿ ಬಂದ ಮಹಿಳೆಯ ಪಾಡು ಚಿಂತಾಜನಕವಾದುದು. ಸಾಮಾನ್ಯವಾಗಿ ಅಂತಹ ಮಹಿಳೆಯರು ಕುಶಲಕರ್ಮಿಗಳಾಗಿರುವುದಿಲ್ಲ. ಆದ್ದರಿಂದ ಅವರಿಗೆ ದೊರೆಯುವ ಉದ್ಯೋಗ ಸಾಮಾನ್ಯವಾಗಿ ಕಷ್ಟತಮವಾದುದಲ್ಲದೆ ಅಪಾಯಕಾರಿ ಮತ್ತು ಹೀನಾಯವಾದುದಾಗಿರುತ್ತದೆ. ಇಂದು ಅನೇಕ ಕೈಗಾರಿಕೆಗಳು ಯಂತ್ರಗಳ ಅಂಗಭಾಗಗಳ ತಯಾರಿಕೆಯನ್ನು ಕಾಂಟ್ರ್ಯಾಕ್ಟ್ ಕೆಲಸದ ಮೂಲಕ ಮಾಡಿಸುತ್ತವೆ. ಇಂತಹ ಕಾಂಟ್ರ್ಯಾಕ್ಟ್ ಮತ್ತೆ ಉಪಕಾಂಟ್ರ್ಯಾಕ್ಟ್ ಕೈಗಾರಿಕೆಗಳಲ್ಲಿ ಮಹಿಳೆಯರೇ ಹೆಚ್ಚು. ಮಹಿಳೆ ಹೆಂಡತಿಯಾಗಿ, ತಾಯಿಯಾಗಿ, ಕುಟುಂಬದ ವ್ಯವಹಾರಗಳನ್ನು ನಡೆಸುವ ವ್ಯಕ್ತಿಯಾಗಿ, ಪ್ರಚಂಡ ಒತ್ತಡಕ್ಕೆ ಗುರಿಯಾಗಿದ್ದಾಳೆ.

ಜಾಗತೀಕರಣದ ಪ್ರಕ್ರಿಯೆಯಲ್ಲಿ ಕೃಷಿ ಕ್ಷೇತ್ರದಲ್ಲಿ ಉಂಟಾಗುತ್ತಿರುವ ತೀವ್ರ ಬದಲಾವಣೆಗಳು ಗ್ರಾಮಾಂತರ ಮಹಿಳೆಯ ಜೀವನದ ಮೇಲೆ ಪ್ರಭಾವವನ್ನು ಬೀರುತ್ತಿವೆ. ಕೃಷಿ ವಾಣಿಜ್ಯೀಕರಣಗೊಂಡಾಗ ಮಹಿಳೆ ಕೃಷಿ ಕಾರ್ಯದಲ್ಲಿ ತನ್ನ ಸಾಂಪ್ರದಾಯಿಕ ಸ್ಥಾನವನ್ನು ಕಳೆದುಕೊಳ್ಳುತ್ತಾಳೆ. ಸಮಾಜದ ಮುಖ್ಯವಾಹಿನಿಯಿಂದ ಅವಳು ಹೊರಗುಳಿವಂತಾಗಿದೆ.



ವಾಣಿಜ್ಯ ಬೆಳೆಗಳು ಹೆಚ್ಚಾಗಿ, ಕೃಷಿ ಯಾಂತ್ರೀಕರಣಗೊಂಡಾಗ, ದೈಹಿಕ ಪರಿಶ್ರಮ ಕಡಿಮೆಯಾದಾಗ, ಈಗಾಗಲೇ ಮಾನ್ಯತೆಯಿಂದ ವಂಚಿತಳಾಗಿರುವ ಮಹಿಳೆ ತನ್ನ ಸ್ಥಾನದ ಅಪಮೌಲ್ಯವನ್ನು ಕಾಣುತ್ತಿದ್ದಾಳೆ. ಸ್ಥಳೀಯವಾಗಿ ಬೆಳೆದು ಸ್ಥಳೀಯವಾಗಿ ಮಾರಾಟವಾಗುವ ಆಹಾರ ಧಾನ್ಯಗಳ ಕೃಷಿ ಪೂರೈಕೆ ಕಡಿಮೆಯಾಗುವುದಲ್ಲದೆ ಲಭ್ಯವಾಗುವ ಆಹಾರ ಧಾನ್ಯ ವಾಣಿಜ್ಯೀಕರಣಗೊಂಡಾಗ ಬೆಲೆಯು ದುಬಾರಿಯಾಗುತ್ತದೆ. ಕುಟುಂಬದ ಆಹಾರ ಬೇಡಿಕೆಯನ್ನು ಪೂರೈಸುವ ದಿಸೆಯಲ್ಲಿ ಹೆಚ್ಚು ಹೆಚ್ಚು ಅಸಹಾಯಕರಾಗುತ್ತೇವೆ. ವಾಣಿಜ್ಯೀಕರಣಗೊಂಡ ಕೃಷಿ ಚಟುವಟಿಕೆ ಅನೇಕ ವಿಧಗಳಲ್ಲಿ ಕೃಷಿಕನ ಮೇಲೆ ಒತ್ತಡವನ್ನು ಹೆಚ್ಚಿಸುತ್ತದೆ. ಬೆಳೆಗಳ ಪೋಷಣೆಗೆ ಅಗತ್ಯವಾದ ರಸಾಯನಿಕ ಗೊಬ್ಬರ ಅತ್ಯಂತ ದುಬಾರಿಯಾಗಿ ಅವನು ಬ್ಯಾಂಕ್‌ಗಳಲ್ಲಿ ಸಾಲ ಎತ್ತುವುದು ಅನಿವಾರ್ಯ. ಅವನಿಗೆ ದೊರೆಯುವ ಬೆಲೆ ಅಂತರರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ಕರಾರುಗಳನ್ನು ಆಧರಿಸುತ್ತದೆ. ಇವುಗಳಿಂದ ರೈತ ಸದಾಕಾಲವೂ ಅನಿಶ್ಚಿತತೆಯ ಅಸ್ಥಿರತೆಯ ಸುಳಿಯಲ್ಲಿ ಸಿಲುಕುತ್ತಾನೆ. ಅಲ್ಲದೆ ಸಾಲವನ್ನು ಮರುಪಾವತಿ ಮಾಡುವ ಶಕ್ತಿಯನ್ನು ಕಳೆದುಕೊಳ್ಳುತ್ತಾನೆ. ಈ ವಿಷವರ್ತುಲದಲ್ಲಿ ನಲುಗಿದ ಕುಟುಂಬಗಳಲ್ಲಿನ ಹೆಣ್ಣಿನ ಮೇಲೆ ಅಗಾಧ ಭಾರ ಬೀಳುವುದು ಖಚಿತ. ಇತ್ತೀಚೆಗೆ ವರದಿಯಾದ ಹತ್ತಿ ಕೃಷಿಕರ ಆತ್ಮಹತ್ಯೆಯ ಪ್ರಕರಣಗಳಿಗೂ ನಮ್ಮ ರಾಷ್ಟ್ರದ ಕೃಷಿ ಜಾಗತೀಕರಣ ನೀತಿಗೂ ಸಂಬಂಧವಿರುವುದನ್ನು ಕಡೆಗಣಿಸಬಾರದು.

ಜನಸಂಖ್ಯಾನಿಯಂತ್ರಣ ನೀತಿಗೆ ಪ್ರಪ್ರಥಮವಾಗಿ ಬಲಿಯಾಗುವ ವ್ಯಕ್ತಿ ಎಂದರೆ ಹೆಣ್ಣು. ಪ್ರಭುತ್ವ ಅವರ ಖಾಸಗಿ ಜೀವನಕ್ಕೆ ನುಗ್ಗಿ ಅವರ ಶರೀರಗಳನ್ನು ನಿಯಂತ್ರಿಸಲು ಹೇಸುವುದೇ ಇಲ್ಲ. ಇಂತಹ ಪವಿತ್ರ ಕಾರ್ಯದಲ್ಲಿ ದುಡಿಯುವ ವರ್ಗದ ಮಹಿಳೆ ಸಂಶಯಾಸ್ಪದವಾದ ತಂತ್ರಜ್ಞಾನಗಳಿಗೆ ಪ್ರಯೋಗ ಪ್ರಾಣಿಯಾಗುತ್ತಿರುವುದು ಇಂದಿನ ಕಟು ಸತ್ಯ.

ಜಾಗತೀಕರಣದಲ್ಲಿ ಆರ್ಥಿಕ ರಂಗದ ಬಹು ಮುಖ್ಯ ಮುಖವೆಂದರೆ ವಿದೇಶಿ ವಿನಿಮಯವನ್ನು ಸೆಳೆಯುವುದು. ಎಲ್ಲ ಏಷ್ಯನ್ ದೇಶಗಳು ಈ ಕಸರತ್ತಿನಲ್ಲಿ ನಿರತವಾಗಿವೆ. ಅಧಿಕ ವಿದೇಶಿ ವಿನಿಮಯದ ಸಾಧ್ಯತೆಯನ್ನು ಈ ರಾಷ್ಟ್ರಗಳೆಲ್ಲವೂ ಒಂದು ಕ್ಷೇತ್ರದಲ್ಲಿ ಕಾಣುತ್ತಿವೆ. ಅದೇ ಪ್ರವಾಸೋದ್ಯಮ. ದುರಾದೃಷ್ಟವಶಾತ್ ಈ ಕ್ಷೇತ್ರದಲ್ಲೂ ಮಹಿಳೆಯೇ ಗುರಿ. ಏಕೆಂದರೆ ಪ್ರವಾಸೋದ್ಯಮವು ಲೈಂಗಿಕ ಪ್ರವಾಸೋದ್ಯಮವಾಗಿ ಪರಿವರ್ತಿತವಾಗುವುದಕ್ಕೆ ಹೆಚ್ಚಿನ ಕಾಲ ಅನಗತ್ಯ. ವಾಸ್ತವವಾಗಿ ಮೂರನೇ ಜಗತ್ತಿನ ದೇಶಗಳು ಈಗಾಗಲೇ ಈ ಸೆಕ್ಸ್ ಟೂರಿಸಂ ವಲಯಗಳಾಗಿ ಮಾರ್ಪಟ್ಟಿವೆ.

ತೃತೀಯ ವಿಶ್ವದ ಸೌಂದರ್ಯಭರಿತ ಕಡಲ ತೀರಗಳು ಈ ನೀಚ ಉದ್ಯಮದ ಅಪವಿತ್ರ ತಾಣಗಳು. ಅನೀಸ್ ಜಂಗ್‌ರವರು ಹೇಳುವಂತೆ ''ಕಡಲ ತೀರದ ಅನೇಕ ಮನೆಗಳಿಗಷ್ಟೆ ಅಲ್ಲ, ಮಕ್ಕಳು ಅಕ್ಷರ ಕಲಿತು ತಮ್ಮ ಬದುಕಿನ ದಾರಿ ಕಂಡುಕೊಳ್ಳುವಂತೆ ಮಾಡಬೇಕಾಗಿದ್ದ ಶಾಲೆಗಳೂ ಸಹ ಪ್ರವಾಸೋದ್ಯಮದ ಕಾರಣದಿಂದಾಗಿ ಲೈಂಗಿಕ ಚಟುವಟಿಕೆಗಳ ತಾಣವಾಗಿವೆ.''

ಶ್ರೀಲಂಕ ಮತ್ತು ಥೈಲೆಂಡ್ ಇಂತಹ ಪ್ರವಾಸೋದ್ಯಮವನ್ನು ವೃದ್ಧಿಸುವ ಮುಂಚೂಣಿಯಲ್ಲಿವೆ. ವಿಪರ್ಯಾಸವೆಂದರೆ ಈ ಎರಡು ರಾಷ್ಟ್ರಗಳು ಬೌದ್ಧಧರ್ಮವನ್ನು ತಮ್ಮ ರಾಷ್ಟ್ರೀಯ ಧರ್ಮವನ್ನಾಗಿ ಘೋಷಿಸಿಕೊಂಡಿವೆ. ಆ ರಾಷ್ಟ್ರಗಳ ಪರಿಸ್ಥಿತಿಯನ್ನು ಭಾರತವು ಎದುರಿಸುವ ಸಂದರ್ಭ ಒದಗದಿರಬೇಕಾದರೆ ಈಗಲೇ ಎಚ್ಚರ ವಹಿಸುವುದು ಅಗತ್ಯ.

**ಮಹೇಶನ್, ಎಮ್.**
ನಂ. ೧೬೮೯, ೧೫ನೇ ಮೇನ್, ೩೧ನೇ ಅಡ್ಡರಸ್ತೆ, ಬನಶಂಕರಿ,
೨ನೇ ಹಂತ, ಬೆಂಗಳೂರು - ೫೬೦ ೦೭೦

## ಈ ಶತಮಾನದ ಅತಿ ಶ್ರೇಷ್ಠ ಚಿಂತಕನಾರು?



ಈ ಪ್ರಶ್ನೆಗೆ ಸಮಂಜಸ ಉತ್ತರ ಬ್ರಿಟನ್‌ನ ಬಿ.ಬಿ.ಸಿ. ಅವರನ್ನೇ ಕೇಳಿದರೆ ಒಳಿತು. ಇದೊಂದು ವಿಚಿತ್ರ. ಆದರೂ ನಿಜ.

ಕಮ್ಯೂನಿಸಂ ವಿರುದ್ಧದ ಪ್ರಚಾರ ಕಾರ್ಲ್ ಮಾರ್ಕ್ಸ್ ''ಕಮ್ಯೂನಿಸ್ಟ್ ಪ್ರಣಾಳಿಕೆ''ಯನ್ನು ಪ್ರಕಟಿಸಿದ ಕ್ಷಣದಿಂದಲೇ ಅಲ್ಲ, ಅದಕ್ಕೂ ಮುಂಚೆ ಅಂದಿನ ಬಂಡವಾಳ ಶಾಹಿ ವ್ಯವಸ್ಥೆಯ ಪರಿಣಾಮವಾಗಿ ಜರುಗುತ್ತಿದ್ದ ಕಾರ್ಮಿಕ ವರ್ಗದ ಶೋಷಣೆಯನ್ನು ವೈಜ್ಞಾನಿಕವಾಗಿ ಬಯಲಿಗೆಳೆದು ಕ್ರಾಂತಿಯ ಕಿಡಿಗಳನ್ನು ಹೊತ್ತಿಸಿದಾಗಲೇ ಆರಂಭವಾಯಿತು. ಇಂದಿನವರೆವಿಗೂ ನಿಂತಿಲ್ಲ. ಮುಂದೆಯೂ ನಿಲ್ಲುವುದಿಲ್ಲ. ಮತಧರ್ಮ, ವರ್ಣ, ಬಂಡವಾಳ ಎಲ್ಲವನ್ನೂ ಅಸ್ತ್ರಗಳನ್ನಾಗಿ ಬಳಸಿಕೊಂಡರೂ ಕಮ್ಯೂನಿಸ್ಟ್ ಸಿದ್ಧಾಂತವನ್ನು ಬಗ್ಗುಬಡಿಯಲು ಸಾಧ್ಯವಾಗಿಲ್ಲ. ಹಲವಾರು ಕಡೆ ಆಯಾ ದೇಶಗಳ ಸ್ವಯಂಕೃತಾಪರಾಧಗಳಿಂದ ಹಿಂದೆ ಬಿದ್ದಿದ್ದರೂ ಇಂದಿಗೂ ದುಡಿವ ವರ್ಗ ತನ್ನ ವಿಮೋಚನೆಗಾಗಿ ಈ ಜೀವಂತ ಸಿದ್ಧಾಂತದತ್ತ ನೋಡುತ್ತದೆ.

''ಈ ಸಹಸ್ರಮಾನದ ಅವಧಿಯಲ್ಲಿ ಮನುಕುಲವನ್ನು ಬೆಳಗಿಸಿದವರಲ್ಲಿ ಅತ್ಯಂತ ಪ್ರಭಾವಿ ವ್ಯಕ್ತಿ ಯಾರು ?'' ಇದು ಬಿ.ಬಿ.ಸಿ. ತಾನು ಜಗತ್ತಿನಾದ್ಯಂತ ನಡೆಸಿದ ಸಮೀಕ್ಷೆಯ ಪ್ರಶ್ನೆ.

ಇಡೀ ಜಗತ್ತಿನ ಜನಸಾಮಾನ್ಯರ ಅಭಿಪ್ರಾಯಗಳನ್ನು ಬಿಂಬಿಸುವ ಉತ್ತರ ಹೀಗಿದೆ :

**ಸಾಹಿತ್ಯ ಕ್ಷೇತ್ರದಲ್ಲಿ ಷೇಕ್ಸ್‌ಪಿಯರ್, ಸಂಗೀತದಲ್ಲಿ ಪಾಲ್ ಮಕಾರ್ಟನಿ, ಆದರೆ ಈ ಸಹಸ್ರಮಾನದ ಅತಿಶ್ರೇಷ್ಠ ಚಿಂತನಕಾರ ಯಾರು ? ಎಂಬ ಪ್ರಶ್ನೆಗೆ ಲೋಕದ ಉತ್ತರ ಕಾರ್ಲ್‌ಮಾರ್ಕ್ಸ್.**

ದಶಂಗಳದಲ್ಲಿ ಕಮ್ಯೂನಿಸಂ ವಿರುದ್ಧ ಅಪಪ್ರಚಾರ ವೆಸಗುತ್ತಿರುವ ಬಿ.ಬಿ.ಸಿ.ಗೆ ಈ ಪ್ರತಿಕ್ರಿಯೆಯಿಂದ ದಿಗ್ಭ್ರಾಂತಿ ಉಂಟಾಗಿದೆ.

ಸತ್ಯ ಎಂದಿಗೂ ನಿರಂತರ. ಯಾರೂ ತಡೆ ಹಿಡಿಯಲು ಸಾಧ್ಯವಿಲ್ಲ.

# ಯುದ್ಧದ ನಂತರ



ಯುದ್ಧದ ನಂತರ.....
ಮಡಿದ ಯೋಧರ ಹೆಣಗಳು ಮರಳುತ್ತವೆ ಮನೆಗೆ
ಜವಾನರು ಹೊತ್ತು ತರುತ್ತಾರೆ ಶವ ಪೆಟ್ಟಿಗೆ
ಸೇರುತ್ತಾರೆ ಜನ ಸುರಿಸುತ್ತಾರೆ ಕಣ್ಣೀರು ಮಣ
ಹೂಗುಚ್ಛ ಅರ್ಪಿಸಿ ತೊಡುತ್ತಾರೆ ಪಣ
ಸೂತಕದ ಕಳೆ ಹೊತ್ತ ಊರೆಲ್ಲ ಭಣ-ಭಣ-
ವಾದರೂ ಬಿಗಿಯುತ್ತಾರೆ ಮಂತ್ರಿಗಳು ಭಾಷಣ
ಹೆಣ ಗೋರಿ ಸೇರಿ, ಜನ ಮನೆ ಸೇರುತ್ತಾರೆ
ಹೊಟ್ಟೆ ತುಂಬ ಉಂಡು ತೇಗುತ್ತಾರೆ
ನಿಶ್ಚಿಂತೆಯಿಂದ ಮಲಗಿ ಗೊರಕೆ ಹೊಡೆಯುತ್ತಾರೆ.

ಸಾವಿನ ಸುದ್ದಿ ಕೇಳಿ ಧಾವಿಸಿ ಬಂದ ನೆಂಟರಿಷ್ಟರು
ಉದುರಿಸುತ್ತಾರೆ ಕೆಲ ಸಾಂತ್ವನದ ನುಡಿ
ಸತ್ತವನ ಕುಟುಂಬಕ್ಕೆ ಬೋಧಿಸಿ ವೇದಾಂತ, ಕಟ್ಟುತ್ತಾರೆ ಗ
ಸಂಗ್ರಹಿಸಿ ನಿಧಿಯಲ್ಲಿ ಅರ್ಪಿಸುತ್ತಾರೆ ಕಾಸು-ಪು(ಬಿ)ಡಿಕಾ
ಧನ್ಯತೆಯ ಭಾವ ಹೊತ್ತು, ನೀಡುತ್ತಾರೆ ಪೋಟೋ ಪೋ

ದಿನ, ವಾರ, ವರ್ಷ ಕಳೆದಂತೆ ತಣ್ಣಗಾಗುತ್ತದೆ ಸಾವು
ಯೋಧನ ದೇಹ ಮಣ್ಣು ಸೇರಿ ಆರುತ್ತದೆ ನೋವಿನ-ಕಾವು
ವಿಧವೆಯ ಬೋಳು ಹಣೆ, ನಿರ್ಗತಿಕ ಮಕ್ಕಳ ತುತ್ತಿನ ಹೋರಾಟ
ಅಸ್ಥಿ ಪಂಜರವಾದ ಮಾತಾ-ಪಿತರ ನಿರ್ವಹಣೆ
ಯಾರಿಗೂ ಬೇಕಿಲ್ಲ ಯೋಧನ ನಿಟ್ಟುಸಿರು ಯಾರನ್ನೂ ಕಾಡುವದಿಲ್ಲ.

ಸತ್ತ ಯೋಧನಿಗೆ ಇಲ್ಲಿದೆಯೇ ಬೆಲೆ ?
ಇದಲ್ಲವೇ ದೇಶಭಕ್ತಿಯ ಕಗ್ಗೊಲೆ !

'ದಿನಾ ಸತ್ತರೆ ಅಳುವವರಾರು ?' ಎನ್ನುತ್ತಾನೊಬ್ಬ ಅನುಭವಿಕ
'ಸತ್ತವರೇ ಹೆಚ್ಚಾದರೆ ಹೂರುವವರಾರು ?' ಹಿಡಿಯುತ್ತಾನೆ ಸಿ(ಸೈ)ನಿಕ
ರಾಶಿ ರಾಶಿ ಹೆಣ ಕಂಡು ಈಗ ಸೋರಿ ಹೋಗಿದೆ ಶೌರ್ಯ
ಬೆಚ್ಚಿಬೀಳಿಸುವ ಹೆಣದ ನಗು ಅದೆಷ್ಟು ಕ್ರೂರ
ಭೂಮಿ ಬಿತ್ತಲು ನೇಗಿಲು ಹೊಡೆದರೆ ತಲೆ ಬುರುಡೆಗಳೇ ಹೊರಬರುತ್ತವೆ
ಹಾದಿಗಡ್ಡ ನಿಂತು ಹಲ್ಕಿರಿದು ಸಾಲಾಗಿ ಅಣಕಿಸುತ್ತವೆ !
'ವಂದೇ ಮೃತರಂ, ವಂದೇ ಮೃತರಂ' ಎಂದೂ ಹಂಗಿಸುತ್ತವೆ.

**ಚಂದ್ರಕಾಂತ ಪೋಕಳೆ**
ಬಿ.ಎಸ್.ಪಿ.ಯು. ಕಾಲೇಜು, ಬೇಡಕಿಹಾಳ - ೫೯೧ ೨೧೪, ಬೆಳಗಾವಿ ಜಿಲ್ಲೆ

# ಕವಿತೆ

ಹಿಂದೆ ಬೆಳ್ದಿಂಗಳಾಗಿದ್ದ ಕವಿತೆ
ಈಗ ಬೆವರಾಗಿದೆ,
ಕಂಬನಿಯಾಗಿದೆ,
ಹಿಂದೆ ಅರುಣೋದಯವಾಗಿದ್ದ ಕವಿತೆ
ಈಗ ನೆತ್ತರಾಗಿದೆ;



ಹಿಂದೆ ತೆಂಕಣ ಗಾಳಿಯಾಗಿದ್ದ ಕವಿತೆ
ಈಗ ಬೆಂಕಿಯ ನಾಲಗೆಯಾಗಿದೆ;
ಹಿಂದೆ ಯೋಜನಗಂಧಿಯಾಗಿದ್ದ ಕವಿತೆ
ಈಗ ಮತ್ಸ್ಯಗಂಧಿಯಾಗಿದೆ,
ಮಾಂಸಗಂಧಿಯಾಗಿದೆ !

ಒಟ್ಟಿನ ಮೇಲೆ,
ಮುಗಿಲ ಮಲ್ಲಿಗೆಯಾಗಿದ್ದದ್ದು
ಮಣ್ಣಿನ ಮುತ್ತುಗವಾಗಿದೆ;
ತಾರೆಯಾಗಿದ್ದದ್ದು ನೆಲದಾವರೆಯಾಗಿದೆ !

ಪಿ. ಪಿ. ಕೆ.
೨ನೇ ಮುಖ್ಯ ರಸ್ತೆ, ವಿನಾಯಕನಗರ,
ಮೈಸೂರು - ೫೭೦೦೦೨

# ಆಟ ಪಟಾಕಿ ಮತ್ತು ನಾನು

ಮೊನ್ನೆ ಆಸ್ಟ್ರೇಲಿಯಾದವರು 'ವಿಶ್ವಕಪ್' ಗೆದ್ದಾಗ
ನನ್ನ ಪರಿಚಿತರೊಬ್ಬರು ಆನೆ ಪಟಾಕಿಗಳ ಸರಮಾಲೆಯನ್ನೇ
ಸಿಡಿಸಿದರು ! (ನಟ್ಟನಡು ರಸ್ತೆಯಲ್ಲಿ)
ನನಗೆ ಕ್ರಿಕೆಟ್ಟೆಂದರೆ ಅಷ್ಟಕಷ್ಟೆ; ಯಾರು ಗೆದ್ದವರು
ಎಂಬುದಷ್ಟಕ್ಕೇ ಸೀಮಿತ, ನನ್ನ ಆಸಕ್ತಿಯೇನಿದ್ದರೂ.
ಆತ ಗೆದ್ದವರ ಶೌರ್ಯ-ಸಾಹಸಗಳನ್ನು
ಕೆಲವು ಪಡ್ಡೆಗಳ ಬಳಿ ಬೀಗುತ್ತ ಬಣ್ಣಿಸುತ್ತಿದ್ದಾಗ
ಮಧ್ಯದಲ್ಲಿ ಒಂದು ಪ್ರಶ್ನೆ ಕೇಳಿದೆ, ತಮಾಷೆಗಾಗಿ-
ಇದೇನ್ರಯ್ಯ ಇದು, ಎಲ್ಲೋ ಮಳೆ ಬಿದ್ದರೆ
ಇಲ್ಲಿ ಛತ್ರಿ ಹಿಡಿಯುವುದು ?
ನಮ್ಮವರು ಗೆದ್ದಿದ್ದರೆ ಅದೊಂದು ಥರ, ಎಂದು.
ತಕ್ಷಣವೇ ಆತ ಸ್ಫೋಟಿಸಿ-
ಇದೇನ್ರಿ ಇದೂ ನಿಮ್ಮ ಮಾತು ? ಅದೂ ಇಂಥ ಸಮಯದಲ್ಲಿ !
ನಿಮ್ಮಂಥವರೆಲ್ಲ ದೇಶದ್ರೋಹಿಗಳ ಏಜೆಂಟರು
ಇಂಥ ಮಾತನ್ನು ಅದೇ ಆ 'ಅವರಿಗೆ' ಎಂದಾದರೂ ಕೇಳಿದ್ದೀರಾ
ಅಂದ, ತಿರಸ್ಕಾರದ ಧ್ವನಿಯಲ್ಲಿ; ದೇಶಾಭಿಮಾನದ ಗುತ್ತೇದಾರನ
ಗತ್ತಿನಲ್ಲಿ, ಮತ್ತು ಮತ್ತ್ಯಾವುದೋ ಮತ್ತಿನಲ್ಲಿ !



ಇದ್ಯಾಕೊ ಎಡವಟ್ಟಾಯಿತೆಂದು
ಮತ್ತೆ ಉಸಿರೆತ್ತದ ನಾನು
ಸುರಕ್ಷಿತವಾಗಿ ಮನೆ ಸೇರಿಕೊಂಡೆ
ಮನಸ್ಸಲ್ಲೇ ನಮ್ಮ ಧೀರಯೋಧರಿಗೆ ಯಶ ಕೋರುತ್ತ.

ಬಿ. ರಾಜಣ್ಣ

# ಏಕೀಕರಣ, ಕನ್ನಡ ಸೃಷ್ಟಿಶೀಲತೆ ಮತ್ತು ಪ್ರಸ್ತುತ ಸಂದರ್ಭ

*ಕರ್ನಾಟಕವು ಒಂದಾಗಿ ರಚನೆಗೊಂಡು 43 ವರುಷಗಳು ಕಳೆದಿವೆ. ಈ ಸಂದರ್ಭದಲ್ಲಿ ಲೇಖಕರು ತಮ್ಮ ಅಂತರಶಿಸ್ತೀಯ ಅಧ್ಯಯನದ ಫಲವಾಗಿ ರೂಪಗೊಂಡ ಪಿ.ಎಚ್.ಡಿ. ಸಂಶೋಧನಾ ಪ್ರಬಂಧದ ಒಂದು ಭಾಗವನ್ನು ಸಂಗ್ರಹ ಮಾಡಿ ಓದುಗರ ನಡುವೆ ಆರೋಗ್ಯಕರವಾದ ಚರ್ಚೆಯೊಂದನ್ನು ಆರಂಭಿಸುತ್ತಿದ್ದಾರೆ.*

**ಡಾ॥ ಸಿ. ಆರ್. ಗೋವಿಂದರಾಜು**

ಈ ಶತಮಾನದಲ್ಲಿ ಕನ್ನಡಿಗರು ನೆನಪು ಮಾಡಿಕೊಳ್ಳಲೇಬೇಕಾದ ಚಾರಿತ್ರಿಕ ಘಟನೆ ಕರ್ನಾಟಕದ ಏಕೀಕರಣ. 1956ರ ಈ ಘಟನೆ ಕನ್ನಡಿಗರ ಪ್ರಸ್ತುತ ಸಂದರ್ಭ, ಅವಸ್ಥಾಂತರಗಳನ್ನು ಗ್ರಹಿಸಲು ಇರುವ ಹಿನ್ನೆಲೆ ಎಂಬಂಥ ಕನ್ನಡಿ. ಈ ಕನ್ನಡಿಯ ಮುಖೇನ ನಮ್ಮ ಈ ಹೊತ್ತಿನ ಸಮಾಜ, ರಾಜಕಾರಣ, ಆರ್ಥಿಕತೆಗಳನ್ನು ಅರ್ಥೈಸಲು ಸಾಧ್ಯವಿದೆ. ಅಲ್ಲದೆ ಕನ್ನಡಿಗರ ಒಟ್ಟು ಸಂಸ್ಕೃತಿಗಳನ್ನು ಕೆಲವು ಒಳನೋಟಗಳೊಂದಿಗೆ ಪರಿಶೀಲಿಸಲು ಸಾಧ್ಯ. ನಮ್ಮ ಈ ಹೊತ್ತಿನ ಎಲ್ಲ ಸಂಶೋಧನೆಗಳು 'ಸಂಸ್ಕೃತಿ ಕೇಂದ್ರಿತ'ವಾದವು ಎಂದರೆ ತಪ್ಪಲ್ಲ. ನಮ್ಮ ಸಾಂಸ್ಕೃತಿಕ ಪರಿಧಿಗಳೇ ನಾಳೆಗಳ ಹಾದಿಯನ್ನು ಸುಗಮಗೊಳಿಸಲು, ವಿಸ್ತರಿಸಲು ಆಗು ಮಾಡಿಸುತ್ತವೆ. ಈ ಆಶಯದ ಹಿನ್ನೆಲೆಯಲ್ಲಿಯೇ ನಾಡಿನ ಸಮಸ್ಯೆ, ಆತಂಕಗಳನ್ನು ಬಗೆಹರಿಸಿಕೊಳ್ಳಬೇಕಿದೆ. ಆ ಮೂಲಕ ಉದ್ವೇಗದ ಕರ್ನಾಟಕವನ್ನು ಅಲ್ಲವಾದರೂ 'ನೆಮ್ಮದಿಯ ಕರ್ನಾಟಕ'ವನ್ನು ನೋಡಲು ಸಾಧ್ಯ. ಅದನ್ನು ಕನ್ನಡ ಸಾಹಿತ್ಯದ ಚಟುವಟಿಕೆಗಳು, ಸಂವೇದನೆಗಳು ಈ ಹೊತ್ತಿಗೂ ಮಾಡಿ ತೋರಿಸುವ ಸಾಮರ್ಥ್ಯವನ್ನು ಪಡೆದಿವೆ.

1956ಕ್ಕೆ ಮೊದಲು ಕನ್ನಡದ ತುಂಡಾದ ಭೂಪರಿಸರ ಮತ್ತು ಅಲ್ಲಿನ ಕನ್ನಡಿಗರು ಮೂರು ಮುಖ್ಯವಾದ ಪರಿಕಲ್ಪನೆಗಳ ಮೂಲಕ ತಮ್ಮ ಅನನ್ಯತೆಯನ್ನು ಗುರುತಿಸಿಕೊಳ್ಳಬೇಕಾದ ಜರೂರು ಇತ್ತು. ಅವೇ ಕನ್ನಡ-ಕನ್ನಡಿಗ-ಕರ್ನಾಟಕ. ಈ ಪರಿಕಲ್ಪನೆಗಳು ಅಮೂರ್ತವಾದ ಮತ್ತು ಸಂಕೀರ್ಣವಾದ ನೆಲೆಗಳಿಂದ ಅಭಿವ್ಯಕ್ತಗೊಂಡಿವೆ. ಛಿದ್ರವಾಗಿದ್ದ ಕನ್ನಡ ನೆಲಗಳಲ್ಲಿ ಕನ್ನಡ ಪ್ರಯೋಗ ಒಂದೇ ರೀತಿಯಲ್ಲಿ ಇರಲಿಲ್ಲ. ಬದಲಾಗಿ ಕನ್ನಡಿಗರಲ್ಲಿಯೇ ವಿಭಿನ್ನವಾಗಿ ಪ್ರಯೋಗ ಆಗುತ್ತಿತ್ತು. ಮಾತು ಮತ್ತು ಬರೆಹಗಳಲ್ಲಿ ಏಕರೂಪತೆ ಇರದೆ, ತಮ್ಮದೇ ಆದ ಸ್ಥಳೀಯ ಅರ್ಥ, ವ್ಯಾಕರಣ, ಉಚ್ಚಾರಣೆ, ಶೈಲಿ ಮತ್ತು ವಿನ್ಯಾಸಗಳನ್ನು ಅಭಿವ್ಯಕ್ತಿಸುತ್ತಿತ್ತು. 'ಕನ್ನಡ' ಭಾಷೆಗೆ ಭಿನ್ನ ಭಾಷಿಕರ ಭಾಷಾ ಪ್ರಯೋಗಗಳು ಸಹ ಪ್ರಭಾವ ಬೀರಿದ್ದವು. 'ಕನ್ನಡಿಗ' ಎಂಬ ಪರಿಕಲ್ಪನೆಯು ಕೇವಲ ಆ ಭಾಷೆಯನ್ನು ಆಡುವವರನ್ನು ಮಾತ್ರ ಗುರುತಿಸುತ್ತದೆ. ಆದರೆ ವಾಸ್ತವದಲ್ಲಿ ಅದು ಬೇರೆಯೇ ಆಗಿತ್ತು. ಅಂದಿನ ಸ್ಥಿತಿಗಳಲ್ಲಿ 'ಕನ್ನಡಿಗ'ರು ಅಂದರೆ ಮಾತೃಭಾಷೆ ಹೊಂದಿದ್ದವರು ಎಂಬ ಅರ್ಥ ಬರುವುದಿಲ್ಲ. ಇವರ ಜೊತೆಗೆ ಕೊಡವ, ತುಳು, ಕೊಂಕಣ, ತಿಗಳ ಮೊದಲಾದ ಉಪ ಭಾಷಿಕರು ಸಹ ಸೇರಿಕೊಳ್ಳುತ್ತಾರೆ. ಅಲ್ಲದೆ ತಮ್ಮ ಮಾತೃಭಾಷೆಯಾದ ತೆಲುಗು, ತಮಿಳು, ಉರ್ದು, ಮರಾಠಿ, ಮಲೆಯಾಳ ಮೊದಲಾದವುಗಳನ್ನು ಆಡುತ್ತಿದ್ದ ಜನರು 'ಕನ್ನಡಿಗ'ರಾಗಿಯೇ ಗುರುತಿಸಿಕೊಂಡದ್ದು ಬಹಳ ಮುಖ್ಯ. ಕೊನೆಯದಾಗಿ, 'ಕರ್ನಾಟಕ' ಎಂಬುದು ಸಾಂಸ್ಕೃತಿಕವಾಗಿ ದತ್ತವಾದ ಹೆಸರು. ಚರಿತ್ರೆಯಲ್ಲಿ ಗೆರೆ ಹಾಕಿ ತೋರುವ ರೀತಿಯಲ್ಲಿ ನಿರ್ದಿಷ್ಟವಾದ ಭೌಗೋಳಿಕ ಎಲ್ಲೆಗಳು ಇರಲಿಲ್ಲ. ಇದರಲ್ಲಿ ಒಟ್ಟಾರೆಯಾಗಿ 22 ಕರ್ನಾಟಕಗಳನ್ನು ಗುರುತಿಸಲು ಸಾಧ್ಯ. ಆಡಳಿತದ ದೃಷ್ಟಿಯಲ್ಲಿ ಅನಂತರ ಐದು 'ಕರ್ನಾಟಕ'ಗಳನ್ನು ನೋಡಬಹುದು. ಹೀಗಾಗಿ ಈ ಮೂರು ಪರಿಕಲ್ಪನೆಗಳು ಆಂತರಿಕವಾಗಿ ವಿಭಿನ್ನವಾಗಿದ್ದು ಮೇಲ್ನೋಟಕ್ಕೆ ಒಂದುಗೂಡಿರುವಂತೆ ಕಾಣುತ್ತವೆ.

ಕರ್ನಾಟಕ ಏಕೀಕರಣ ಚಳವಳಿ ಮತ್ತು ಅಂದಿನ ರಾಜಕೀಯ ಪ್ರಕ್ರಿಯೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕೆಲವು ಒಳನೋಟಗಳು ದೊರೆಯುತ್ತವೆ. ಅಂದರೆ ಹಳೆಯ ಮೈಸೂರಿನ ಸಂಸ್ಥಾನಿ ಕನ್ನಡಿಗರು ಇನ್ನುಳಿದ ಕನ್ನಡ ಪ್ರದೇಶಗಳ ಕನ್ನಡಿಗರೊಂದಿಗೆ ಏಕೀಕರಣ ವಿಚಾರದಲ್ಲಿ ಹಿಂದಕ್ಕೆ ಸರಿಯುತ್ತಿದ್ದುದು ರಾಜಕೀಯವಾದ ಸ್ವಾರ್ಥ ಚಿಂತನೆಗಳಿಂದ. ಮೈಸೂರಿಗರು ಆರಂಭದಿಂದಲೂ ಏಕೀಕರಣದ ವಿಚಾರವನ್ನು 'ರಾಜಕೀಯವಾದ ವಿಚಾರ' ಎಂದು ಪರಿಗಣಿಸಿ ಅದಕ್ಕೆ ಹೆಚ್ಚಿನ ಒಲವು ತೋರಿಸುತ್ತಿರಲಿಲ್ಲ. ಆದರೆ ತಮ್ಮ ಸಂಸ್ಥಾನದಲ್ಲಿ ಮಾಡುತ್ತಿದ್ದ ಚಟುವಟಿಕೆಗಳು ಮಾತ್ರ ರಾಜಕೀಯಕ್ಕೆ ಸಂಬಂಧಪಟ್ಟವೇ. ಇಲ್ಲಿ ಇವರಿಗೆ 1881ರಿಂದಲೂ ರಾಜಕೀಯವಾದ 'ಟ್ರೈನಿಂಗ್' ಇತ್ತು. 'ಪ್ರಜಾ ಪ್ರತಿನಿಧಿಕ ಸಭೆ'ಯು ಎಷ್ಟು ಪ್ರಾತಿನಿಧಿಕವಾಗಿತ್ತು ಎಂಬ ವಿಚಾರ ಬೇರೆಯ ಚರ್ಚೆಯಾದರೂ ಇವರಿಗಂತೂ ರಾಜಕಾರಣದ ಪಟ್ಟುಗಳು ಯಾವ ರೀತಿಯವು ಎಂಬ ಪ್ರಜ್ಞೆ ಬಾರದೆ ಇರಲಿಲ್ಲ. ಇನ್ನುಳಿದ ಕನ್ನಡ ಪ್ರದೇಶಗಳ ಕನ್ನಡಿಗರಿಗೆ ರಾಜಕೀಯ ಪಟುತ್ವ ಇಲ್ಲದಿದ್ದರೂ ಒಂದೇ ಆಡಳಿತದ [illegible] ತುಡಿತ ಇತ್ತು. ತಮ್ಮ ಅಧಿಕಾರ, ಸ್ಥಾನ, ಗೌರವಗಳನ್ನು ಬೇರೆ ಕನ್ನಡಿಗರೊಂದಿಗೆ ಹಂಚಿಕೊಳ್ಳಬೇಕಾದ ಮನೋಭಾವ ಮೈಸೂರಿಗರಿಗೆ ಬಂದಿರಲಿಲ್ಲ. ಜೊತೆಗೆ ಮೈಸೂರು ಸಂಸ್ಥಾನದಲ್ಲಿನ ರಾಜಕೀಯವಾದ ಪ್ರಕ್ರಿಯೆಗಳು ಜಾತೀಯತೆಯೊಂದಿಗೆ ಬೆರೆತು ತಮ್ಮ ತಮ್ಮಲ್ಲೆ ಸಂಘರ್ಷಗಳನ್ನುಂಟು ಮಾಡಿದ್ದವು. ಸ್ವಾತಂತ್ರ್ಯಾನಂತರ ಮೈಸೂರಿನ ಕನ್ನಡಿಗರು ಏಕೀಕರಣದ ಬಗ್ಗೆ ಒಲವು ತೋರಿಸಿದ್ದು ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಿಕೊಳ್ಳುವ ಸ್ವಾರ್ಥ ಚಿಂತನೆಯಿಂದ. ಇನ್ನುಳಿದವರ ಬೆಂಬಲ ಬೇಕು ಅಂದಾಗ ಅದನ್ನು ತಮ್ಮ ಹಿತದೊಂದಿಗೆ ನೋಡುತ್ತಿದ್ದ ಇವರ ನಿಲುವುಗಳು ಏಕೀಕರಣದ ಆಶಯವನ್ನು ಮಂದಗತಿಯಲ್ಲಿ ವ್ಯಕ್ತ ಆಗುವಂತೆ ಮಾಡಿದ್ದವು. ಏಕೀಕರಣ ಆಗಲೇಬೇಕಾದ ಅನಿವಾರ್ಯ ಸ್ಥಿತಿಯಲ್ಲಿಯೂ ಹಳೆಯ ಮೈಸೂರು ಸಂಸ್ಥಾನಿಕರು ಪ್ರಬಲವಾಗಿಯೇ ವಿರೋಧಿಸಿ ಸೋತರು. ಆದರೆ ಸೋಷಿಯಲಿಸ್ಟ್, ಕಮ್ಯುನಿಸ್ಟ್, ಅಕರಾನಿ ಪರಿಷತ್ತಿನಂಥ ವಾಮಪಂಥೀಯರು ಏಕೀಕರಣದ ಚಿಂತನೆಗೆ ಹೆಚ್ಚಿನ ಕಾಳಜಿ ವ್ಯಕ್ತಪಡಿಸಿ ಜನರೊಂದಿಗೆ, ಭಾವನೆಗಳೊಂದಿಗೆ ಆಗುಮಾಡಿಸಿದ್ದು ಗಮನಿಸಬೇಕಾದ ವಿಚಾರ. ಅಂತೆಯೇ ಸಾಹಿತಿ-ಕಲಾವಿದರು ಏಕೀಕರಣದ ಆಶಯಕ್ಕಾಗಿ ಪ್ರದೇಶ, ರಾಜಕೀಯ, ಸ್ವಾರ್ಥಪರತೆಗಳನ್ನು ಬಿಟ್ಟು ಚಿಂತನೆ ಮಾಡಿದ್ದು ಹಾಗೂ ಚಳವಳಿಯನ್ನು ಚಾಲ್ತಿಯಲ್ಲಿ ಇಟ್ಟದ್ದು ಸಹ.

ಸಾಮಾಜಿಕವಾದ ಜಾತಿ-ಕೋಮುವಾರು ಚಿಂತನೆಗಳು ಮೊಟ್ಟ ಮೊದಲು ಕಾಣಿಸಿಕೊಂಡಿದ್ದು ಹಳೆಯ ಮೈಸೂರು ಸಂಸ್ಥಾನದಲ್ಲಿಯೇ. ಈ ಶತಮಾನದ ಮೊದಲ ವರುಷಗಳಲ್ಲಿಯೇ ವೀರಶೈವ, ಒಕ್ಕಲಿಗ, ಮುಸ್ಲಿಮ್ (ಮಹಮದೀಯ)ರು ತಮ್ಮ ತಮ್ಮ ಹಿತರಕ್ಷಣೆಗಾಗಿ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿಕೊಂಡಿದ್ದರು. ಉತ್ತರ ಕರ್ನಾಟಕದಲ್ಲಿಯೂ ಜಾತೀಯವಾದ ತಾರತಮ್ಯಗಳು ಇದ್ದವಾದರೂ ಸಂಘಟಿತ ಅಥವಾ ಸಾಂಸ್ಥಿಕ ರೂಪಗಳಿಗೆ ಇನ್ನೂ ಬಂದಿರಲಿಲ್ಲ. ಹಳೆಯ ಮೈಸೂರಿಗರಲ್ಲಿನ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಚಳವಳಿ ಚಿಂತನೆಗಳ ಹಿನ್ನೆಲೆಯಲ್ಲಿ ಈ ಜಾತಿ-ಕೋಮುವಾರು ಸಂಸ್ಥೆಗಳು ಹುಟ್ಟಿಕೊಂಡವು. ಬ್ರಾಹ್ಮಣೇತರರು ಆರಂಭದಲ್ಲಿ ಬ್ರಾಹ್ಮಣರಿಗೆ ಸರಿಸಮನಾಗಿ ಶಿಕ್ಷಣ ಮತ್ತು ಉದ್ಯೋಗಾವಕಾಶಗಳನ್ನು ಪಡೆಯುವ ಆಶಯವನ್ನು ಮಾತ್ರ ಹೊಂದಿದ್ದರು. ಹೀಗಾಗಿ ಕಾಂಗ್ರೆಸಿನ ಚಟುವಟಿಕೆಗಳು ಹಾಗೂ ಬ್ರಾಹ್ಮಣರಿಂದ ಕೂಡಿದ್ದ ಈ ಪಕ್ಷದ ಸ್ವಾರ್ಥ ನಿಲುವುಗಳು ಮುಂದಿನ ಸಂಘರ್ಷಗಳಿಗೆ ಎಡೆ ಮಾಡಿಕೊಟ್ಟಿತು. ಇದರಿಂದಾಗಿ ಕಾಂಗ್ರೆಸ್ ಒಡೆದದ್ದೇ ಅಲ್ಲದೆ 'ಪ್ರಜಾಮಿತ್ರಮಂಡಳಿ', 'ಪ್ರಜಾಪಕ್ಷ', 'ಪ್ರಜಾ ಸಂಯುಕ್ತ ಪಕ್ಷಗಳು, ಸಂಘಟನೆಗಳು ಹುಟ್ಟಿಕೊಂಡವು. ಇಂಥ ಪ್ರಕ್ರಿಯೆಗಳು ಕರ್ನಾಟಕದ ಒಂದುಗೂಡುವಿಕೆಯ ಚಿಂತನೆಯಲ್ಲಿ ನೇರ ಪ್ರಭಾವ ಬೀರದೆ ಇರಲಿಲ್ಲ. ಉತ್ತರ ಕರ್ನಾಟಕದಲ್ಲೂ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರು ಎಂಬ ಎರಡು ಪ್ರಮುಖ ವಿಭಜನೆಗಳು ಆಗಿದ್ದವು. ಎರಡೂ ಕಡೆಯೂ ಸ್ವಾತಂತ್ರ್ಯ ಹೋರಾಟಕ್ಕೆ ಮೊದಲು ಸ್ಪಂದಿಸಿದವರು ಶಿಕ್ಷಿತ ಮೇಲ್ಮಧ್ಯಮ ವರ್ಗದ ಜನರೇ. ಅಂದರೆ ಬ್ರಾಹ್ಮಣರು. ಇದು ಏಕೀಕರಣದ ಚಳವಳಿಯಲ್ಲಿಯೂ ವ್ಯಕ್ತ ಆಯಿತು. ಆದರೆ ಚಳವಳಿಯನ್ನು ಹಾಗೂ ಏಕೀಕರಣದ ತುಡಿತವನ್ನು ಚಾಲ್ತಿಯಲ್ಲಿ ಇಟ್ಟವರು ಉತ್ತರ ಕರ್ನಾಟಕದ ವೀರಶೈವರೇ.

ಹಳೆಯ ಮೈಸೂರಿನ ಒಕ್ಕಲಿಗ-ಗೌಡರು ಬಹುಸಂಖ್ಯಾತರಾಗಿದ್ದಂತೆ ಉತ್ತರದಲ್ಲಿ ಲಿಂಗಾಯಿತರೇ ಬಹು ಸಂಖ್ಯೆಯಲ್ಲಿ ಇದ್ದರು. ಇದರಿಂದ ಎರಡೂ ಕಡೆಯವರು ಏಕೀಕರಣದ ವಿಚಾರದಲ್ಲಿ ಭಿನ್ನವಾಗಿ ಆಲೋಚಿಸುವಂತೆ ಆಯಿತು. ವೀರಶೈವರು ಏಕೀಕರಣದ ಕಾಳಜಿಯನ್ನು ಸಹಜವಾಗಿ ವ್ಯಕ್ತಪಡಿಸಿದ್ದು ಅವರ ಚಾರಿತ್ರಿಕ ಮನೋಚಿಂತನೆಗಳ ಹಿನ್ನೆಲೆಯಿಂದ. ಕೃಷಿ, ವ್ಯಾಪಾರ-ವಾಣಿಜ್ಯ ವೃತ್ತಿಗಳನ್ನು ಪಾಲಿಸುತ್ತಾ ಬಂದಿದ್ದ ವೀರಶೈವರು ಕನ್ನಡದ ಭಾಷಾ ಬಳಕೆಯನ್ನು ಬಿಟ್ಟು ಇನ್ನುಳಿದ ಭಾಷಾ ಪ್ರಯೋಗಗಳನ್ನು ಮಾಡಿದವರಲ್ಲ. ಅಷ್ಟೇ ಅಲ್ಲದೆ ಇವರಿಗೆ ವಚನಗಳ ಪರಂಪರೆ ಬಹಳ ಗಾಢವಾಗಿತ್ತು. ಇದರಿಂದಾಗಿ ಭಿನ್ನ ಭಾಷಿಕ ಒತ್ತಡಗಳನ್ನು ಕನ್ನಡ ಮನೋಚಿಂತನೆಗಳ ಮೂಲಕ ಪ್ರತಿಭಟಿಸಿದ್ದು ಸಹಜವಾದ ಪ್ರತಿಕ್ರಿಯೆ. ಹಳೆಯ ಮೈಸೂರಿನಲ್ಲಿಯೂ ಕನ್ನಡ ಚಿಂತನೆಗಳು ಹಿನ್ನೆಲೆಯಾಗಿ ಇದ್ದವಾದರೂ ಮೈಸೂರಿನ ಒಡೆಯರ ಆಡಳಿತವು ಭಿನ್ನ ಭಾಷಿಕರ ಆಕ್ರಮಣಶೀಲ ಒತ್ತಡಗಳನ್ನು ಅರಿವಿಗೆ ತಂದುಕೊಟ್ಟಿರಲಿಲ್ಲ. ಹೀಗಾಗಿ ಉತ್ತರ ಕರ್ನಾಟಕದ ವೀರಶೈವ ಏಕೀಕರಣದ ಸಹಜವಾದ

ಕಾಳಜಿ ಹಳೆಯ ಮೈಸೂರಿಗರಿಗೆ ಅನುಮಾನ, ಶಂಕೆಗಳಿಗೆ ಎಡೆಮಾಡಿಕೊಟ್ಟಿತ್ತು. ಅಂದರ ಏಕೀಕರಣಗೊಳ್ಳುವುದರ ಮೂಲಕ ಲಿಂಗಾಯಿತರ ಪ್ರಾಬಲ್ಯ ಹೆಚ್ಚಿ, ತಮ್ಮ ಸ್ಥಾನಗಳೆಲ್ಲವೂ ಹಂಚಿಕೆಯಾಗಿ ಬಿಡುತ್ತವೆ ಎಂಬ ಆತಂಕವಿದೆ. ಈ ಕಾರಣದಿಂದಲೆ ಒಕ್ಕಲಿಗರು ಏಕೀಕರಣವನ್ನು ಬೆಂಬಲಿಸದೆ ಹಿಂದಕ್ಕೆ ಸರಿಯುತ್ತಿದ್ದದ್ದು. ಉತ್ತರ ಕರ್ನಾಟಕದ ಸಂಪ್ರದಾಯವಾದಿ ಬ್ರಾಹ್ಮಣರು ಏಕೀಕರಣದ ವಿಚಾರದಲ್ಲಿ ಕನ್ನಡಿಗರೆಲ್ಲರೂ ಒಂದುಗೂಡುತ್ತಿದ್ದುದನ್ನು ಸಹಿಸುತ್ತಿರಲಿಲ್ಲ. ಅವರಿಗೆ ಜಾತಿಯ ಕಟ್ಟುಪಾಡುಗಳಿಗಿಂತ ಏಕೀಕರಣ ಮುಖ್ಯ ಅನ್ನಿಸಿರಲಿಲ್ಲ. ಇಂಥ ತಾರತಮ್ಯಗಳು ಕನ್ನಡಿಗರನ್ನು ಒಂದುಗೂಡಿಸಿ ಚಳವಳಿಯನ್ನು ಪ್ರಬಲಗೊಳಿಸಲು ಅಡ್ಡಿ ಉಂಟುಮಾಡಿದವು. ಈ ಅಡ್ಡಿ-ಆತಂಕಗಳನ್ನು ಪರಿಹರಿಸಲು ಜಾತಿಗಳ ನಿರ್ಬಂಧಗಳನ್ನು ಮೀರಿ ಸಾಹಿತಿಗಳು ಪ್ರಯತ್ನಪಟ್ಟಿದ್ದಾರೆ.

ಆರ್ಥಿಕವಾದ ಆಯಾಮಗಳು ಸಹ ಏಕೀಕರಣ ಚಳವಳಿಯಲ್ಲಿನ ಚಟುವಟಿಕೆಗಳ ಮೇಲೆ ಪ್ರಭಾವ ಬೀರಿವೆ. ಇಲ್ಲಿಯೂ ಕನ್ನಡದ ವಿಭಜಿತ ಪ್ರದೇಶಗಳಲ್ಲಿನ ಕನ್ನಡಿಗರು ಆಲೋಚಿಸಿದ್ದು ಭಿನ್ನವಾಗಿಯೆ. ಏಕೀಕರಣದ ಪ್ರಕ್ರಿಯೆಗಳು ಆರಂಭಗೊಂಡದ್ದು ಕನ್ನಡದ ನೆಲದ ಸಂಪನ್ಮೂಲಗಳು ಕನ್ನಡಿಗರಿಗೆ ಮತ್ತು ಕರ್ನಾಟಕದ ಅಭಿವೃದ್ಧಿಗೆ ಉಪಯೋಗ ಆಗುತ್ತಿಲ್ಲ ಎಂಬ ಕಾರಣಕ್ಕಾಗಿ. ಈ ಮಾತು ಮೈಸೂರೇತರ ಕನ್ನಡ ಪ್ರದೇಶಗಳಿಗೂ ಅನ್ವಯಿಸುತ್ತದೆ. ಏಕೆಂದರೆ ಈ ವೇಳೆಗಾಗಲೇ ಮೈಸೂರು ಸಂಸ್ಥಾನದಲ್ಲಿ ಮಹಾರಾಜರ, ಕಮೀಷನರುಗಳ ಹಾಗೂ ದಿವಾನರುಗಳ ಆಡಳಿತವು ಆರ್ಥಿಕವಾಗಿ ಮುಂದುವರೆದ 'ಮಾದರಿ ಮೈಸೂರ'ನ್ನು ಕಟ್ಟಿ ಕೊಳ್ಳುವ ಹಾದಿಯಲ್ಲಿತ್ತು. ಆಂಗ್ಲರ ಆಧುನಿಕವಾದ ಎಲ್ಲ ರೀತಿಯ ಚಿಂತನೆ, ಪರಿಕರಗಳು ಮೈಸೂರಿಗರಿಗೆ ಲಭ್ಯ ಆಗುತ್ತಿದ್ದವು. ಆದರೆ ಇನ್ನುಳಿದ ಕನ್ನಡಿಗರಿಗೆ ಬೇರೆಯೇ ಸನ್ನಿವೇಶವಿತ್ತು. ಅಲ್ಲಿ ಕನ್ನಡ ಸಂಪನ್ಮೂಲಗಳು ಬೇರೆ ಭಾಷಿಕರ ಅಭಿವೃದ್ಧಿಗೆ ಉಪಯೋಗ ಆಗುತ್ತಿದ್ದುದೇ ಹೆಚ್ಚು. ಅಲ್ಲದೆ ಪ್ರಾದೇಶಿಕವಾಗಿ ಹಳೆಯ ಮೈಸೂರು ಹೆಚ್ಚಿನ ನೀರಾವರಿ ಮತ್ತು ಇನ್ನಿತರೇ ಸೌಲಭ್ಯಗಳನ್ನು ಪಡೆದಿತ್ತು. ಆದರೆ ಉತ್ತರ ಕರ್ನಾಟಕದ ಭೂ ಪರಿಸರವು ಅಂಥ ವಿಪುಲವಾದ ನೀರಾವರಿಯನ್ನು ಹೊಂದಿರಲಿಲ್ಲ. ಹೀಗಾಗಿ ಈ ಪ್ರದೇಶ ಆರ್ಥಿಕವಾಗಿ ಅಭಿವೃದ್ಧಿ ಹೊಂದಬೇಕಾದ ಅಗತ್ಯತೆ ಇತ್ತು. ಏಕೀಕರಣದ ಕಾಳಜಿಯನ್ನು ಸಹಜವಾಗಿ ವ್ಯಕ್ತಪಡಿಸಿದ ಉತ್ತರ ಕರ್ನಾಟಕದ ಕನ್ನಡಿಗರ ಬಗೆಗೆ ಹಳೆಯ ಮೈಸೂರಿನ ಕನ್ನಡಿಗರು ಅನುಮಾನದಿಂದ ನೋಡುವಂತೆ ಆಯಿತು. ಇಲ್ಲಿನ ಸಂಪನ್ಮೂಲಗಳು ಹಾಗೂ ಶ್ರಮ ಉತ್ತರದ ಬರಡು ಭೂಮಿಗೆ ವ್ಯಯವಾಗಬೇಕಾದ ಪ್ರಸಂಗ ಬರುವುದು ಎಂಬ ಕಾರಣಕ್ಕಾಗಿ ಈ ಕಡೆಯವರು ಏಕೀಕರಣಕ್ಕೆ ವಿರೋಧವಾಗಿದ್ದರು. ಆದರೆ ಇದನ್ನು ಬಹುಪಾಲು ಮೈಸೂರಿನ ಒಕ್ಕಲಿಗರು ವ್ಯಕ್ತಪಡಿಸಿದ್ದರಿಂದ 'ಗೌಡರು ವಿರೋಧಿಸಿದರು' ಎಂಬ ಜಾತಿಯ ನಿಲುವು ಸೇರಿಕೊಂಡಿತು. ಇದನ್ನು ಯಾವುದೇ ಜಾತಿ-ಕೋಮಿನವರು ವಿರೋಧಿಸಿದ್ದರೂ ಆ ಜಾತಿಯ ಮೂಲಕವೇ ಬೆಳಕಿಗೆ ಬರುತ್ತಿದ್ದು ಎಂಬುದನ್ನು ಇಲ್ಲಿ ಗಮನಿಸಬೇಕು. ಮೈಸೂರು ಸಂಸ್ಥಾನಿಕರು ಏಕೀಕರಣವನ್ನು ವಿರೋಧಿಸುತ್ತಿದ್ದುದು ಆರ್ಥಿಕವಾದ ಕಾರಣದಿಂದಲೂ ಹೌದು. ಬಂದರು ಕನ್ನಡ ಪ್ರದೇಶಗಳು ಬ್ರಿಟಿಷ್ (ಮದ್ರಾಸ್) ಕರ್ನಾಟಕಕ್ಕೆ ಸೇರಿತ್ತು. ಆರ್ಥಿಕವಾಗಿ ಹೆಚ್ಚಿನ ಲಾಭ ತರುತ್ತಿದ್ದ ಈ ಪ್ರದೇಶ ವಸಾಹತುಶಾಹಿ ಬ್ರಿಟಿಷರ ಅಭಿವೃದ್ಧಿಗೆ ಕಾರಣ ಆಯಿತು. ಈ ಕುತಂತ್ರವನ್ನು ಅರಿತು ವಿರೋಧ ಕಟ್ಟಿಕೊಂಡವರು ಹೈದರ್ ಮತ್ತು ಟಿಪ್ಪು ಅವರುಗಳು ಮಾತ್ರ. ಮೈಸೂರಿನ ಮಹಾರಾಜರಾಗಲಿ, ಜನತೆಯಾಗಲಿ ಈ ಬಗ್ಗೆ ಚಕಾರವೆತ್ತಲಿಲ್ಲ ಎಂಬುದನ್ನು ಗಮನಿಸಬೇಕಾಗಿದೆ.

ಸಾಂಸ್ಕೃತಿಕ ವಿಚಾರಗಳಾದ ನಾಡು-ನುಡಿ ಚಿಂತನೆಗಳು ರಾಜಕೀಯ, ಸಾಮಾಜಿಕ, ಆರ್ಥಿಕ ಮೊದಲಾದ ಎಲ್ಲ ರೀತಿಯ ತಾರತಮ್ಯಗಳನ್ನು ಅಲ್ಲಗಳೆಯುವುದರ ಮೂಲಕ ಏಕೀಕರಣವನ್ನು ಸಾಧ್ಯವನ್ನಾಗಿಸಿದವು. ನಮ್ಮದೇ ಆದ ದೇಶೀ ಚಿಂತನೆಗಳನ್ನು ವಸಾಹತುಶಾಹಿ ಒಡ್ಡಿದ ಪಾಶ್ಚಾತ್ಯ ಅವಸ್ಥಾಂತರಗಳಿಗೆ, ಅಡ್ಡಿ ಆತಂಕಗಳಿಗೆ ಆತ್ಮರಕ್ಷಣೆಯ ಪರಿಕರಗಳನ್ನಾಗಿ ಬಳಸಿದ್ದು ಏಕೀಕರಣದ ಆಶಯವನ್ನು ಕಂಡುಕೊಳ್ಳಲು ಸಾಧ್ಯ ಮಾಡಿತು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ನವೋದಯ ಮತ್ತು ಸ್ವಲ್ಪ ಮಟ್ಟಿಗೆ ಪ್ರಗತಿಶೀಲರ ಚಿಂತನಾ ಕ್ರಮಗಳು ಸ್ವಾತಂತ್ರ್ಯ ಮತ್ತು ಏಕೀಕರಣದ ಆಶಯಗಳನ್ನು ಪ್ರತ್ಯಕ್ಷವಾಗಿ ನೋಡಲು ಸಾಧ್ಯವನ್ನಾಗಿಸಿದವು. ಈ ಎರಡೂ ಪಂಥಗಳ ಸಾಹಿತಿಗಳು ಏಕೀಕರಣಕ್ಕೆ ಒಂದು ಭದ್ರವಾದ ನೆಲೆಗಟ್ಟನ್ನು ಹಾಕಿಕೊಡುವುದರ ಮೂಲಕ ಬೇರೆ ಭಾಷಿಕರ ಅಭಿವ್ಯಕ್ತಿಗಳಿಗೆ ಸರಿಸಮನಾಗಿ ನಿಲ್ಲುತ್ತಾರೆ. ಹಿಂದಿನ ಸಾಂಸ್ಕೃತಿಕ ಸಂಗತಿಗಳ ಮೂಲಕ 'ಸಾಂಸ್ಕೃತಿಕ ಕರ್ನಾಟಕ'ವನ್ನು ಕಂಡುಕೊಂಡ ಇವರು ಕೇವಲ ರಾಜಕೀಯ ಮುದ್ರೆಗಾಗಿ ಕಾಯಬೇಕಾಯಿತು. ರಾಜಕೀಯವಾಗಿ ಒಂದುಗೂಡಲು ಎದುರು ಆಗುತ್ತಿದ್ದ ಅನೇಕ ಅಡ್ಡಿ-ಆತಂಕಗಳನ್ನು ಸಮಕಾಲೀನ ಸಂದರ್ಭದಲ್ಲಿಯ ತಮ್ಮ ಸಾಹಿತ್ಯಾಭಿವ್ಯಕ್ತಿಯ ಮೂಲಕ ಬಗೆಹರಿಸಲು ಪ್ರಯತ್ನಿಸಿದ ತಾತ್ವಿಕತೆ ಬಹಳ ಮುಖ್ಯ. ಈ ಎಚ್ಚರವನ್ನು ಸಾಂಸ್ಕೃತಿಕವಾಗಿ ಕಾಯ್ದುಕೊಂಡು ಬಂದದ್ದು ಆಧುನಿಕ ಕನ್ನಡ ಸಾಹಿತ್ಯ ಮತ್ತು ಸಾಹಿತ್ಯಕ ಸೃಷ್ಟಿಶೀಲ ಚಟುವಟಿಕೆಗಳು. ಸಾಹಿತ್ಯದಲ್ಲಿ ಕಾವ್ಯಾಭಿವ್ಯಕ್ತಿ ಬಹಳ ಮಹತ್ವದ್ದು. ಇದಕ್ಕೆ ಇರುವ ಜನಪ್ರಿಯತೆಯು ಅದರ ಗುಣಲಕ್ಷಣಗಳಿಂದ ಬಂದಿರುವಂಥದ್ದು. ಅದನ್ನು ಗಮನದಲ್ಲಿ ಇಟ್ಟುಕೊಂಡೇ ಕನ್ನಡ ಕವಿಗಳು ತಮ್ಮ ಕಾವ್ಯ ಚಿಂತನೆಗಳಲ್ಲಿ ಏಕೀಕರಣದ ಜಾಗೃತಿಯನ್ನು ಮೂಡಿಸಿದ್ದಾರೆ. ಇಲ್ಲಿ ಬರುವ ಭುವನೇಶ್ವರಿ, ಕನ್ನಡ ತಾಯಿ, ಕನ್ನಡಮ್ಮ, ಕುಲದೇವಿ, ಕನ್ನಡಿಗರ ಮಾತೆ ಮೊದಲಾದವು 'ಹೆಣ್ಣು ಸಂಕಥನ'ದ ಸೌಮ್ಯ ರೂಪವನ್ನು ಹುಟ್ಟಿಹಾಕಿವೆ. ಜೊತೆಗೆ ಕ್ಷಾತ್ರ ತೇಜಸ್ಸಿನ, ವೀರತ್ವದ, ಕೆಚ್ಚಿನ, ಉಗ್ರರೂಪದ ಕ್ರಾಂತಿ, ಮಾರಿ, ಚಂಡಿ-ಚಾಮುಂಡಿಯ ವೀರತೆಯ 'ರೌದ್ರರೂಪಿ ಸಂಕಥನ'ವನ್ನೂ ನೋಡ ಬಹುದು. ಹೀಗೆ ಅನೇಕ ವಿಚಾರಗಳು ಏಕೀಕರಣ ವನ್ನು ಆಗು ಮಾಡಿಸಲು ಪ್ರೇರೇಪಿಸಿವೆ. ಇನ್ನುಳಿದ ಕತೆ, ಕಾದಂಬರಿ, ನಾಟಕ ಪ್ರಕಾರಗಳು ಸಹ ಚಾರಿತ್ರಿಕ, ಸಾಮಾಜಿಕ ವಿಚಾರಗಳನ್ನು ಹೇಳುವು ದರೊಂದಿಗೆ ಏಕೀಕರಣವನ್ನು ಅಭಿವ್ಯಕ್ತಿಸಿವೆ.


*ಕಲ್ಲಿನ ರಥ, ಹಂಪಿ*

ಕರ್ನಾಟಕ ವಿದ್ಯಾವರ್ಧಕ ಸಂಘ ಮತ್ತು ಕನ್ನಡ ಸಾಹಿತ್ಯ ಪರಿಷತ್ತುಗಳಂಥ ಸಂಸ್ಥೆಗಳು ಉತ್ತರ ಕರ್ನಾಟಕ ಮತ್ತು ಹಳೆಯ ಮೈಸೂರಿನಲ್ಲಿ ಸಾಹಿತ್ಯಕ ಚಟುವಟಿಕೆಗಳನ್ನು ಕಾಯ್ದಿರಿಸಿ ಕೊಂಡಿದ್ದು ಏಕೀಕರಣ ಆಗುವಲ್ಲಿ ಸಹಾಯಕ ವಾಯಿತು. ಪರಿಷತ್ತಿನ ಸಾಹಿತ್ಯ ಸಮ್ಮೇಳನಗಳು ಹಾಗೂ ಅಲ್ಲಿಯ ಠರಾವುಗಳು ಮುಖ್ಯ; ಅಂತೆಯೇ ಈ ಸಮ್ಮೇಳನಗಳನ್ನು ಅಂದಿನ ತುಂಡಾದ ಕನ್ನಡ ಭೂ ಪ್ರದೇಶಗಳಲ್ಲಿ ನಡೆಸಿ ಆ ಭಾಗದವರಿಗೆ ನಾಡು-ನುಡಿ ಕಾಳಜಿಗಳನ್ನು ಹುಟ್ಟಿಸಿದ್ದು ಸಹ. ಆದರೆ ಏಕೀಕರಣದ ಅನಂತರ ಈ ಕಾಳಜಿಗಳು ಪರಿಷತ್ತಿನ ಕಡೆಯಿಂದ ಕಾಣಿಸಿಕೊಂಡಿಲ್ಲ. ಅಂದರೆ ಗಡಿ ಪ್ರದೇಶಗಳಲ್ಲಿ ಸಾಹಿತ್ಯ ಸನ್ನಿವೇಶಗಳು ಇತ್ತೀಚಿಗಂತೂ ನಡೆಯುತ್ತಲೇ ಇಲ್ಲ. ಬದಲಾಗಿ ರಾಜಕಾರಣಿ ಗಳನ್ನು ಓಲೈಸಿಕೊಳ್ಳಲು ಅವರ ಜಿಲ್ಲೆಗಳಲ್ಲಿಯೇ ಸಮ್ಮೇಳನಗಳನ್ನು ನಡೆಸಿ ಹಿಂದಿನ ಆಶಯಗಳನ್ನು ಮುರಿಯಲಾಗುತ್ತಿದೆ. ಇದರಿಂದ ಗಡಿಪ್ರದೇಶಗಳಲ್ಲಿನ ಕನ್ನಡಿಗರು ಕನ್ನಡ ನಾಡು-ನುಡಿ ಚಿಂತನೆಗಳಿಂದ ದೂರ ಸರಿಯುವಂತೆ ಆಗಿದೆ. ಜೊತೆಗೆ ಭಾಷಿಕ ಆತಂಕಗಳನ್ನು ಎದುರುಗೊಳ್ಳುತ್ತಿರುವುದನ್ನು ಗಮನಿಸಬಹುದು.

ಸಾಂಸ್ಕೃತಿಕ ಪರಧಿಯಲ್ಲೇ ಮುಖ್ಯವಾಗಿ ಗಮನಿಸಬೇಕಾಗಿರುವ ವಿಚಾರವೆಂದರೆ 'ಹಂಪಿ' ಹಂಪಿಯು ಕರ್ನಾಟಕದ ಏಕೀಕರಣ ಚಿಂತನೆಯಲ್ಲಿ ಹಾಸುಹೊಕ್ಕಾಗಿದೆ. ಏಕೀಕರಣದ ಆಶಯವು ಹಂಪಿಯ ಜೊತೆಗೆ ಅಲ್ಲಿನ ಭುವನೇಶ್ವರಿ, ಕನ್ನಡಿಗರ ಕರ್ನಾಟಕ ರತ್ನಸಿಂಹಾಸನ, ಶ್ರೀ [illegible], ಹಕ್ಕ-ಬುಕ್ಕ, ಶ್ರೀ ಕೃಷ್ಣದೇವರಾಯ, ತುಂಗಭದ್ರೆ, ಪಂಪಾವತಿ, ವಿರೂಪಾಕ್ಷ [illegible] ಮಂಗಿರ, ನಡುಮನೆ, ವಿದ್ಯಾನಗರ ಹೀಗೆ ಎಲ್ಲವನ್ನೂ ಒಳಗೊ[illegible] ವಸಾಹತುಶಾಹಿಗೆ ವಿರುದ್ಧವಾಗಿ ಬಳಸಿದ 'ಬೃಹನ್ಮಹರಾಷ್ಟ್ರ,' ಶಿವಾಜಿ, ಅಂಬಾಭವಾನಿ, ಮೊದಲಾದ

ಸಂಕೇತಗಳಿಗೂ ಕನ್ನಡಿಗರು ಏಕೀಕರಣದ ಆಶಯಕ್ಕಾಗಿ ಬಳಸಿದ ಸಂಕೇತಗಳಿಗೂ ಚಾರಿತ್ರಿಕ ಹಿನ್ನೆಲೆ-ಹೋಲಿಕೆಗಳು ಇವೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಚಾರಿತ್ರಿಕವಾಗಿ 300ರಿಂದ 600 ವರುಷಗಳಲ್ಲಿ ಗತವೈಭವವನ್ನು ಕಳೆದುಕೊಂಡ ಸ್ಥಿತಿಗತಿಗಳು. ಇವು ಜನರ ನೆನಪಿನ ಶಕ್ತಿಯಿಂದ ಬೇಗ ಮಾಸಿಹೋಗುವುದಿಲ್ಲ. ಕನ್ನಡಿಗರ ಸಾಂಸ್ಕೃತಿಕ ಕೇಂದ್ರಸ್ಥಾನವಾಗಿದ್ದ ಹಂಪಿ 'ನಷ್ಟ ಸ್ಮೃತಿಯ ಸಾಮ್ರಾಜ್ಯ'. ಒಂದು ಹೊಸ ರಾಜ್ಯವನ್ನು ಕಟ್ಟಿದ ಕನ್ನಡಿಗರ ಪ್ರಯತ್ನ ಹಾಗೂ ಅದರ ಹಿಂದಿದ್ದ ಪ್ರೇರಣ ಶಕ್ತಿಗಳು (ಧರ್ಮ ಮತ್ತು ಚರಿತ್ರೆ) ಬಹಳ ಮುಖ್ಯವಾದ ಅಭಿವ್ಯಕ್ತಿಯ ಪರಿಕರಗಳಾಗಿವೆ. ಆದ್ದರಿಂದಲೇ ಕನ್ನಡ ಸಾಹಿತ್ಯವು ಬಹಳ ಬೇಗ ಕನ್ನಡಿಗರನ್ನು ಜಾಗೃತಿ ಮೂಡಿಸಲು ಇಲ್ಲಿನ ಸಂಕೇತ, ಪ್ರತೀಕ, ಪರಿಕಲ್ಪನೆ, ರೂಪಕಗಳನ್ನು ಅಳವಡಿಸಿಕೊಂಡಿದೆ. ಅಂದರೆ ಆ ಮೂಲಕ ಹಿಂದಿನಂತೆಯೇ ಹೊಸ ಏಕೀಕೃತ ಕರ್ನಾಟಕವನ್ನು ಕಟ್ಟುವ ತುಡಿತ ವ್ಯಕ್ತವಾಗಿದೆ.

ಏಕೀಕರಣವಾದ ನಾಲ್ಕು ದಶಕಗಳಾದ ಈ ಸಂದರ್ಭದಲ್ಲಿ ನಮ್ಮನ್ನು ನಾವು ವಿಮರ್ಶಿಸಿಕೊಳ್ಳಬೇಕಾಗಿದೆ. ಏಕೆಂದರೆ ಉತ್ತರ ಕರ್ನಾಟಕದ ಕನ್ನಡಿಗರು ಪ್ರತ್ಯೇಕ ರಾಜ್ಯದಲ್ಲಿ ತಮ್ಮನ್ನು ತಾವು ಗುರುತಿಸಿಕೊಳ್ಳಲು ಬಯಸುತ್ತಿರುವುದರಿಂದ. ಅಂತೆಯೇ ಕೊಡಗಿನವರೂ ಸಹ. ಇಲ್ಲಿ ಇವರೆಲ್ಲರಿಗೂ ಮುಖ್ಯವಾಗಿ ಕಾಡಿರುವ ಸಮಸ್ಯೆ ಪ್ರಾತಿನಿಧ್ಯಕ್ಕೆ ಸಂಬಂಧಪಟ್ಟಿದ್ದು. ಅದು ಉದ್ಯೋಗ, ಶಿಕ್ಷಣ, ರಾಜಕಾರಣ, ಆರ್ಥಿಕ, ಸಾಂಸ್ಕೃತಿಕ ವೇದಿಕೆ ಮೊದಲಾದ ನೆಲೆಗಳಿಗೆ ಸಂಬಂಧಿಸಿದಂತೆ ವ್ಯಕ್ತಗೊಳ್ಳುವ ಅಸಮಾಧಾನ. ಏಕೀಕರಣದ ಅಧ್ಯಯನ ಮಾಡಿದವರಿಗೆ, ಕ್ಷೇತ್ರ ಕಾರ್ಯವನ್ನು ಮಾಡಿದವರಿಗೆ ಇಂಥ ಅಸಮಾಧಾನವನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಲು ಸಾಧ್ಯವಿದೆ. ಈ ಹಿನ್ನೆಲೆಯಲ್ಲಿ ಹೇಳುವುದಾದರೆ ಇದೊಂದು ಆತಂಕ, ಅವಸರದ, ಸ್ವಾರ್ಥದ 'ಅಸಮಾಧಾನ'ವಾಗಿ ಮೊದಲ ನೋಟಕ್ಕೇ ಕಾಣಿಸಿಕೊಳ್ಳುವಂಥದ್ದು.

ಪ್ರಾತಿನಿಧ್ಯ ಮತ್ತು ಆರ್ಥಿಕವಾಗಿ ಹಿಂದುಳಿದಿರುವುದರ ಬಗೆಗಿನ ಅಸಮಾಧಾನಗಳನ್ನು ಪರಿಶೀಲಿಸಿದರೆ ಅದಕ್ಕೆ ಕಾರಣ ಆಗುವುದು ಆಯಾ ಭಾಗದ ಕನ್ನಡಿಗರೆ. ಏಕೆಂದರೆ ಇಂದಿನ ಪ್ರಜಾಪ್ರಭುತ್ವದ ಸರ್ಕಾರದಲ್ಲಿ ಜನರ ಪ್ರತಿನಿಧಿಯನ್ನು ಆಯ್ಕೆ ಮಾಡಿ ಕಳುಹಿಸುವ ಜವಾಬ್ದಾರಿ, ಅಧಿಕಾರ ಇರುವುದು ಜನರ ಕೈಯಲ್ಲಿಯೆ. ಹೀಗಿರುವಾಗ ಅವರ (ಜನರ) ಪ್ರತಿನಿಧಿ ತನ್ನನಿಗದಿತ ಪ್ರದೇಶದ ಜನರ ಹಾಗೂ ಆ ಪ್ರದೇಶದ ಅಭಿವೃದ್ಧಿ, ಅನಭಿವೃದ್ಧಿಗೆ ನೇರ ಕಾರಣ ಆಗುತ್ತಾನೆ. ಇಡೀ ರಾಜ್ಯದ ಸಂಪನ್ಮೂಲಗಳನ್ನು ವೃದ್ಧಿಗೊಳಿಸುವಂತಹ ಆರ್ಥಿಕ ನೀತಿಗೆ ಗಮನ ಕೊಡದಿರುವುದು ನಮ್ಮ ಪ್ರಭುತ್ವದ ದೊಡ್ಡ ತಪ್ಪು. ಮೈಸೂರು ಬೆಂಗಳೂರಿಗರ ಮುಂದಾಳತ್ವದ ಬಗೆಗಿನ ಅಸಮಾಧಾನ ಉತ್ತರದವರಲ್ಲಿ ಇದೆಯಾದರೂ ಅದೊಂದೇ ತೊಡಕಿನ ಸಮಸ್ಯೆಯಲ್ಲ. ಸ್ಪರ್ಧೆಯು ಮುಕ್ತವಾಗುತ್ತಿದ್ದಂತೆ ಅವಕಾಶಗಳು ಹೆಚ್ಚುತ್ತವೆ. ಅಂತೆಯೇ ಅಧಿಕಾರದ ಕೇಂದ್ರೀಕರಣದ ಸಮಸ್ಯೆ ಕರ್ನಾಟಕದ ಬೆಂಗಳೂರಿನಲ್ಲಿ ಇದೆಯಾದರೂ ಅದಕ್ಕೆ ಪ್ರತ್ಯೇಕತೆಯ ಕೂಗುಗಳು ಪರಿಹಾರ ಆಗಲಾರವು. ಬದಲಾಗಿ ವಿಕೇಂದ್ರೀಕೃತ (ಫೆಡರಲ್ ಮಾದರಿಯ) ಆಲೋಚನೆಗಳು ಪ್ರಸ್ತುತಗೊಳ್ಳುತ್ತವೆ.

'ಭಾವನಾತ್ಮಕವಾಗಿ ಕನ್ನಡಿಗರು ಒಂದಾಗಿಲ್ಲ' - ಎಂಬುದಕ್ಕೆ ಹಿರಿಯ ಸಾಹಿತಿಗಳು, ಏಕೀಕರಣಕ್ಕೆ ದುಡಿದು ಇಂದು ಕಣ್ಮರೆ ಆಗಿರುವವರು ವ್ಯಕ್ತಪಡಿಸಿದ ವಿಚಾರಗಳೇ ಬೇರೆ. ಅಂದರೆ ಬಹಳ ಕಾಲ ವಿಭಜಿತ ಪ್ರದೇಶಗಳಲ್ಲಿದ್ದ ಕನ್ನಡಿಗರು ಭಿನ್ನ ಭಾಷಿಕರ ಪ್ರಭಾವಗಳಿಂದ ಹೊರಬರಲು ಸಾಕಷ್ಟು ಸಮಯ ಬೇಕಾದೀತು ಎಂಬುದು. ಈ ಪ್ರಕ್ರಿಯೆ ಏಕೀಕರಣವಾದ ನಲವತ್ತು-ಐವತ್ತು ವರುಷಗಳಿಗೆ ಈಡೇರುವಂಥದ್ದಲ್ಲ ಎಂಬ ಅಭಿಪ್ರಾಯ ಸರಿ ಅನ್ನಿಸುತ್ತದೆ. ಏಕೆಂದರೆ ವಿವಿಧ ಪ್ರದೇಶ, ಭಾಷೆ-ಸಂಸ್ಕೃತಿಗಳಿಗೆ ಗುರಿ ಆಗಿದ್ದ ನಮ್ಮ ಮನೋಚಿಂತನೆಗಳು ಈಗೀಗ ಒಂದುಗೂಡಲಾರಂಭಿಸಿವೆ. ಅಲ್ಲದೆ ಅಭಿವೃದ್ಧಿಗೆ ಸಂಬಂಧಿಸಿದಂತೆ ಹೇಳುವುದಾದರೆ ಕರ್ನಾಟಕವು ಏಕೀಕರಣವಾಗದೆ ಇದ್ದಲ್ಲಿ ಈ ಹೊತ್ತಿನ ಸ್ಥಿತಿಯನ್ನೂ ಸಹ ನೋಡಲು ಸಾಧ್ಯ ಇರಲಿಲ್ಲ. ಇಲ್ಲಿ ಬೇಕಿರುವುದು ಸಾಮರಸ್ಯದ ಚಿಂತನೆ. ಉದ್ವೇಗವಲ್ಲದ ಸಮಚಿತ್ತ. ಕನ್ನಡ ಸಾಹಿತ್ಯವು ಅದನ್ನು ಆಗುಮಾಡಿ ತೋರಿಸಿದೆ.


**ಡಾ॥ ಸಿ. ಆರ್. ಗೋವಿಂದರಾಜು**

ಪ್ರವಾಚಕ, ಚರಿತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬


---

(೯ನೇ ಪುಟದಿಂದ)

ಶೀಲವಾಗಿರುವ ಸಂಗತಿಯನ್ನು ನಿರ್ಲಕ್ಷಿಸಲು ಸಾಧ್ಯವಿಲ್ಲ.

## ಭೂಮಾಲಿಕತ್ವದಲ್ಲಿ ಅಸಮಾನತೆ

ರಾಜ್ಯದ ಹಿಂದುಳಿದ ಐದು ಜಿಲ್ಲೆಗಳಲ್ಲಿರುವ ಭೂಹಿಡುವಳಿಗಳ ಸಂಖ್ಯೆ 16.11 ಲಕ್ಷ. ಈ ಹಿಡುವಳಿಗಳ ವಿಸ್ತೀರ್ಣ 51.31 ಲಕ್ಷ ಹೆಕ್ಟೇರುಗಳು. ಒಟ್ಟು ಹಿಡುವಳಿಗಳಲ್ಲಿ ರೈತಾಪಿ ಹಿಡುವಳಿಗಳ (ಅತಿಸಣ್ಣ, ಸಣ್ಣ ಮತ್ತು ಅರೆ ಮಧ್ಯಮ ಗಾತ್ರದ ಹಿಡುವಳಿಗಳು) ಪ್ರಮಾಣ ಶೇ. 76.35 ಮತ್ತು ಜಮೀನ್ದಾರಿ ಹಿಡುವಳಿಗಳ (ಮಧ್ಯಮ ಮತ್ತು ದೊಡ್ಡ ಹಿಡುವಳಿಗಳು) ಪ್ರಮಾಣ ಶೇ. 23.65. ಆದರೆ ಈ ಐದು ಜಿಲ್ಲೆಗಳನ್ನು ಬಿಟ್ಟು ಉಳಿದ 15 ಜಿಲ್ಲೆಗಳಿಗೆ ಸಂಬಂಧಿಸಿದಂತೆ ರೈತಾಪಿ ಹಿಡುವಳಿಗಳ ಪ್ರಮಾಣ ಶೇ. 90.78 ಮತ್ತು ಜಮೀನ್ದಾರಿ ಹಿಡುವಳಿಗಳ ಪ್ರಮಾಣ ಕೇವಲ ಶೇ. 9.22.

ಅಭಿವೃದ್ಧಿ ಸುಸ್ಥಿತಿಯಲ್ಲಿರುವ ಐದು ಜಿಲ್ಲೆಗಳಲ್ಲಿ ಶೇ. 76.35ರಷ್ಟಿರುವ ರೈತಾಪಿ ಜನರು ಸಾಗುವಳಿ ಭೂಮಿಯ ಶೇ. 43.10ರಷ್ಟನ್ನು ಹೊಂದಿದ್ದರೆ ಶೇ. 23.65ರಷ್ಟಿರುವ ಜಮೀನ್ದಾರರು ಶೇ. 56.90ರಷ್ಟು ಸಾಗುವಳಿ ಭೂಮಿಯ ಮೇಲೆ ಮಾಲೀಕತ್ವ ಹೊಂದಿದ್ದಾರೆ.

ಈ ಐದು ಜಿಲ್ಲೆಗಳನ್ನು ಬಿಟ್ಟು ಉಳಿದ 15 ಜಿಲ್ಲೆಗಳಲ್ಲಿ ಶೇ. 90.78ರಷ್ಟಿರುವ ರೈತಾಪಿ ಜನರು ಶೇ. 60.77ರಷ್ಟು ಸಾಗುವಳಿ ಭೂಮಿ ಹೊಂದಿದ್ದರೆ ಶೇ. 9.22ರಷ್ಟಿರುವ ಜಮೀನ್ದಾರರು ಶೇ. 39.23ರಷ್ಟು ಸಾಗುವಳಿ ಭೂಮಿಯ ಮೇಲೆ ಮಾಲೀಕತ್ವ ಹೊಂದಿದ್ದಾರೆ.

ಅಭಿವೃದ್ಧಿ ದುಸ್ಥಿತಿಯಿಂದ ನರಳುತ್ತಿರುವ ಜಿಲ್ಲೆಗಳಲ್ಲಿ ಅಭಿವೃದ್ಧಿಗೆ ಕಂಟಕವಾಗಿರುವ ಬಹುಮುಖಿ ಸಂಗತಿಯೆಂದರೆ ಆ ಜಿಲ್ಲೆಗಳಲ್ಲಿರುವ ಜಮೀನ್ದಾರಿ ಪಾಳೆಗಾರಿಕೆಯಾಗಿದೆ. ಸರ್ಕಾರದ ಮಲತಾಯಿ ಧೋರಣೆ, ಚಾರಿತ್ರಿಕ ಸಂಗತಿಗಳು, ಭ್ರಷ್ಟಾಚಾರ, ಭೌಗೋಳಿಕ ಲಕ್ಷಣಗಳು ಮುಂತಾದ ವಿವರಗಳಿಗಿಂತ ಈ ಜಿಲ್ಲೆಗಳ ಹಿಂದುಳಿದಿರುವಿಕೆಯ ಹಿಂದೆ ಅನೇಕ ರಾಚನಿಕ ಸಂಗತಿಗಳು ಇರುವುದನ್ನು ಗುರುತಿಸಬೇಕಾಗಿದೆ. ಈ ಕಾರಣಕ್ಕೆ ಈ ಐದು ಜಿಲ್ಲೆಗಳಲ್ಲಿ ಮಾತ್ರ ಒಟ್ಟು ದುಡಿಮೆಗಾರ ವರ್ಗದಲ್ಲಿ ಭೂರಹಿತ ಕೃಷಿ ಕಾರ್ಮಿಕರ ಪ್ರಮಾಣ ಶೇ. 45ರಷ್ಟಿದೆ. ಉಳಿದ 15 ಜಿಲ್ಲೆಗಳಲ್ಲಿ ಕೃಷಿ ಕಾರ್ಮಿಕರ ಪ್ರಮಾಣ ಕೇವಲ ಸರಾಸರಿ ಶೇ. 25ರಷ್ಟಿದೆ.

### ನೆನಪುಗಳ ದೀಪಗಳು

*ನಿನ್ನ ನೋಡಿದ ಮೊಗ್ಗುಗಳು, ಮಂಜುಹನಿಯ*
*ಚಾದರಿನಲಿ ಮುಖ ಮುಚ್ಚಿಕೊಂಡವು !*
*ಮೊಗ್ಗುಗಳ ಮುಗುಳ್ನಗೆಯೋ ಅದು*
*ಅಲ್ಲಿಯೇ ತುಟಿಗಳಲಿ ಮಲಗಿತು !*

*ರಾತ್ರಿ, ತೆರಳುತ್ತಲಿದೆ ಜೋಗಲೆಯಾಗಿ*
*ನೀಳ ಜಡೆ ತೂಗಾಡಿಸುತ್ತ;*
*ಗಗನದಲಿಹ ನಕ್ಷತ್ರಗಳು ಬೆಳಕ*
*ಆರಿಸುತಲಿವೆ, ಮಲಗಲೆಂದು !*

*ಪ್ರೇಮದ ಕಥೆಯ ಮತ್ತೆ ಮರುಕಳಿಸಿ*
*ಹೋದವು ಈ ನಕ್ಷತ್ರ ತುಂಬಿದ ರಾತ್ರಿಗಳು !*
*ಎಷ್ಟೊಂದು ನೆನಪುಗಳ ದೀಪಗಳು*
*ಇಂದು ಉರಿದವು 'ಫಿರಾಕ್' !*

*ಮೂಲ ಉರ್ದು : **ಪ್ರೊ॥ ರಘುಪತಿ ಸಹಾಯ್ 'ಫಿರಾಕ್'***
*ಕನ್ನಡರೂಪ : **ಡಾ॥ ಪಂಚಾಕ್ಷರಿ ಹಿರೇಮಠ***

ಈ 5 ಜಿಲ್ಲೆಗಳ ಜನಸಂಖ್ಯೆಯಲ್ಲಿ ಕೃಷಿ ಕಾರ್ಮಿಕರ ಪ್ರಮಾಣ ಶೇ. 20.65ರಷ್ಟಿದ್ದರೆ ಉಳಿದ 15 ಜಿಲ್ಲೆಗಳ ಜನಸಂಖ್ಯೆಯಲ್ಲಿ ಕೃಷಿ ಕಾರ್ಮಿಕರ ಪ್ರಮಾಣ ಶೇ. 8.67. ರಾಜ್ಯದ ಜನಸಂಖ್ಯೆಯಲ್ಲಿ ಕೇವಲ ಶೇ. 20.44ರಷ್ಟಿದ್ದರೆ ರಾಜ್ಯದ ಕೃಷಿ ಕಾರ್ಮಿಕರಲ್ಲಿ ಹಿಂದುಳಿದ ಐದು ಜಿಲ್ಲೆಗಳ ಪಾಲು ಶೇ. 37.98ರಷ್ಟಿದೆ. ಭೂರಹಿತ ಕೃಷಿ ಕಾರ್ಮಿಕರು ಉಳಿದೆಲ್ಲ ಜಿಲ್ಲೆಗಳಿಗಿಂತ ಹಿಂದುಳಿದ ಐದು ಜಿಲ್ಲೆಗಳಲ್ಲಿ ಮಡುಗಟ್ಟಿಕೊಂಡಿರುವುದು ಈ ಜಿಲ್ಲೆಗಳಲ್ಲಿನ ಜಮೀನ್ದಾರಿ ಪಾಳೆಗಾರಿಕೆಯ ಅಟ್ಟಹಾಸಕ್ಕೆ ಸ್ಪಷ್ಟ ಸೂಚನೆಯಾಗಿದೆ. ಈ ಜಿಲ್ಲೆಗಳ ಅಭಿವೃದ್ಧಿಗೆ ಕಂಟಕವಾಗಿರುವ ಸಂಗತಿಯು ಇದೇ ಆಗಿದೆ. ಅಭಿವೃದ್ಧಿಯಲ್ಲಿನ ಪ್ರಾದೇಶಿಕ ಅಸಮಾನತೆ ಬಗ್ಗೆ ಮಾತನಾಡುವವರು ಮೇಲೆ ತಿಳಿಸಿದ ಸೂಕ್ಷ್ಮ ರಾಚನಿಕ ಸಂಗತಿಗಳನ್ನು ಗಮನಿಸಬೇಕಾಗಿದೆ.

## ಕೊನೆಯ ಮಾತು

ಈ ಅಧ್ಯಯನವು ಕರ್ನಾಟಕದ ಪ್ರಸ್ತುತ ಅಭಿವೃದ್ಧಿಯ ಸಾಮಾಜಿಕ ಸ್ವರೂಪವನ್ನು ಹಿಡಿದಿಡುವ ಪ್ರಯತ್ನವಾಗಿದೆ. ಅಭಿವೃದ್ಧಿ ಪ್ರಕ್ರಿಯೆಯನ್ನು ಸಾಮಾಜಿಕ ನೆಲೆಯಿಂದ ಪ್ರತ್ಯೇಕಿಸಿ ಪರಿಶೀಲಿಸುವ ಪದ್ಧತಿಯೊಂದಿದೆ. ಈ ಬಗೆಯಲ್ಲಿ ಇವೆರಡನ್ನು ಪ್ರತ್ಯೇಕಿಸುವುದರಿಂದ ಅಭಿವೃದ್ಧಿಯ ಸೂಕ್ಷ್ಮ ನೆಲೆಗಳ ದರ್ಶನ ಸಾಧ್ಯವಿಲ್ಲ. ಯಾವುದೇ ವೈಜ್ಞಾನಿಕ ವಿಶ್ಲೇಷಣೆಯು ನಾವು ಗುರುತಿಸಿರುವ ನೆಲೆಗಳನ್ನು, ಆಯಾಮಗಳನ್ನು ಕಡೆಗಣಿಸುವಂತಿಲ್ಲ.


**ಡಾ॥ ಟಿ. ಆರ್. ಚಂದ್ರಶೇಖರ್**

ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ

ಹಂಪಿ, ವಿದ್ಯಾರಣ್ಯ - ೫೮೩ ೨೭೬

## ಅಮೆರಿಕಾದ ಬಾಹುಗಳಿಗೆ ನುಗ್ಗಲು ತವಕ

ಕೊರಿಯಾ ಯುದ್ಧದ ಸ್ಮೃತಿಯನ್ನು ದೂರಮಾಡಿ ಚೀಣಾ ತನ್ನ ರಾಷ್ಟ್ರೀಯ ಹಿತಕ್ಕಾಗಿ ಅಮೆರಿಕಾದೊಡನೆ ಸಖ್ಯ ಬೆಳೆಸಿದೆ. 1971ರಲ್ಲಿ ಅಮೆರಿಕೆಯ ಎಂಟರ್‌ಪ್ರೈಸ್ ಎಂಬ ಯುದ್ಧನೌಕೆಯು ಬಂಗಾಳ ಕೊಲ್ಲಿಗೆ ಬಂದಿದ್ದನ್ನು ಮಾತ್ರ ಭಾರತ ಮರೆಯಲು ಸಿದ್ಧವಿಲ್ಲ. ಆ ನೌಕೆಯು ಒಂದೇ ಒಂದು ಗುಂಡನ್ನು ಸಹ ಹಾರಿಸಿರಲಿಲ್ಲ. ಆದರೂ ಅದೇನೋ ದೊಡ್ಡ ಅಪಚಾರವಾಯಿತೆಂಬಂತೆ ಭಾರತದ ರಕ್ಷಣೆ, ವಿದೇಶಾಂಗ ವ್ಯವಹಾರ, ಇತ್ಯಾದಿಗಳನ್ನು ಅರ್ಥೈಸಲಾಗುತ್ತಿದೆ. ಅಮೆರಿಕೆಯು ಭಾರತದ ವಿರೋಧಿ ಎಂಬ ಕಗ್ಗವನ್ನು ಹೀಗೆ ಹಬ್ಬಿಸಲಾಗಿದೆ. ಚೀಣಾವು ಅಮೆರಿಕಾ ಜೊತೆ ಬಾಂಧವ್ಯ ಬೆಳೆಸಬಹುದಾದರೆ ಭಾರತಕ್ಕೇಕೆ ಅದು ಸಾಧ್ಯವಾಗುತ್ತಿಲ್ಲ? ಚೀಣಾ ಸಂದರ್ಭೋಚಿತವಾಗಿ ತನ್ನ ವಿದೇಶಾಂಗ ವ್ಯವಹಾರಗಳನ್ನು ಬೆಳೆಸುವಂತೆ ಭಾರತವು ಮಾಡುತ್ತಿಲ್ಲವೆಂದೇ ಇದರರ್ಥ. ಶೀತಲ ಸಮರದ ಸಂದರ್ಭದಲ್ಲಿ ಅಮೆರಿಕಾವು ಚೀಣಾದ ಜೊತೆ ಸ್ನೇಹಪರವಾಗಿದ್ದು ಭಾರತದ ವಿರೋಧಿಯಾಗಿದ್ದುದರಿಂದ ಚೀಣಾದಂತೆ ಭಾರತ ಸುಲಭವಾಗಿ ಬದಲಾಗಲು ಸಾಧ್ಯವಿಲ್ಲವೆಂದು ನಮ್ಮ ವಿದೇಶಾಂಗ ವಕ್ತಾರರು ಹೇಳುತ್ತಾರೆ. (ಆದರೆ ಇದರಲ್ಲಿ ಹುರುಳಿಲ್ಲ.)

- *(ಸಿ. ರಾಜಮೋಹನ್ : ದಿ ಹಿಂದು, 30.9.1999)*

- ಭಾರತವು ಈಗಿಂದೀಗಲೇ ಅಮೆರಿಕಾಕ್ಕೆ ಮಣಿದುಬಿಟ್ಟರೆ ನಮ್ಮೆಲ್ಲ ಸಮಸ್ಯೆಗಳೂ ಪರಿಹಾರವಾಗುತ್ತವೆಂಬ ಧೋರಣೆಯನ್ನು ನಮ್ಮ ಹಲವು ಪತ್ರಕರ್ತರು ಮೊದಲಿಂದಲೂ ಪ್ರತಿಪಾದಿಸುತ್ತಾ ಬಂದಿದ್ದಾರೆ. ಆ ಪಟ್ಟಿಗೆ ಈಚೆಗೆ ಸೇರ್ಪಡೆ ಹೊಂದಿದ ವ್ಯಕ್ತಿ ರಾಜಮೋಹನ್. ಪತ್ರಿಕಾ ಆಯೋಗದ ಅಧ್ಯಕ್ಷ ನ್ಯಾಯಮೂರ್ತಿ ಪಿ. ಬಿ. ಸಾವಂತ್ ಇತ್ತೀಚೆಗೆ ಪತ್ರಿಕಾಧರ್ಮದ ಹಾಗೂ ಪತ್ರಕರ್ತರ ಸುಲಭ ಒಲವುಗಳ ಬಗ್ಗೆ ಎಚ್ಚರ ನೀಡಿದ್ದು ಇಂತಹ ಗೋಸುಂಬೆತನವನ್ನು ಗಮನಿಸಿಯೇ ಇರಬೇಕು.

## ಕಮ್ಯುನಿಸ್ಟರನ್ನು ಯಾರು ಬೇಕಾದರೂ ತೆಗಳಬಹುದು!

''ಮಾತು ಮತ್ತು ಬರವಣಿಗೆಯ ಪ್ರಚಾರದ ಹಾಗೂ ತನ್ನ ಮುಕ್ತ ಚಟುವಟಿಕೆಗಳ ಮೂಲಕ ಭಾರತ ಕಮ್ಯುನಿಸ್ಟ್ ಪಕ್ಷವು ಒಂದಂಶವನ್ನು ಚೆನ್ನಾಗಿ ಸ್ಪಷ್ಟಪಡಿಸಿದೆ. ಅದೇನೆಂದರೆ, ಆ ಪಕ್ಷಕ್ಕೆ ಪ್ರಜಾಪ್ರಭುತ್ವವಾದಿ ಹಕ್ಕುಗಳು ಮತ್ತು ನಾಗರಿಕ ಸ್ವಾತಂತ್ರ್ಯವೆಂದರೆ ತಾನು ಕೊಲೆ, ಸುಲಿಗೆ, ವಿಧ್ವಂಸಕ ಕೃತ್ಯ ಮುಂತಾದುವನ್ನು ಮಾಡುವುದು, ಮತ್ತು ಅವನ್ನು ಹತ್ತಿಕ್ಕಲು ಅಥವಾ ವಿರೋಧಿಸಲು ರಾಜ್ಯಪ್ರಭುತ್ವಕ್ಕಾಗಲಿ ಸಾರ್ವಜನಿಕರಿಗಾಗಲಿ ಯಾವ ಹಕ್ಕೂ ಇಲ್ಲವೆಂದು ಪ್ರತಿಪಾದಿಸುವುದೇ ಆಗಿದೆ.''

*- 1949ರ ಸೆಪ್ಟೆಂಬರ್ 30ರಂದು ಸ್ವತಂತ್ರ ಭಾರತ ಸರ್ಕಾರದ ಗೃಹ ಸಚಿವಾಲಯವು ಹೊರಡಿಸಿದ್ದ ಒಂದು ಹೇಳಿಕೆಯ ಭಾಗ. (ಇಡೀ ಹೇಳಿಕೆಯು ಒಂದು ಕರಪತ್ರದ ರೂಪದಲ್ಲಿ ಲಕ್ಷಗಟ್ಟಲೆ ಹಂಚಲಾಗಿತ್ತು).*

- ಅಮೆರಿಕಾದಲ್ಲಿ ಆರಂಭವಾಗುತ್ತಿದ್ದ ಮೆಕಾರ್ತಿ ಪ್ರಕ್ರಿಯೆಯ ತದ್ರೂಪ ಇದಾಗಿತ್ತು. 'ಉಕ್ಕಿನ ಮನುಷ್ಯ' ವಲ್ಲಭಭಾಯಿ ಪಟೇಲರು ಗೃಹಸಚಿವರಾಗಿದ್ದ ಕಾಲದಲ್ಲಿ ಬಂದಿದ್ದ ಹೇಳಿಕೆ ಇದು. ಅವರ ನಂತರ ಬಂದ ಅನೇಕ ಮಹನೀಯರು ಇಂಥವೇ ಹೇಳಿಕೆಗಳನ್ನು ನೀಡಿದ್ದರೆ ಆಶ್ಚರ್ಯವಿಲ್ಲ. ವಾಸ್ತವದಲ್ಲಿ ಕಮ್ಯುನಿಸ್ಟರು ಹಾಗೆ ಮಾಡಿದ್ದರೆ, ಆಮೇಲೂ ಹಾಗೇ ಮಾಡುತ್ತಾ ಬಂದರೆ, ಇತ್ಯಾದಿ ವಸ್ತುನಿಷ್ಠ ಪ್ರಶ್ನೆಗಳನ್ನು ಹಾಕಿಕೊಳ್ಳದೆಯೇ ಇಂತಹ ತೀರ್ಮಾನಗಳನ್ನು ಪ್ರಕಟಿಸಲಾಗುತ್ತದೆ. ಅದೇ ಪ್ರಜಾಪ್ರಭುತ್ವ ವಿರಬೇಕು ಕೆಲವರ ದೃಷ್ಟಿಯಲ್ಲಿ! ಅಂದು ಉಕ್ಕಿನ ಮನುಷ್ಯ, ಇಂದು ಸೊಕ್ಕಿನ ಮನುಷ್ಯ ಎನ್ನಬಹುದೆ? ಏಕೆಂದರೆ, ಇತ್ತೀಚಿನ ಗೃಹ ಮಂತ್ರಿ ಆಡಿದ ಮಾತು 49ರ ಪ್ರಕಟಣೆಯನ್ನು ಕುಬ್ಜಗೊಳಿಸುವಂಥದು.

## ರಕ್ಷಣಾ ಪಡೆಗಳಿಗೆ ಖಾಸಗಿ ಆಹಾರವೆ?

ಸಾರ್ವಜನಿಕ ಉದ್ದಿಮೆಗಳ ಬಂಡವಾಳವನ್ನು ಹಿಂದೆಗೆದುಕೊಳ್ಳುತ್ತಾ ಬಹುರಾಷ್ಟ್ರೀಯ ಕಂಪನಿಗಳಿಗೆ ಸ್ವಾಗತ ನೀಡುವುದು ಗಂಭೀರ ಪರಿಣಾಮಗಳನ್ನುಂಟು ಮಾಡುತ್ತದೆ. ಮಾಡರ್ನ್ ಫುಡ್ ಇಂಡಸ್ಟ್ರೀಸ್ ಲಿಮಿಟೆಡ್ ಎಂಬ ಸಾರ್ವಜನಿಕ ಉದ್ದಿಮೆಯು ದೇಶದ ರಕ್ಷಣಾ ಪಡೆಗಳಿಗೆ ಮೂರು ದಶಕಗಳಿಂದ ಬ್ರೆಡ್ಡನ್ನು ಒದಗಿಸುತ್ತಿದೆ. ಇನ್ನು ಮುಂದೆ ಬಹುರಾಷ್ಟ್ರೀಯ ಕಂಪೆನಿಯೊಂದು ಆ ಕೆಲಸ ನಿರ್ವಹಿಸುತ್ತದೆ. ಯುದ್ಧ ಕಾಲದಲ್ಲಿ ಮತ್ತು ಸೂಕ್ಷ್ಮ ವಲಯಗಳಲ್ಲಿ ಕೂಡ. ಇದು ದೇಶದ ಹಿತಕ್ಕೆ ಒಳ್ಳೆಯದಲ್ಲ. ಬಹುರಾಷ್ಟ್ರೀಯ ಕಂಪೆನಿಗಳು ನಮ್ಮ ಸಣ್ಣ ಪುಟ್ಟ ಬೇಕರಿಗಳನ್ನು ಮುಚ್ಚಿಹಾಕುತ್ತವೆ. ಈಗಾಗಲೇ ಕೃಷಿ ಮತ್ತು ತಳಿಬೀಜಗಳನ್ನು ಅವು ಸ್ವಾಧೀನಪಡಿಸಿಕೊಳ್ಳಲು ಹೊರಟಿವೆ. ಮಾಡರ್ನ್ ಫುಡ್‌ನಂತಹ ಸಾರ್ವಜನಿಕ ಉದ್ದಿಮೆಗಳೂ ಅವುಗಳ ಪಾಲಾದರೆ ಆಹಾರ ಮತ್ತು ಆಹಾರದ ಕ್ಷೇತ್ರದ ಮೇಲೆ ಹಿಡಿತ ಸಾಧಿಸಿ ಏಕಸ್ವಾಮ್ಯ ಪಡೆಯುತ್ತವೆ. ಜನರನ್ನು ಹಿಂಡಿ ಹಿಪ್ಪೆ ಮಾಡುತ್ತವೆ.

- ರಾಜೇಂದ್ರ ಸಾಚಾರ್, ದೆಹಲಿ ಉಚ್ಚ ನ್ಯಾಯಾಲಯದ ಮಾಜಿ ನ್ಯಾಯಾಧೀಶರು.

- ಉದಾರೀಕರಣದ ಹೆಸರಿನಲ್ಲಿ ಎಂತೆಂತಹ ಪಿಡುಗುಗಳನ್ನು ನಾವು ಬರಮಾಡಿಕೊಳ್ಳುತ್ತಿದ್ದೇವೆಂಬುದು ಸ್ಪಷ್ಟವಾಗಿದೆ. ಬೇಜವಾಬ್ದಾರಿ ರಾಷ್ಟ್ರವಿರೋಧಿ ನೀತಿಗಳನ್ನು ಪ್ರತಿಪಾದಿಸುವ ಸರ್ಕಾರಗಳ ಬಗ್ಗೆ ಎಚ್ಚರ ವಹಿಸಬೇಕಾದ ತುರ್ತು ಅಗತ್ಯ ನಮ್ಮದು.

## ಜಾಗತೀಕರಣ ಎಂದರೇನು?

ಈ ಪ್ರಶ್ನೆ ಬಹಳ ಜನರ ಬಾಯಲ್ಲಿದೆ. ಉತ್ತರ ಸರಳವಾಗಿದೆ: ಬಂಡವಾಳಶಾಹಿ ಪದ್ಧತಿಯನ್ನು ಇಡೀ ಪ್ರಪಂಚದ ಮೇಲೆ ಹೇರುವುದು ಎಂದರ್ಥ. ಅದರಲ್ಲಿ ಬಂಡವಾಳ ಎಲ್ಲಿಂದೆಲ್ಲಿಗಾದರೂ ಹರಿಯುತ್ತದೆ. ಸರಕುಗಳ ಮಾರಾಟಕ್ಕೆ ಎಲ್ಲಿಗಾದರೂ ನುಗ್ಗಬಹುದು. ಬೌದ್ಧಿಕ ಆಸ್ತಿಯ ಹಕ್ಕನ್ನು ದೊಡ್ಡ ಕಂಪನಿಗಳು ತಮ್ಮ ಅಧೀನದಲ್ಲಿ ಇರಿಸಿಕೊಂಡಿರುತ್ತವೆ. ಶತಮಾನಗಳಷ್ಟು ಪ್ರಾಚೀನವಾದ ಜ್ಞಾನಭಂಡಾರವನ್ನು ಅನಭಿವೃದ್ಧ ರಾಷ್ಟ್ರಗಳ ಬಡ ಜನಸಮುದಾಯಗಳಿಂದ ಕಸಿದುಕೊಳ್ಳುವ ಹುನ್ನಾರ ಈ ಪ್ರಕ್ರಿಯೆಯಲ್ಲಿದೆ. ಅದನ್ನು ಅಸಮಾನ ಒಪ್ಪಂದವೆಂದು ಕರೆಯಲಾಗುತ್ತಿಲ್ಲ, ಅಷ್ಟೆ.

- *ಬಿ. ಪಿ. ಜೀವನ ರೆಡ್ಡಿ, ಕಾನೂನು ಆಯೋಗ ಅಧ್ಯಕ್ಷರು.*

- ಬೇವು, ಅರಿಸಿನ, ಬಾಸ್ಮತಿ ಅಕ್ಕಿ, ಮುಂತಾದುವುಗಳಿಗೆ ಪೇಟೆಂಟ್ ಪಡೆಯುವುದಷ್ಟೇ ಅಲ್ಲ, ನಮ್ಮ ಕಂಪನಿಗಳನ್ನು ಅತಿಕಡಿಮೆ ಮೌಲ್ಯಕ್ಕೆ ಸೂರೆಗೊಳ್ಳುವುದು ಸಹ ಜಾಗತೀಕರಣದಲ್ಲಿ ಸೇರಿದೆ. 'ರಾಷ್ಟ್ರೀಯತೆ'ಯ ಬಗ್ಗೆ ಗಂಭೀರವಾದ ಮಾತುಗಳನ್ನಾಡುವ ನಮ್ಮ ಈಚಿನ ಸರ್ಕಾರಗಳು ಇದರ ಬಗ್ಗೆ ಜಾಣಮೌನ ತಾಳಿವೆ. ಸಾರ್ವಜನಿಕರು ಹಾಗೆ ಮಾಡಲಾಗದು.

# ಪಠ್ಯದ ಮೂಲಕ ಸಾಂಸ್ಕೃತಿಕ ವಿಶ್ಲೇಷಣೆ

ಶಾಲೆಕಾಲೇಜುಗಳಲ್ಲಿ ಕಲಿಸುವ ಭಾಷಾಶಿಕ್ಷಕರಿಗೆ ಪಠ್ಯವೆಂಬುದು ಅನಿವಾರ್ಯವೆಂಬಂತಾಗಿದೆ. ಈ ಪಠ್ಯವನ್ನು ಯಾವನೋ ಒಬ್ಬ ಲೇಖಕ ಅಥವಾ ಹಲವು ಲೇಖಕರು ಸೇರಿ ರಚಿಸಿದ್ದಿರಬಹುದು. ಅನೇಕ ಸಲ ಆ ಪಠ್ಯದ ಮೂಲ ಅವನ ಸ್ವಂತದ್ದೂ ಆಗಿರಲಾರದು. ಯಾರಿಂದಲೋ ಒದಗಿಬಂದ ಪಠ್ಯಕ್ಕೆ ಆತ ಹೊಸ ಮೆರುಗು, ಹೊಸ ಅರ್ಥ ನೀಡಿರಬಹುದು. (ಉದಾ : ಪಂಪ, ರನ್ನರ ಕಾವ್ಯಗಳು, ಕಾರ್ನಾಡರ ನಾಟಕಗಳು). ಲೇಖಕನ ಪಠ್ಯ ಶಿಕ್ಷಕರಿಗೆ ದತ್ತವಾಗಿದೆ. ಅಥವಾ ಅವರಿಗೆ ಇಷ್ಟವಿರಲಿ, ಇಲ್ಲದಿರಲಿ ಯಾರೋ ತಜ್ಞರಿಂದ ಅವರ ಮೇಲೆ ಪಠ್ಯವು ಹೇರಲ್ಪಟ್ಟಿದೆ. ತಮ್ಮ ಮೇಲೆ ವಿಧಿಸಿದ ಪಠ್ಯವನ್ನು ಬೋಧಿಸುವುದು, ಹೊಸ ಅರ್ಥಗಳನ್ನು ಆವಾಹಿಸಲು ಯತ್ನಿಸುವುದು ಶಿಕ್ಷಕರ ಹೊಣೆ.

**ಬಹು ಪಠ್ಯ ಸಂದರ್ಭ**

ನಮ್ಮ ವೈಯಕ್ತಿಕ ಅನುಭವಗಳು ಹಾಗೂ ಅನ್ಯರ ಆಲೋಚನೆಗಳ ಬೆಳಕಿನಲ್ಲಿ ದತ್ತವಾದ ಪಠ್ಯವನ್ನು ಸಿಗಿದು ಬಗೆದು ಬೆದಕಿ ಅದನ್ನು ಶಿಕ್ಷಕರ ಪಠ್ಯವಾಗಿಸಿಕೊಳ್ಳುವ ಪ್ರಯತ್ನ ನಡೆಯುತ್ತದೆ. ಅದು ನಮ್ಮ ಪಠ್ಯವಾದಾಗಲೆ ವಿದ್ಯಾರ್ಥಿಗಳ ಪಠ್ಯವನ್ನಾಗಿಸುವ ಪ್ರಯತ್ನಗಳು ತೀವ್ರಗೊಳ್ಳುತ್ತವೆ.

ಹೀಗೆ ನಮ್ಮದಲ್ಲದ ಪಠ್ಯವೊಂದನ್ನು ನಮ್ಮ ಪಠ್ಯವಾಗಿಸಿಕೊಳ್ಳುವ ಪ್ರಯತ್ನದಲ್ಲಿರುವಾಗ 'ಪಠ್ಯದೊಳಗಣ ಪಠ್ಯ'ವನ್ನು ಗುರುತಿಸಬೇಕು. ಪಠ್ಯದೊಳಗಣ ಪಠ್ಯವನ್ನು ನಾವು 'ಪ್ರಚ್ಛನ್ನ ಪಠ್ಯ'ವೆನ್ನುತ್ತೇವೆ. ಪುಣ್ಯಕೋಟಿಯ ಕಥೆ, 'ನಾಗರಹಾವು' ಕವನ ಇಂಥ ಸರಳ ರಚನೆಗಳ ಆಳದಲ್ಲಿ ಬೇರೆ ಸುಪ್ತ ಪಠ್ಯಗಳಿರುವುದನ್ನು ಗುರುತಿಸುವ ಕಣ್ಣು ಶಿಕ್ಷಕರಿಗೆ ಇಲ್ಲದೆ ಹೋದರೆ ವ್ಯಾಖ್ಯಾನಗಳೆಲ್ಲ ಬರೀ ವಿವರಗಳಿಗೆ ಸೀಮಿತವಾಗುತ್ತದೆ.

ಪಠ್ಯವೆನ್ನುವಾಗ ಅದು ಒಂದೇ ಎಂಬ ಅರ್ಥದಲ್ಲಿ ನಾವು ಅನೇಕಸಲ ಮಾತನಾಡುತ್ತಿರುತ್ತೇವೆ. ಪಠ್ಯವು ಏಕಪಠ್ಯವಾಗಿರಬೇಕಾಗಿಲ್ಲ. ಹಲವು ಸಲ ಅದು ಬಹುಪಠ್ಯವಾಗಿರಲೂಬಹುದು. ಬೇರೆ ಬೇರೆ ಕಾರಣಗಳಿಂದಾಗಿ ಪಠ್ಯಕ್ಕೆ ಬಹುತ್ವ ಪ್ರಾಪ್ತವಾಗುತ್ತದೆ. ಉದಾಹರಣೆಗೆ ರಾಮಾಯಣ, ಭಾರತ, ಜಾನಪದ ಕತೆಗಳು, ಪಂಚತಂತ್ರ, ಕಥಾಸರಿತ್ಸಾಗರದ ಕತೆಗಳು ಇತ್ಯಾದಿ. ಶಿಕ್ಷಕರಾಗಿ ನಾವು ಪಠ್ಯವೊಂದರ ಬಹುತ್ವವನ್ನು ಗುರುತಿಸದೇ ಹೋದರೆ ನಮ್ಮ ವ್ಯಾಖ್ಯಾನ-ವಿವರಣೆ ಮಹತ್ವಾಕಾಂಕ್ಷಿಯಾಗಲಾರದು.

**ಸಾಂಸ್ಕೃತಿಕ ವಿಶ್ಲೇಷಣೆ**

ಪಠ್ಯದ ಸಹಾಯದಿಂದ ಶಿಕ್ಷಕರು ತರಗತಿಗಳಲ್ಲಿ ಸಾಂಸ್ಕೃತಿಕ ಅನ್ವೇಷಣೆಗೆ ತೊಡಗಿದಾಗ ಸ್ಥೂಲ ವಿವರಗಳಿಗೆ ಅಂಟಿಕೊಳ್ಳದೆ ಪರಿಧಿಯನ್ನು ಮೀರಲು ಯತ್ನಿಸಬೇಕು. ಪಠ್ಯವನ್ನು ಆಧರಿಸಿದ ಬೋಧನೆ, ಕಲಿಕೆ ಪಠ್ಯದ ಜಗಲಿಯನ್ನು ದಾಟಿ ಅಂಬರಕ್ಕೆ ನೆಗೆಯಬೇಕು. ಏಕೆಂದರೆ ''ನಕ್ಷೆಯೇ ಸೀಮೆಯಲ್ಲ; ಪದವೇ ಭಾಷೆಯಲ್ಲ'' ಅವು ಸಂಕೇತಗಳು ಮಾತ್ರ. ಅಂತೆಯೇ ಪಠ್ಯವೇ ದೇವರಲ್ಲ, ಅದೊಂದು ನೆಪ ಮಾತ್ರ. ಪಠ್ಯವನ್ನು ತಳಹದಿಯನ್ನಾಗಿಟ್ಟುಕೊಂಡು ಅಥವಾ ಅದನ್ನು ನೆಪವಾಗಿ ತೆಗೆದುಕೊಂಡು ನಮ್ಮ ಸಾಂಸ್ಕೃತಿಕ ಸಂಗತಿಗಳ ಹುಡುಕಾಟ ಮುಂದುವರಿಯಬೇಕು. ಅಕಿರ ಕುರಸೋವನ 'ರಶೋಮನ್' ಚಲನಚಿತ್ರದಲ್ಲಿ ಕಥೆ ಏನಿದೆ ! ಆದರೆ ಆ ಪಠ್ಯವನ್ನು ನೆಪವಾಗಿಟ್ಟುಕೊಂಡು ಸತ್ಯಶೋಧನೆ, ಮೌಲ್ಯ ವಿವೇಚನೆ ನಡೆಸಲು ಎಂಥ ಅವಕಾಶ. ಪುಣ್ಯಕೋಟಿಯ ಕತೆ ಕಣ್ಣೀರಿಳಿಸುವುದಕ್ಕೆ ಸೀಮಿತವಲ್ಲ. ಪುಣ್ಯಕೋಟಿ ಹಿಂದೆ ಬಂದ ಸಂದರ್ಭದಷ್ಟೇ ಮಹತ್ವದ್ದು ಉಗ್ರ ವ್ಯಾಘ್ರ ಕೆಬ್ಬಿಗೆ ಬಿದ್ದು ಪ್ರಾಣ ಕಳಕೊಂಡ ಅಪೂರ್ವ ವಿದ್ಯಮಾನ ಕೂಡ. ಈ ರೀತಿಯ ವಿಶ್ಲೇಷಣೆ ನಡೆದ ಹಾಗೆಲ್ಲ ಪಠ್ಯದ ಪರಿಧಿ ವಿಸ್ತೃತಗೊಳ್ಳುತ್ತದೆ. ಹೊಸ ಪಠ್ಯಗಳು ಹುಟ್ಟಿಕೊಳ್ಳುತ್ತವೆ. ಹಳೆಯ ಪರಿಚಿತ ಪಠ್ಯಗಳು ಮರುಹುಟ್ಟು ಪಡೆಯುತ್ತವೆ.

> *ವಸ್ತುನಿಷ್ಠ - ಆತ್ಮನಿಷ್ಠ ಎಂಬ ಪದಗಳನ್ನು ಬಳಸಿ ಹತ್ತುಹಲವು ತೀರ್ಮಾನಗಳನ್ನು ಕೊಡುವ ಸಂದರ್ಭವು ನಮ್ಮ ಶಿಕ್ಷಣ ಕ್ಷೇತ್ರದಲ್ಲಿ ಕಾಣಬರುತ್ತಿದೆ. ಅದೆಷ್ಟು ಸರಿ ? ಅಧ್ಯಾಪಕ-ವಿದ್ಯಾರ್ಥಿಗಳು ತಮ್ಮನ್ನು ಪೂರ್ತಿಯಾಗಿ ಹೊರಗಿಟ್ಟುಕೊಂಡು ಪಠ್ಯದಲ್ಲಿರುವ ಅಂಶಗಳನ್ನು ಗ್ರಹಿಸುವ ಸಾಧ್ಯತೆ ಉಂಟೆ ? ಇಲ್ಲದಿದ್ದರೆ ಉತ್ತಮವಾದ ಮಾರ್ಗ ಯಾವುದು ?*

ಪಠ್ಯದ ವಿಷಯದಲ್ಲಿ ನಾವು ಗಮನಿಸಬೇಕಾದ ಮಹತ್ತ್ವದ ಅಂಶವೊಂದಿದೆ : ಯಾವ ಪಠ್ಯವೂ ತಟಸ್ಥವಲ್ಲ, ಮೌಲ್ಯ ನಿರಪೇಕ್ಷವಲ್ಲ. ಪಠ್ಯದ ಒಡಲಲ್ಲಿ ಸಾಂಸ್ಕೃತಿಕ ಅಂಶಗಳು ಪ್ರಕಟವಾಗಿ ತೋರಬಹುದು ಇಲ್ಲವೆ ಪ್ರಚ್ಛನ್ನವಾಗಿರಲೂಬಹುದು. ಸಂಸ್ಕೃತಿ ಎಂಬುದು ಯಾವತ್ತೂ ತಟಸ್ಥವಲ್ಲ. ಪಠ್ಯದ ಮೂಲಕ ಸಾಂಸ್ಕೃತಿಕ ಸಂಗತಿಗಳನ್ನು ಅನ್ವೇಷಣೆ ಮಾಡಹೊರಡುವ ಬೋಧಕನು ತಟಸ್ಥನಲ್ಲ. ಆತನಿಗೆ ತನ್ನದೇ ಆದ ಸಿಟ್ಟು ಸೆಡವು, ಸಾಂಸ್ಕೃತಿಕ ಪೂರ್ವಾಗ್ರಹಗಳು ಇದ್ದೇ ಇರುತ್ತವೆ. ಎದುರಿಗಿರುವ ವಿದ್ಯಾರ್ಥಿಯೂ ಸಾಂಸ್ಕೃತಿಕವಾಗಿ ತಟಸ್ಥನಲ್ಲ. ಸಂಸ್ಕೃತಿಯ ಬಗೆಗಿನ ಅವನ ಪರಿಕಲ್ಪನೆ, ಸಾಂಸ್ಕೃತಿಕ ಒಲವು ನಿಲುವುಗಳು ಶಿಕ್ಷಕನ ವಿಚಾರಗಳೊಂದಿಗೆ ಮಿಳಿತವಾಗಬಹುದು. ಹಾಗೆ ಆದಾಗ ವಿಶೇಷ ಸಮಸ್ಯೆಗಳು ಉದ್ಭವಿಸುವುದಿಲ್ಲ. ಆದರೆ ಬೋಧಕ ಹಾಗೂ ವಿದ್ಯಾರ್ಥಿಯ ಸಾಂಸ್ಕೃತಿಕ ಪರಿಕಲ್ಪನೆಗಳಲ್ಲಿ ಅಗಾಧ ಅಂತರವಿದ್ದಾಗ ಪರಿಸ್ಥಿತಿ ನಾಜೂಕಿನದ್ದಾಗುತ್ತದೆ. ಇಂಥ ಸನ್ನಿವೇಶಗಳನ್ನು ನಿಭಾಯಿಸುವ ಚಾಕಚಕ್ಯತೆ ಶಿಕ್ಷಕರಲ್ಲಿರಬೇಕು.

**ನೀವು ಯಾರ ಪರ ?**

ಸಾಂಸ್ಕೃತಿಕ ಅನ್ವೇಷಣೆ ಅಥವಾ ಪಠ್ಯದ ಮೂಲಕ ಸಾಂಸ್ಕೃತಿಕ ವಿಶ್ಲೇಷಣೆ ಕೈಗೆತ್ತಿಕೊಂಡಾಗ ಶಿಕ್ಷಕರು ಕೇಳಿಕೊಳ್ಳಲೇಬೇಕಾದ ಪ್ರಶ್ನೆಗಳೆಂದರೆ ಯಾವ ಸಂಸ್ಕೃತಿ ? ಯಾರ ಸಂಸ್ಕೃತಿ ? ಸಂಸ್ಕೃತಿಯ ಯಜಮಾನರು ಯಾರು ? ಬೋಧಕರಾಗಿ ನೀವು ಯಾವ ಸಂಸ್ಕೃತಿಯ ಪರವಾಗಿದ್ದೀರಿ ? ಉದಾಹರಣೆಗೆ : ''ಗಂಜೀಯ ಕುಡಿದರೂ ಗಂಡನ ಮನಿ ಲೇಸು'', ''ಗಂಡನನ್ನು ಬಿಟ್ಟವಳು'' ('ಹೆಂಡತಿಯನ್ನು ಬಿಟ್ಟವ' ಎಂದು ಹೀನಾಯವಾಗಿ ಹೇಳುವುದುಂಟೇ ?), 'ಹೆಣ್ಣೆನಿಸಿ ಪುಟ್ಟಿದೆನ್ನಯ ದೋಷಂ'' ''ಒಡೆಯಗೆ ಕಾಣೆ ನಾಪ್ಪರನು'', ''ಇಕ್ರಲಾ ಒದೀರ್ಲಾ ಸೂಳೆಮಕ್ಕನ್ನ'', ''ಅರಮನೆಯಲ್ಲಿ ಹೊರಳುತಲಿರುವ ಸಾವು ನನ್ನ ಕವನ'' ''ಜನಗಳು ತಿನ್ನುವ ಅನ್ನದ ಅಗುಳು ಜೀವ ನನ್ನ ಕವನ'', ''ನೀನೊಲಿದರೆ ಕೊರಡು ಕೊನರುವುದಯ್ಯ, ಬರಡು ಹಯನಹುದಯ್ಯ'', ''ಬಂಜೆಂಬ ಶಬುದ ಹೊರಲಾರೆ'', ಇಂಥ ನೂರಾರು ಸಾಲುಗಳ ಅರ್ಥ ವಿಶ್ಲೇಷಣೆ - ವ್ಯಾಖ್ಯಾನ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿಯೇ ನಡೆಯಬೇಕಾದದ್ದು. ಅದು ಕೇವಲ ಪದಾರ್ಥದ, ಕಾವ್ಯ ಸೌಂದರ್ಯದ ಮಾತಾಗಿ ಉಳಿಯುವುದಿಲ್ಲ. ಈ ರೀತಿಯ ಸಾಂಸ್ಕೃತಿಕ ವಿಶ್ಲೇಷಣೆಗೆ ತೊಡಗಿದಾಗ ನೀವು ತಟಸ್ಥವಾಗಿರಲು ಸಾಧ್ಯವಿಲ್ಲ. ಒಂದು ಪಕ್ಷವನ್ನು ವಹಿಸಬೇಕಾಗುತ್ತದೆ. ಆಗ ಉದ್ಭವಿಸುವ ಪ್ರಶ್ನೆ- ನೀವು ಯಾರ ಪರ ನಿಲ್ಲುವವರು ?

ಸಾಂಸ್ಕೃತಿಕ ವಿಶ್ಲೇಷಣೆಯಲ್ಲಿ ತೊಡಗುವ ಬೋಧಕರು ಸಂಸ್ಕೃತಿಯ ವೈಭವೀಕರಣಕ್ಕೆ ಕೈಹಾಕಬಾರದು. ಒಂದು ನಿರ್ದಿಷ್ಟ ಸಂಸ್ಕೃತಿಯ ಬಗೆಗಿನ ತನ್ನ ರಾಗದ್ವೇಷಗಳೇನೇ ಇರಲಿ, ಆತ ಮಾನಸಿಕ ದೂರವನ್ನು ಕಾಯ್ದುಕೊಳ್ಳಲು ಯತ್ನಿಸಬೇಕು. ಹಾಗೆ ಮಾಡದೇ ಹೋದರೆ ''ಭವ್ಯ ಭಾರತದಲ್ಲಿ'', ''ಪವಿತ್ರವಾದ ಭಾರತದ ಮಣ್ಣಿನಲ್ಲಿ'', ''ಆರ್ಷೇಯವಾದ ಹಿಂದೂ ಸಂಸ್ಕೃತಿಯಲ್ಲಿ'', ''ಪಾತಕಿಗಳಾದ ಪಾಕಿಗಳ ನೆಲದಲ್ಲಿ'', 'East or West; India is the best'' ಎಂಬಂಥ ಬಾಲಿಶ ಮಾತುಗಳು ನುಸುಳುತ್ತವೆ. ಈ ರೀತಿಯ ಮಾತುಗಳಿಂದ ವಿದ್ಯಾರ್ಥಿಗಳು ಸ್ವಯಂ ಅಭಿಪ್ರಾಯಗಳನ್ನು ರೂಪಿಸಿಕೊಳ್ಳುವುದಕ್ಕೆ ನಾವೇ ಅಡ್ಡಿ [illegible] ಹಾಗಾಗುತ್ತದೆ. ಹಾಗೆ ಮಾಡುವುದು ಶಿಕ್ಷಕ [illegible] ಸಂಸ್ಕೃತಿಯ ಬಗೆಗೆ ಶಿಕ್ಷಕರು ತರಗತಿಗಳಲ್ಲಿ [illegible] ಮಾಡುವ ಸಂದರ್ಭದಲ್ಲಿ [illegible] [illegible]

**ಡಾ॥ ಮಹಾಬಲೇಶ್ವರ ರಾವ್**

ನಾಲ್ಕಾರು ವಿವಾಹವಾಗಿ ಹತ್ತಾರು ಮಕ್ಕಳನ್ನು ಪಡೆಯುತ್ತಾರೆ.'' ''ನವ್ಯ ಸಾಹಿತಿಗಳೆಲ್ಲ ಕಾಮುಕತೆಯನ್ನು, ಪೋಲಿ ಪತೆಯನ್ನು ತಮ್ಮ ಕಾವ್ಯದಲ್ಲಿ ಬಿಂಬಿಸಿದವರು- ಅವರನ್ನು ಓದಬೇಡಿ.'' ''ಬೈರಪ್ಪನವರ ಸಾಹಿತ್ಯ ಆರ್‌ಎಸ್‌ಎಸ್ ಸಾಹಿತ್ಯ'' ''ಅನಂತಮೂರ್ತಿ ಸಾಹಿತ್ಯ ಲಂಪಟ ಸಾಹಿತ್ಯ'' ಎಂದೆಲ್ಲ ತರಗತಿಗಳಲ್ಲಿ ತೀರ್ಮಾನಗಳನ್ನು ಬಿತ್ತರಿಸಿ ಮುಗ್ಧ ಹುಡುಗರ ಕಣ್ಣಲ್ಲಿ ನಾಯಕರಾಗಲು ಯತ್ನಿಸಕೂಡದು.

**ಸಾಂಸ್ಕೃತಿಕ ಬಹುತ್ವ**

ಸಾಂಸ್ಕೃತಿಕ ವಿಚಾರಗಳ ವಿಶ್ಲೇಷಣೆ ಮಾಡುವಾಗ ಅವಹೇಳನಾತ್ಮಕತೆ ಸಲ್ಲದು. ಲೇವಡಿ, ಹಗುರ ಮಾತು ಉಚಿತವಲ್ಲ. 'ಲಟಪಟ ಆಚಾರಿ', 'ಭಟ್ಟರ ಕರಿಮರಿ ನಾಯಿ', 'ಜಾತಕರ್ಮಾದಿ ನಿರತ ಪುರೋಹಿತ ಭಟ್ಟ', 'ದೇವರು', 'ಸಾಬಿ' 'ಶೂದ್ರ', 'ಹೊಲೆಯ' - ಈ ಬಗೆಯ ಅನೇಕಾನೇಕ ಉದಾಹರಣೆಗಳು ಪಠ್ಯದಲ್ಲಿ ಕಾಣಸಿಗುತ್ತವೆ. ಭಾರತದ ಸಂದರ್ಭದಲ್ಲಿ ನೂರಾರು ಜಾತಿಗಳಿರುವಲ್ಲಿ ಜಾತಿಗಳ ಬಗೆಗಿನ ಅವಹೇಳನ ಶೈಕ್ಷಣಿಕ ಸಂದರ್ಭದಲ್ಲಿ ಉಚಿತವಲ್ಲ. ಅಂತೆಯೇ ಸಾಂಸ್ಕೃತಿಕ ಆಚರಣೆಗಳ ಅಂತರದ ವಿಷಯದಲ್ಲೂ ಹಗುರಮಾತು ಸಲ್ಲ. ಶಾಕಾಹಾರ-ಮಾಂಸಾಹಾರ ರೂಢಿಯ ಪ್ರಶ್ನೆ; ಅದನ್ನು ಸಾಂಸ್ಕೃತಿಕ ಉಚ್ಚ-ನೀಚದ ಹಂತಕ್ಕೆ ಕೊಂಡೊಯ್ದು ಲೇವಡಿ ಮಾಡುವುದು, ಸಮರ್ಥಿಸುವುದು ಸರಿಯಲ್ಲ.

ಭಾರತದ ಸಂದರ್ಭದಲ್ಲಂತೂ ಪಠ್ಯಮುಖೇನ ಸಂಸ್ಕೃತಿ ವಿಶ್ಲೇಷಣೆ ಮಾಡುವವರು ಸಾಂಸ್ಕೃತಿಕ ಬಹುತ್ವವನ್ನು, ವೈವಿಧ್ಯಮಯ ಸಂಸ್ಕೃತಿಯ ಕಲ್ಪನೆಯನ್ನು ಎತ್ತಿಹಿಡಿಯಲೇಬೇಕು. 'ಭಾರತೀಯ ಸಂಸ್ಕೃತಿ' ಎಂಬ ಒಂದು ದೊಡ್ಡ ಪರಿಕಲ್ಪನೆ ಯಾರಿಗೂ ಯಾವ ಅರ್ಥವನ್ನೂ ಬಿಟ್ಟುಕೊಡಲಾರದು. ಇಲ್ಲಿನ ಹಲವು ಕಿರುಸಂಸ್ಕೃತಿಗಳು, ಉಪಸಂಸ್ಕೃತಿಗಳು, ದೇಸಿ ಹಾಗೂ ಅಲಕ್ಷಿತ ಸಂಸ್ಕೃತಿಗಳು-ಇವೆಲ್ಲವನ್ನೂ ಗಣನೆಗೆ ತೆಗೆದುಕೊಳ್ಳದೇ ಹೋದರೆ ಭಾರತೀಯ ಸಂಸ್ಕೃತಿ ಅರ್ಥ ಶೂನ್ಯವೆನಿಸುತ್ತದೆ. ಹಿರಿದಾದ ವೈದಿಕ ಸಂಸ್ಕೃತಿ ಮೇಲು ಹಾಗೂ ಕಿರಿಯ ಸಂಸ್ಕೃತಿಗಳು ಕೀಳು ಎಂಬ ಸಾಧಾರಣೀಕರಣವನ್ನು ಶಿಕ್ಷಕರು ತೊರೆಯಲೇಬೇಕು. ಸಂಸ್ಕೃತಿಯ ನಡುವೆ ಮೇಲು ಕೀಳಿನ ಪ್ರಶ್ನೆಯಿಲ್ಲ. ಇರುವುದೇನಿದ್ದರೂ ಸೂಕ್ಷ್ಮತೆಯ ಪ್ರಶ್ನೆ. ಸೂಕ್ಷ್ಮತೆಯ ಪ್ರಶ್ನೆಯು ಸಾಪೇಕ್ಷವಾದುದೇ. ಆದುದರಿಂದ ಸಾಂಸ್ಕೃತಿಕ ವಿನಿಮಯ, ಕೊಳುಕೊಡುವಿಕೆ, ಪ್ರಭಾವ ಇತ್ಯಾದಿ ಅಂಶಗಳನ್ನು ನಿರ್ಮಮಕಾರದಿಂದ ನೋಡುವುದನ್ನು ಶಿಕ್ಷಕರು ಕಲಿಯಲೇಬೇಕು.

**ರೂಪಾಂತರದ ಶಕ್ತಿ**

ಸಂಸ್ಕೃತಿ ಎಂಬುದು ಒಂದು ಪ್ರಕ್ರಿಯೆ; ಅದು ಸಿದ್ಧವಸ್ತುವಲ್ಲ. ಅದು ಗಡ್ಡೆ ಕಟ್ಟಿದ, ಹರಳು ಗಟ್ಟಿದ ಸ್ಥಿತಿಯಲ್ಲ. ಗಡ್ಡೆ ಕಟ್ಟಿದರೆ ಕತ್ತರಿಸಿ ಬಿಸಾಕಬೇಕಾದೀತು. ಸಂಸ್ಕೃತಿಯನ್ನು ಹರಿವ ನೀರಿಗೆ, ಪ್ರವಾಹಕ್ಕೆ ಹೋಲಿಸಬಹುದು. ಹರಿವ ನೀರಿನಲ್ಲಿ ಎಲ್ಲವೂ ಕೊಚ್ಚಿಕೊಂಡು ಬರುತ್ತದೆ. ಹರಿವ ನೀರು ನಾಗರಿಕತೆಯ ನಿರ್ಮಾಣಕ್ಕೆ ಕಾರಣ - ಅದು ಕೊಳೆ ರಸವನ್ನು ಕೊಚ್ಚಿ ತೆಗೆಯುತ್ತದೆ. ಇರುವುದನ್ನು ನಿರ್ನಾಮ ಮಾಡುತ್ತದೆ. ಸಂಸ್ಕೃತಿಯೂ ಹಾಗೆಯೇ. ಅದು ಇದ್ದಂತೆ ಇರದು. ಅದು ಎಲ್ಲ ಕಾಲಕ್ಕೂ ಶ್ರೇಷ್ಠ ರೂಪದಲ್ಲಿರಲಾರದು. ನಿರ್ನಾಮ, ನಿರ್ಮಾಣ, ಉಳಿವು ಬೆಳೆವು ಅಳಿವು ಕಾಣುವ, ರೂಪಾಂತರ ಹೊಂದುವ ಶಕ್ತಿಯೇ ಸಂಸ್ಕೃತಿ ಎಂಬ ಕಲ್ಪನೆಯನ್ನು ಶಿಕ್ಷಕರು ಬೆಳೆಸಿಕೊಂಡರೆ ಉತ್ತಮ. ಇಲ್ಲವೆಂದರೆ ''ಹಳತೆಲ್ಲ ಹೊನ್ನು. ಅದೇ ಹಾಳಾಯಿತಲ್ಲಾ'' ಎಂಬ ಹಳಹಳಿಕೆ; ಹೊಸದರ ಬಗೆಗೆ ಆಕ್ರೋಶ ಮೂಡಬಹುದು ಅಥವಾ ಹೊಸದೇ ಶ್ರೇಷ್ಠ, ಹಳೆಯದೆಲ್ಲ ಗೊಡ್ಡು ಎಂಬ ಭಾವನೆಯೂ ಬೆಳೆಯಬಹುದು. ಇದು ಅತ್ಯಂತ ಅಪಾಯಕಾರಿಯಾದ ಸಂಸ್ಕೃತಿ ವಿರೋಧಿ ಧೋರಣೆ. ಒಟ್ಟಿನಲ್ಲಿ ಪಠ್ಯದ ಮೂಲಕ ಸಾಂಸ್ಕೃತಿಕ ಅನ್ವೇಷಣೆ ಅಥವಾ ವಿಶ್ಲೇಷಣೆ ಮಾಡ ಹೊರಟವರಿಗೆ ಸದಸದ್ವಿವೇಕ ಅಗತ್ಯ. ವಿವೇಚನೆ ಹಾಗೂ ಅಧ್ಯಯನಶೀಲತೆ ಅವರಿಗೆ ಇಂಬಾಗಬೇಕು. ಅವಲೋಕನ ಹಾಗೂ ಚಿಕಿತ್ಸಕ ದೃಷ್ಟಿ ಅಧ್ಯಯನದ ಬೆನ್ನೆಲುಬಾಗಬೇಕು.

ಪ್ರತಿಪದಾರ್ಥ, ಭಾವಾರ್ಥ, ಸಾರಾಂಶ ಇದೆಲ್ಲ ಪಠ್ಯ ಆಶ್ರಯಿತ ಬೋಧನೆಯಲ್ಲಿ ಕಂಡುಬರುವ ಹಳೆಯ ಸಂಗತಿಗಳು. ವಿಮರ್ಶೆ ವಿಶ್ಲೇಷಣೆ ಆಧುನಿಕ ಬೋಧನ ಸಂದರ್ಭದಲ್ಲಿ ಎದ್ದು ಕಾಣುತ್ತಿದೆ. ಪಠ್ಯದ ತಳಹದಿಯ ಮೇಲೆ ನಿಂತು ಸಾಂಸ್ಕೃತಿಕ ವಿಶ್ಲೇಷಣೆ ಮಾಡ ಹೊರಟವರಿಗೆ ಎಂಟೆದೆ ಇರಬೇಕು. ತಾನು ಹೇಳಿದ್ದನ್ನು ಶ್ರುತಪಡಿಸುವ ಸಾಮರ್ಥ್ಯವಿರಬೇಕು. ತನ್ನ ಕೋಟೆಯನ್ನು ಭದ್ರವಾಗಿ ಕಾಯುವ ಗುಣವಿರಬೇಕು. ಎಲ್ಲಕ್ಕಿಂತ ಮುಖ್ಯವಾಗಿ ಆತ ಸಂಸ್ಕೃತಿಯ ಅನನ್ಯ ವಿದ್ಯಾರ್ಥಿಯಾಗಿದ್ದು ಮುಕ್ತಮನಸ್ಸಿನಿಂದ ಚಿಂತನ ನಡೆಸುವವನಾಗಿ ಸಾಂಸ್ಕೃತಿಕ ವಿಶ್ಲೇಷಣೆಯನ್ನು ಒಂದು ಸವಾಲೆಂಬಂತೆ ಸ್ವೀಕರಿಸಿರಲೇಬೇಕು.

**ಡಾ|| ಮಹಾಬಲೇಶ್ವರ ರಾವ್**
ಪ್ರಾಚಾರ್ಯರು, ಡಾ|| ಟಿ. ಎಂ. ಎ. ಪೈ ಶಿಕ್ಷಣ ಕಾಲೇಜು, ಉಡುಪಿ-೨

## ಸಾದರ ಸ್ವೀಕಾರ

**ಬದುಕಲು ಮರೆತ ಸ್ತ್ರೀ**
*ಮಲಯಾಳ ಮೂಲ : ವೆಟ್ಟೂರು ರಾಮನ್ ನಾಯರ್,*
*ಅನು: ಪಾರ್ವತಿ ಜಿ. ಐತಾಳ್*
**ಪುಟ: 64** ಬೆಲೆ ರೂ. 35/-
ಜನಪ್ರತಿನಿಧಿ ಪ್ರಕಾಶನ, ಕುಂದಾಪುರ(ಉಡುಪಿ ಜಿಲ್ಲೆ).

**ಅಟಲ್ ಬಿಹಾರಿ ವಾಜಪೇಯಿ ಕವಿತೆಗಳು**
*ಅನು : ಡಾ|| ಸರಜೂ ಕಾಟ್ಕರ್*
**ಪುಟ: 88** ಬೆಲೆ ರೂ. 100/-
ವಿಮೋಚನಾ ಪ್ರಕಾಶನ, ಅಥಣಿ-591 304

**ಲಿಂಕನ್ ಕವಿತೆಗಳು**, ಬಿ.ಎ. ಸನದಿ
**ಪುಟ: 48** ಬೆಲೆ ರೂ. 40/-
ಸಮತಾ ಪ್ರಕಾಶನ, 1-303, ಗೋಕುಲ್ ಹೆವನ್,
ಠಾಕುರ್ ಕಾಂಪ್ಲೆಕ್ಸ್, ಕಾಂಡಿವಲಿ, ಮುಂಬೈ-400 101.

**ಗಾಂಧಿವಾದದ ಶವಪರೀಕ್ಷೆ**, ಯಶಪಾಲ್
*ಅನು: ಪ್ರಧಾನ್ ಗುರುದತ್ತ*
**ಪುಟ: 24+236** ಬೆಲೆ ರೂ. 45/-
ಡಿ.ವಿ.ಕೆ ಮೂರ್ತಿ : ಪ್ರಕಾಶಕರು ಮೈಸೂರು-4

**ತಿರುಗಾಟದ ತಿರುಳು**, ಎಂ. ಜಾನಕಿ ಬ್ರಹ್ಮಾವರ
**ಪುಟ: 136** ಬೆಲೆ ರೂ. 50/-
**ಹೇಮಾಂಶು ಪ್ರಕಾಶನ**, ದೇರೆಬೈಲು, ಮಂಗಳೂರು-6.

**ಕಾಡೋಡಲ ಹಾಡು** (ಮಕ್ಕಳ ಹಾಡುಗತೆ)
*ಕುರುವ ಬಸವರಾಜ್*
**ಪುಟ: 48** ಬೆಲೆ ರೂ. 20/-
**ಅಂತರಂಗ ಪ್ರಕಾಶನ**, ಕುರುವ, ಹೊನ್ನಾಳಿ ತಾಲ್ಲೂಕು,
ದಾವಣಗೆರೆ ಜಿಲ್ಲೆ - 577 230.

**ಗಾಳಿ**, ಜಿ.ವಿ. *ಗಣೇಶಯ್ಯ*
**ಪುಟ: 70** ಬೆಲೆ ರೂ.35/-

ಶ್ರವಣೇಂದ್ರಿಯ ಕಿವಿ, ಆರ್. ರಾಜಲಕ್ಷ್ಮಿ
**ಪುಟ: 64** ಬೆಲೆ ರೂ.35/-

ಸರಳ ಯಂತ್ರಗಳು, ಜಿ.ವಿ. *ಗಣೇಶಯ್ಯ*
**ಪುಟ: 66** ಬೆಲೆ ರೂ. 35/-
*ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು*
ಕೈಂತಜೆ ಪ್ರಕಾಶನ, ಪೇರಮುಗೇರು-574 289 (ದ.ಕ.)

ಕಪ್ಪು ಗಿಡಿ (ಕಾದಂಬರಿ), ಎಂ. ಜಾನಕಿ ಬ್ರಹ್ಮಾವರ
**ಪುಟ: 120** ಬೆಲೆ ರೂ. 36/-

**ಯಾರಿಗೆ ಯಾರುಂಟು ?** (ಕಾದಂಬರಿ)
*ತುಳು ಮೂಲ: ಎಂ. ಜಾನಕಿ ಬ್ರಹ್ಮಾವರ*
*ಕನ್ನಡಕ್ಕೆ : ಚಂದ್ರಕಲಾ ನಂದಾವರ*
**ಪುಟ: 104** ಬೆಲೆ ರೂ. 36/-

**ತುಳು ಪುಸ್ತಕಗಳು, ದೇಸಾಂತ್ರೋಡು** (ಪ್ರವಾಸ ಕಥನ)
*ಡಿ. ಸುವಾಸಿನಿ ಹೆಗ್ಡೆ*
**ಪುಟ: 80** ಬೆಲೆ ರೂ. 36/-

**ತಾಟಿ ತೆಂಬರೆ** (ಜೋಕ್ಲೆ ಪದೊಕುಲು)
*ಪ್ರಮೋದ ಕೆ. ಸುವರ್ಣ*

**ರಂಗೆನಾ ಮಲೆ ಮಂಗೆನಾ ?** (ಕಾದಂಬರಿ)
*ಯಜ್ಞಾವತಿ ಕೇಶವ ಕಂಗೆನ್*
**ಪುಟ: 80** ಬೆಲೆ ರೂ. 36/-

**Whispering Memories** (Travelogue)
*D. Suvasini Hegde*
*Tra: P. Subramanya*
**Pages: 142** **Price Rs. 60/-**
*ಮೇಲಿನ ಆರು ಪುಸ್ತಕಗಳ ಪ್ರಕಾಶಕರು*
**ಹೇಮಾಂಶು ಪ್ರಕಾಶನ**, ದೇರೆಬೈಲು
ಮಂಗಳೂರು-575 006



**ದೇಶ ಯಾವುದಾದರೇನು ?**
**(ಯೂರೋಪಿನ ದೇಶಗಳ ಪ್ರವಾಸಕಥನ)**
*ಪ್ರಭಾಕರ ಶಿಶಿಲ*
**ಪುಟ: 428 ಬೆಲೆ ರೂ. ಸಾದಾಪ್ರತಿ :195**
**ಗ್ರಂಥಾಲಯ ಪ್ರತಿ : 250**
**ಡಾ॥ ಪ್ರಭಾಕರ ಶಿಶಿಲ**, ಕಾವ್ಯ, ಕಾಂತಮಂಗಲ, ಅಜ್ಜಾವರ ಅಂಚೆ, ಸುಳ್ಯ - 574 246.

ಲೇಖಕರು ಯೂರೋಪಿನ ಎಂಟು ದೇಶಗಳಲ್ಲಿ ಮಾಡಿದ ಪ್ರವಾಸದ ಅನುಭವಗಳ ಚಿತ್ರಣ. ಪ್ರವಾಸ ದೀರ್ಘದ್ದಾದರೂ, ಓದುಗರಿಗೆ ಬೇಸರವಾಗದಂತಹ ಆತ್ಮೀಯ ಶೈಲಿ. ಆಯಾ ಸ್ಥಳಗಳ ಚಾರಿತ್ರಿಕ ಹಿನ್ನೆಲೆಯಿದೆ. ಎರಡು ಭಾಗಗಳಲ್ಲಿ ಹದಿನೆಂಟು ಅಧ್ಯಾಯಗಳನ್ನೊಳಗೊಂಡಿದೆ. ಹಲವಾರು ವರ್ಣಚಿತ್ರಗಳಿವೆ.

**ಪರಮಾರ್ಥ ಪದಕೋಶ**
*ಪ್ರಧಾನ ಸಂಪಾದಕರು: ಅ.ರಾ.ಸೇ.*
**ಪುಟ: 442 ಬೆಲೆ ರೂ. 270**
**ಕಾಮಧೇನು**, ನಂ.6, ನಾಗಪ್ಪ ರಸ್ತೆ
ಶೇಷಾದ್ರಿಪುರಂ, ಬೆಂಗಳೂರು - 560 020.



ಇದು ಆಧ್ಯಾತ್ಮ ಪದಗಳ ವಿವರಣಾರ್ಥ ಕೋಶ. ಜಗತ್ತಿನ ಹಲವು ಧರ್ಮಗಳ ಪರಿಚಯವಿದೆ. ಪಾರಿಭಾಷಿಕ ಪದಗಳಿಗೆ ಅರ್ಥವಿವರಣೆ ನೀಡಲಾಗಿದೆ. ಹಿಂದು, ಜೈನ, ಬೌದ್ಧ ಧರ್ಮಗಳಲ್ಲದೇ ಇಸ್ಲಾಂ, ಕ್ರೈಸ್ತ ಯಹೂದಿ, ಕನ್‌ಫ್ಯೂಷಿಯಸ್, ತಾವೋ ಮುಂತಾದ ಧರ್ಮಗಳಿಗೆ ಸಂಬಂಧಿಸಿದ ಸುಮಾರು ನಾಲ್ಕು ಸಾವಿರ ಪದಗಳಿಗೆ ಅರ್ಥ ವಿವರಣೆ ನೀಡಲಾಗಿದೆ.

**ಕೆ. ಸದಾಶಿವರ ಸಮಗ್ರ ಕತೆಗಳು**
*ಡಾ॥ ಜಿ. ಎಸ್. ಆಮೂರರ*
*ಪ್ರಸ್ತಾವನೆ ಸಹಿತ*
**ಪುಟ: 204+28 ಬೆಲೆ ರೂ. 120**
**ಪ್ರಿಸಂ ಬುಕ್ಸ್ ಪ್ರೈ ಲಿ.**, ಬೆಂಗಳೂರು -19.



ಕೆ. ಸದಾಶಿವ ನಮ್ಮ ಕಾಲದ ಅತ್ಯಂತ ಮುಖ್ಯ ಕಥೆಗಾರರಲ್ಲೊಬ್ಬರು. ಅವರ ಇಪ್ಪತ್ಮೂರು ಕಥೆಗಳ ಸಂಗ್ರಹ. ಅವರ ನಲ್ಲಿಯಲ್ಲಿ ನೀರು ಬಂತು, ಮತ್ತೆ ಮಳೆ ಹೊಯ್ಯುತಿದೆ.... ಎಲ್ಲ ನೆನಪಾಗುತ್ತಿದೆ, ರಾಮನ ಸವಾರಿ ಸಂತೆಗೆ ಹೋದದ್ದು - ಮುಂತಾದ ಶೀರ್ಷಿಕೆಗಳು ಓದುಗರ ಮನಸ್ಸಿನಲ್ಲಿ ಅಚ್ಚೊತ್ತಿದ್ದರೆ ಆಶ್ಚರ್ಯವಿಲ್ಲ.



**ವೈದ್ಯಕೀಯ ನಂಬಿಕೆಗಳ ವಿಶ್ಲೇಷಣೆ**
*ಡಾ॥ ರಾಮಲಿಂಗಯ್ಯ ಉಪ್ಪಿನಕೆರೆ*
**ಪುಟ: 159+12 ಬೆಲೆ ರೂ. 55**
**ಕನ್ನಡ ಪುಸ್ತಕ ಪ್ರಾಧಿಕಾರ**, ಬೆಂಗಳೂರು.

ಜನರ ಮನಸ್ಸಿನಲ್ಲಿ ರೋಗಗಳ ಬಗ್ಗೆ, ವೈದ್ಯರ ಬಗ್ಗೆ ಮನೆಮಾಡಿರುವ ವಿಚಾರಗಳ ಕುರಿತು ಐವತ್ತೈದು ಉಪಯುಕ್ತ ಲೇಖನಗಳಿವೆ. ವೈದ್ಯಕೀಯ ಮತ್ತು ಚಿಕಿತ್ಸೆಯ ಕ್ರಮಗಳು ಸಾಕಷ್ಟು ಸುಧಾರಣೆ ಹೊಂದಿರುವ, ಈ ದಿನಗಳಲ್ಲಿ ಜನಸಾಮಾನ್ಯರ ಮನಸ್ಸಿನಲ್ಲಿ ಹೂತುಹೋಗಿರುವ, ಅಪಾಯಕಾರಿಯೂ ಆಗಿರುವ ಹಲವು ಮೂಢನಂಬಿಕೆಗಳ ಮೇಲೆ ಬೆಳಕು ಚೆಲ್ಲುವ ಕೃತಿ.



**ವಿಸ್ಮಯ ವಿಶ್ವ - 1**
*ಕೆ. ಪಿ. ಪೂರ್ಣಚಂದ್ರ ತೇಜಸ್ವಿ*
**ಪುಟ: 96 ಬೆಲೆ ರೂ. 45**
**ಪುಸ್ತಕ ಪ್ರಕಾಶನ**, 91, 9ನೇ ಮೇನ್‌ರೋಡ್, ಸರಸ್ವತಿಪುರಂ, ಮೈಸೂರು -9.

ಮಿಲನಿಯಂ ಮಾಲೆಯ ಹದಿಮೂರನೇ ಕೃತಿ. ಪುಟ್ಟ ಕೊಮೊಡೋ ದ್ವೀಪದಲ್ಲಿ ಬದುಕಿರುವ ಮಹಾಕಾಯದ ಡ್ರೇಗನ್‌ಗಳಿಂದ ಹಿಡಿದು, ವಿಶ್ವದ ಹಲವು ವಿಸ್ಮಯಗಳ ಬಗ್ಗೆ ಸಚಿತ್ರ ಲೇಖನಗಳಿವೆ. ಪ್ರಾಣಿಶಾಸ್ತ್ರ, ಪರಮಾಣು, ವಿಜ್ಞಾನ, ಇತಿಹಾಸ ಮುಂತಾದ ವಿಷಯಗಳಿಗೆ ಸಂಬಂಧಿಸಿದ ವಿಸ್ಮಯಗಳು.

**ನನ್ನರಿವಿನ ನೇಪಥ್ಯದಲ್ಲಿ** (ಲೇಖನಗಳು)
*ರಾಧಾರಮೇಶ*
**ಪುಟ: 120 ಬೆಲೆ ರೂ. 35**
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಬೆಂಗಳೂರು - 560 001




ರೋಗನಿದಾನ ಮತ್ತು ಚಿಕಿತ್ಸೆಯಲ್ಲಿ ಹೈಟೆಕ್ ವಿಧಾನ ಬಳಕೆಗೆ ಬರುತ್ತಿದೆ. ಆದರೂ, ಇದರಲ್ಲಿ ಮುಖ್ಯ ಪಾತ್ರ ವಹಿಸುವವರು ವೈದ್ಯರು ಮತ್ತು ವೈದ್ಯಕೀಯ ಸಿಬ್ಬಂದಿ. ಚಿಕಿತ್ಸೆಯ ಸಂದರ್ಭದಲ್ಲಿ ಇವರು ತೋರಿಸುವ ಜಾಗರೂಕತೆ, ಆಸಕ್ತಿ ಮತ್ತು ಮಾನವೀಯ ಕಳಕಳಿ ರೋಗಿಯ ಮನಸ್ಸಿನಲ್ಲಿ ವಿಶ್ವಾಸ ಮೂಡಿಸಲು ಹಾಗೂ ರೋಗಿ [illegible] ಸಹಾಯಕವಾಗುತ್ತವೆ. ವೃತ್ತಿ [illegible] ರೂಢಿಸಿಕೊಂಡಾಗ ಚಿಕಿತ್ಸೆ ಒಂದು [illegible] ವಾತಾವರಣ ಮಾಯವಾಗಿ ಕಳಕಳಿಯ [illegible] ಇವು ವೈದ್ಯರ ಅನುಭವಕ್ಕೆ ಬಂದ ಪ್ರಸಂಗಗಳು

**ಲೇಖಕರು ಮತ್ತು ಪ್ರಕಾಶಕರ ಗಮನಕ್ಕೆ**

ಈ ವಿಭಾಗದಲ್ಲಿ ಒಳ್ಳೆಯ ಪುಸ್ತಕಗಳನ್ನು ಓದುಗರಿಗೆ ಪರಿಚಯಿಸಲಾಗುತ್ತದೆ. ಇದು ಪುಸ್ತಕದ ವಿಮರ್ಶೆಯಲ್ಲ. ಪುಸ್ತಕ ಕಳಿಸಿಕೊಡಿ. ಆಯ್ಕೆ ನಮ್ಮದು.

# ಭಾರತೀಯ ವಿಜ್ಞಾನದ ಹಾದಿ

ಲೇಖಕರು : ಡಾ|| ಜಿ. ರಾಮಕೃಷ್ಣ
ಪ್ರಕಾಶಕರು : ಕನ್ನಡ ವಿಶ್ವವಿದ್ಯಾಲಯ, ಹಂಪಿ
**ಪುಟಗಳು : 414** ಬೆಲೆ : 150

ಡಾ|| ಜಿ. ರಾಮಕೃಷ್ಣ ಅವರು ಕನ್ನಡದಲ್ಲಿ ಅನೇಕ ವೈಚಾರಿಕ ಕೃತಿಗಳನ್ನು ರಚಿಸಿ ನಮ್ಮ ಜ್ಞಾನ ದಿಗಂತವನ್ನು ವಿಸ್ತರಿಸಿದ್ದಾರೆ. ಅವರ ''ಭಾರತೀಯ ವಿಜ್ಞಾನದ ಹಾದಿ''ಯನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ಪ್ರಕಟಿಸಿ ಭಾರತದಲ್ಲಿ ವಿಜ್ಞಾನ ಬೆಳೆದುಬಂದ ಹಾದಿಯ ಮೇಲೆ ಬೆಳಕು ಚೆಲ್ಲುವ ಸುತ್ತ್ಯ ಕಾರ್ಯವನ್ನು ನೆರವೇರಿಸಿದೆ.

ಡಾ|| ಚಂದ್ರಶೇಖರ ಕಂಬಾರ ಅವರು ಹೇಳಿರುವ ಹಾಗೆ ''ಈ ಪುಸ್ತಕ ಒಂದು ದೃಷ್ಟಿಯಿಂದ ಇತಿಹಾಸ ಗ್ರಂಥ. ವೇದ ಕಾಲದಿಂದ ಹಿಡಿದು ಬ್ರಿಟಿಷರ ಆಗಮನದವರೆಗೆ ನಮ್ಮ ದೇಶದಲ್ಲಿ ನಡೆದಿದ್ದ ಶಾಸ್ತ್ರ ಚಿಂತನೆಯನ್ನು ಇಲ್ಲಿ ಸೆರೆಹಿಡಿಯಲಾಗಿದೆ. ತಿಳಿವಳಿಕೆ ವಿಕಾಸಗೊಳ್ಳುವ ಕ್ರಮವನ್ನು ಇಲ್ಲಿ ಗುರುತಿಸಲಾಗಿದೆ. ವೈಜ್ಞಾನಿಕ ಚಿಂತನ ವ್ಯವಸ್ಥಿತವಾಗಿ ನಡೆಯದಿದ್ದದ್ದಕ್ಕೆ ಮತ್ತು ತಂತ್ರಜ್ಞಾನದೊಡನೆ ಸಂಬಂಧವನ್ನು ಬೆಳೆಸಲಾಗದ್ದಕ್ಕೆ ಕಾರಣಗಳನ್ನು ಹುಡುಕಲಾಗಿದೆ.'' ಈ ಕೃತಿಯು ಇಂದಿನ ಸಂದರ್ಭದಲ್ಲಿ ವಿಶೇಷ ಮಹತ್ವವುಳ್ಳದ್ದಾಗಿದೆ. ಈಗ ಕೇಂದ್ರದಲ್ಲಿ ಹಾಗೂ ಕೆಲವು ರಾಜ್ಯಗಳಲ್ಲಿ ಅಧಿಕಾರದ ಚುಕ್ಕಾಣಿ ಹಿಡಿದಿರುವ ಭಾರತೀಯ ಜನತಾ ಪಕ್ಷ ಮತ್ತು ಅದರ ಶಕ್ತಿಯ ಮೂಲವಾಗಿರುವ ''ಸಂಘ ಪರಿವಾರ'' ನಮ್ಮ ವಿದ್ಯಾಕ್ಷೇತ್ರವನ್ನು ''ಕೇಸರೀಕರಿಸುವ'' ಅಪಾಯಕಾರಿ ಕೃತ್ಯದಲ್ಲಿ ತೊಡಗಿದೆ. ಅದು ಹೊದೆದುಕೊಂಡಿರುವ ಮುಸುಕನ್ನು ಸರಿಸುವುದು ಹಾಗೂ ನಮ್ಮ ಇತಿಹಾಸವನ್ನು ವಸ್ತುನಿಷ್ಠವಾಗಿ ತಿಳಿಯುವುದಕ್ಕೆ ನೆರವಾಗುವುದು ಇಂದಿನ ಮುಖ್ಯ ಅವಶ್ಯಕತೆಯಾಗಿದೆ. ಆ ನಿಟ್ಟಿನಲ್ಲಿ ಡಾ|| ಜಿ. ರಾಮಕೃಷ್ಣ ಅವರ ಪ್ರಸ್ತುತ ಕೃತಿಯು ಕನ್ನಡದಲ್ಲಿ ಪ್ರಕಟವಾಗಿರುವ ಈಚೆಗಿನ ಪುಸ್ತಕಗಳಲ್ಲಿ ಪ್ರಮುಖವಾದದ್ದು.

''ಪ್ರಾಚೀನ ಭಾರತದ ವೈಜ್ಞಾನಿಕ ತಿಳಿವಳಿಕೆ ಮತ್ತು ತಾಂತ್ರಿಕ ಕೌಶಲ್ಯದ ಬಗ್ಗೆ ಸಾಮಾನ್ಯವಾಗಿ ಎರಡು ರೀತಿಯ ಅಭಿಪ್ರಾಯಗಳುಂಟು. ಸಕಲ ವಿಜ್ಞಾನವೂ ಪ್ರಾಚೀನರಿಗೆ ಕರಗತವಾಗಿತ್ತು ಮತ್ತು ಅವರು ವಿಮಾನ ಕೂಡ ಮಾಡಬಲ್ಲವರಾಗಿದ್ದರು'' ಎನ್ನುವುದು ಒಂದು ಅಭಿಪ್ರಾಯ. ''ಅವರಿಗೆ ವಿಜ್ಞಾನದ ಗಂಧವೇ ಇರಲಿಲ್ಲ, ಅದು ಆಧುನಿಕ ಯುಗದ ಕೊಡುಗೆ'' ಎನ್ನುವುದು ಎರಡನೆಯ ಅಭಿಪ್ರಾಯ. ಈ ಅಭಿಪ್ರಾಯಗಳು ಅವೈಜ್ಞಾನಿಕವಾಗಿವೆ ಎಂದು ಡಾ|| ರಾಮಕೃಷ್ಣ ಆಧಾರಗಳ ಸಹಿತವಾಗಿ ತೋರಿಸಿಕೊಟ್ಟಿದ್ದಾರೆ. ಮೇಲಿನ ಎರಡು ಅಭಿಪ್ರಾಯಗಳು ಹೆಚ್ಚೆಂದರೆ ಅರ್ಧಸತ್ಯಗಳೆಂದು ತಿಳಿಯಬಹುದು. ಆದರೆ ಅರ್ಧಸತ್ಯಗಳು ಪೂರ್ಣ ಅಸತ್ಯಗಳಿಗಿಂತಲೂ ಹೆಚ್ಚು ಅಪಾಯಕಾರಿಯಾಗಿರುತ್ತವೆ, ಯಾಕೆಂದರೆ ಅವು ಸತ್ಯವೆಂಬ ಭ್ರಮೆ ಹುಟ್ಟಿಸುತ್ತವೆ.

ಡಾ|| ಜಿ. ರಾಮಕೃಷ್ಣ ಅವರ ವಿಶ್ಲೇಷಣೆಗಳು ಪೂರ್ವಾಗ್ರಹ ಪೀಡೆಯಿಂದ ಸಂಪೂರ್ಣ ಮುಕ್ತವಾಗಿವೆ. ಅವರು ಯಾವುದನ್ನೂ ಸಹ ಪರೀಕ್ಷಿಸಿ ನೋಡದೆ ಸಾರಾಸಗಟಾಗಿ ತಳ್ಳಿಹಾಕುವುದಿಲ್ಲ. ಹಾಗೆಯೇ ಯಾವುದನ್ನು ಸಹ ''ಶಾಸ್ತ್ರೋಕ್ತ''ವೆಂದಾಗಲೀ ''ಸಾಂಪ್ರದಾಯಿಕವಾಗಿ ದೃಢಪಟ್ಟಿರುವುದು'' ಎಂದಾಗಲೀ, ಭಗವಾನರೋ ಪ್ರವಾದಿಗಳೋ ಆಚಾರ್ಯರೋ ಹೊರಿಸಿರುವ ವಿಧಿ - ನಿಷೇಧಗಳಿಂದಾಗಿ ಸತ್ಯವಿರಬೇಕೆಂಬ ಕಲ್ಪನೆಗಾಗಲೀ ಅವರು ಮನ್ನಣೆ ನೀಡುವುದಿಲ್ಲ. ಪ್ರತಿಯೊಂದನ್ನೂ ನಿಖರವಾದ ವೈಜ್ಞಾನಿಕ ಪರೀಕ್ಷೆಗಳಿಗೆ ಒಳಪಡಿಸಿ ತಿರಸ್ಕರಿಸತಕ್ಕವುಗಳನ್ನು ತಿರಸ್ಕರಿಸುತ್ತಾರೆ, ಸ್ವೀಕರಿಸಬೇಕಾದವುಗಳನ್ನು ಸ್ವೀಕರಿಸುತ್ತಾರೆ. ನಂಬಿಕೆಗಳ ಮರಳ ರಾಶಿಯೊಳಗಿಂದ ಸತ್ಯದ ತುಣುಕುಗಳನ್ನು ಆರಿಸಿ ತೆಗೆದು, ತಾಳೆ ನೋಡಿ, ಸರಿಯಾಗಿ ಪೋಣಿಸಿ, ಸಮಗ್ರವಾದ ಒಂದು ತಿಳಿವಳಿಕೆಯ ಹಾರವನ್ನೇ ತಯಾರಿಸಿಕೊಡುವ ತಜ್ಞನ ಕೆಲಸವನ್ನು ಡಾ|| ರಾಮಕೃಷ್ಣ ಕಲಾತ್ಮಕವಾಗಿ ಮಾಡಿದ್ದಾರೆ. ಅವರು ಮತ್ತು ಈ ಕೃತಿಯ ಪ್ರಕಾಶಕರು ಅಭಿನಂದನಾರ್ಹರು. ಈ ಕೃತಿಯನ್ನು ಎಲ್ಲರೂ ಮೇಲಿಂದ ಮೇಲೆ ''ನೋಡಿಬಿಡುವುದು'' ಅಲ್ಲ, ಆಳವಾಗಿ ಅಭ್ಯಾಸ ಮಾಡುವುದು ಅವಶ್ಯವಿದೆ.

# ಧರ್ಮ ಮತ್ತು ವೈಚಾರಿಕತೆ



ಲೇಖಕರು : ಬಿ. ವಿ. ವೀರಭದ್ರಪ್ಪ
ಪ್ರ : ನವಕರ್ನಾಟಕ ಪ್ರಕಾಶನ, ಬೆಂಗಳೂರು
**ಪುಟ : 88** ಬೆಲೆ : ರೂ. 20

ಬಿ. ವಿ. ವೀರಭದ್ರಪ್ಪನವರು ಹಲವಾರು ವೈಚಾರಿಕ ಕೃತಿಗಳನ್ನು ರಚಿಸಿದ್ದಾರೆ. ಅವರ ''ಭಗವದ್ಗೀತ - ಒಂದು ವೈಚಾರಿಕ ಒಳನೋಟ'' ಒಂದು ಉತ್ತಮ ಕೃತಿ. ಅವರ ಇನ್ನೊಂದು ಬರೆಹ, ''ವಾಸ್ತು ಎಷ್ಟು ವಾಸ್ತವ ?'' ಕನ್ನಡ ನಾಡಿನ ಹೆಸರಾಂತ ಬರೆಹಗಾರರಲ್ಲಿ ವೀರಭದ್ರಪ್ಪನವರು ಒಬ್ಬರು.

ಈ ಕಿರುಹೊತ್ತಿಗೆಯಲ್ಲಿ ಭಾರತೀಯ ತತ್ವಜ್ಞಾನದ ಹಲವು ಎಳೆಗಳ ಬಗ್ಗೆ ಲೇಖಕರು ಬಹಳ ಸೂಕ್ಷ್ಮವಾಗಿ ಪ್ರಸ್ತಾಪ ಮಾಡಿದ್ದಾರೆ. ಭಾರತೀಯ ದರ್ಶನಗಳೆಂದು ಪರಿಗಣಿಸಲ್ಪಡುವ, ನಿಜವಾಗಿ ವೈಚಾರಿಕವೆನ್ನಬಹುದಾದ ಎಳೆಗಳ ಪರಿಚಯವನ್ನೂ ಲೇಖಕರು ನೀಡಿದ್ದಾರೆ. ಪಾಶ್ಚಾತ್ಯ ವೈಚಾರಿಕ ಎಳೆಗಳಲ್ಲಿ ಹೆಗೆಲ್‌ನ ಭಾವನಾವಾದಿ ''ಗತಿತಾರ್ಕಿಕತೆ''ಯ ಬಗೆಗೂ ಅದನ್ನು ಮಾರ್ಕ್ಸ್ ಮತ್ತು ಏಂಗೆಲ್ಸ್ ''ಗತಿತಾರ್ಕಿಕ ಚಾರಿತ್ರಿಕ ಭೌತವಾದ''ವನ್ನಾಗಿ ಮಾರ್ಪಡಿಸಿದ ಬಗೆಗೂ ಲೇಖಕರು ಪ್ರಸ್ತಾಪ ಮಾಡಿದ್ದಾರೆ. ಎ. ಎನ್. ಮೂರ್ತಿರಾವ್, ಗೌರೀಶ ಕಾಯ್ಕಿಣಿ ಅವರಂಥ ಹಿರಿಯ ಶ್ರೇಷ್ಠ ವಿಚಾರವಾದಿಗಳು ಮಾನವತೆಯೇ ವೈಚಾರಿಕತೆಯ ಆದರ್ಶವೆನ್ನುವುದನ್ನು ಹೇಗೆ ಮನೋಜ್ಞವಾಗಿ ಪ್ರತಿಪಾದನೆ ಮಾಡಿದ್ದಾರೆ ಎನ್ನುವುದನ್ನು ಲೇಖಕರು ಪ್ರಸ್ತಾಪ ಮಾಡಿದ್ದಾರೆ. ಇನ್ನೂ ಅನೇಕ ವಿಚಾರವಾದಿಗಳ, ವಿಜ್ಞಾನಿಗಳ ಮತ್ತು ತತ್ವಜ್ಞಾನಿಗಳ ಅನಿಸಿಕೆಗಳನ್ನು ಲೇಖಕರು ಈ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಭಾರತದ ಸಂವಿಧಾನವು ಮತ, ಧರ್ಮ, ಜಾತಿ, ಭಾಷೆ, ಲಿಂಗ ಭೇದಗಳಿಲ್ಲದೆ ಎಲ್ಲ ಪೌರರಿಗೂ ಸಮಾನಾವಕಾಶ ಮತ್ತು ನಾಗರಿಕ ಹಕ್ಕು ಬಾಧ್ಯತೆಗಳನ್ನು ನೀಡುವ ಆಶಯವನ್ನು ಹೇಗೆ ಹೊಂದಿದೆ ಎನ್ನುವುದನ್ನೂ ಲೇಖಕರು ಪ್ರಸ್ತಾಪ ಮಾಡಿದ್ದಾರೆ. ಬಹುಶಃ ಪುಸ್ತಕದ ಗಾತ್ರದ ದೃಷ್ಟಿಯಿಂದ, ಹೆಚ್ಚು ವಿವರಣೆಗಳು ಬೇಕಾಗಿದ್ದಲ್ಲಿಯೂ ಸೂಕ್ಷ್ಮ ಸೂಚನೆಗಳಿಂದ ಲೇಖಕರು ತೃಪ್ತಿ ಹೊಂದಬೇಕಾಯಿತೆಂದು ತೋರುತ್ತದೆ.

ಇಷ್ಟೆಲ್ಲಾ ಹೇಳಿದ ನಂತರ ಒಂದು ಮೂಲಭೂತ ವಿಷಯವನ್ನಿಲ್ಲಿ ಪ್ರಸ್ತಾಪ ಮಾಡದಿದ್ದರೆ ತಪ್ಪಾದೀತು. ಲೇಖಕರು ಪುಸ್ತಕದ ಪ್ರಸ್ತಾವನೆಯಲ್ಲೇ, ಇದು ಧರ್ಮ ಮತ್ತು ವೈಚಾರಿಕತೆಗಳನ್ನು ಸಮನ್ವಯಗೊಳಿಸುವ ಮತ್ತು ಹೊಂದಾಣಿಕೆ ಮಾಡುವ ದೃಷ್ಟಿಯಿಂದ ಬರೆದಿರುವ ಕೃತಿಯೆಂದು ಹೇಳಿಕೊಂಡಿದ್ದಾರೆ. ಶತಮಾನಗಳಿಂದ ಇವುಗಳೊಳಗೆ ಘರ್ಷಣೆ ನಡೆಯುತ್ತ ಬಂದಿದ್ದರೆ, 20ನೇ ಶತಮಾನದಲ್ಲಿ ಇವುಗಳೊಳಗೆ ಸಾಮರಸ್ಯ ಉಂಟಾಗುವ ಅಗತ್ಯವಿದೆ ಎಂದು ಲೇಖಕರು ಹೇಳುತ್ತಾರೆ. ಅದಕ್ಕೆ ಫ್ರಿತ್ಜೋಫ್ ಕಾಪ್ರನ ಕೃತಿಯೊಂದನ್ನು ಉದಾಹರಿಸುತ್ತಾರೆ. ''ವಿಶ್ವಾಸ''ವನ್ನು ಮತ್ತು ವಿಜ್ಞಾನವನ್ನು ಹೊಂದಾಣಿಕೆ ಮಾಡುವ ಯತ್ನದಿಂದ ನಿಜವಾಗಿ ವಿಜ್ಞಾನಕ್ಕೆ ಹಾನಿಯಾಗಿದೆ. ಮತ-ಧರ್ಮ-ಆಚಾರ್ಯ-ಪುರುಷರು- ಪ್ರವಾದಿಗಳೇ ಮೊದಲಾದವರ ವಿಧಿ-ನಿಷೇಧಗಳೊಂದಿಗೆ ವೈಚಾರಿಕತೆಯ ಹೊಂದಾಣಿಕೆಯಿಂದ ನಿಜವಾಗಿ ವೈಚಾರಿಕತೆಗೇ ಹಾನಿಯಾಗುತ್ತದೆ. [illegible] ಮತ್ತು ಭೌತವಾದಗಳು ಸಾಮರಸ್ಯ ಹೊಂದುವುದೆಂದರೆ ಭೌತವಾದವು ಭಾವನಾವಾದದೊಂದಿಗೆ ರಾಜಿ ಮಾಡಿಕೊಳ್ಳುವುದೆಂದು ಅರ್ಥ. [illegible] ಕ್ಷೇತ್ರದಲ್ಲಿ ಸಮನ್ವಯತೆ, ಸಾಮರಸ್ಯ. ರಾಜಿ ಪಂಚಾಯಿತಿ, [illegible] ಕೆಲವೊಮ್ಮೆ ಅಗತ್ಯವಿರಬಹುದು; ಕೆಲವೊಮ್ಮೆ ಅನಿವಾರ್ಯವೂ ಇರಬಹುದು ಆದರೆ ವೈಚಾರಿಕ ಕ್ಷೇತ್ರದಲ್ಲಿ, ಚಿಂತನೆಯ ನೆಲೆಗಟ್ಟಿನಲ್ಲಿ, ತಾತ್ವಿಕ ಪ್ರಶ್ನೆಗಳಲ್ಲಿ ದೃಢತೆ ಅಗತ್ಯ. ಅಲ್ಲಿ ರಾಜಿ ಸಲ್ಲದು. ಇದೊಂದು ವಿಚಾರದಲ್ಲಿ ಪ್ರಸ್ತುತ ಕೃತಿಯು [illegible]

[illegible]



ಅನಾಥ ಶಿಶುವಿಗೆ
ಪ್ರೀತಿಯ ಅಪ್ಪುಗೆ

ಎಸ್. ವಿದ್ಯಾಕರ್ ಕೊಳ್ಳೇಗಾಲದ ಎಮ್. ಜಿ. ಎಸ್. ವಿ. ಶಾಲೆಯ ವಿದ್ಯಾರ್ಥಿ. ಮೈಸೂರು ಯುವರಾಜಾ ಕಾಲೇಜಿನಿಂದ ಬಿ. ಎಸ್‌ಸಿ. (ಬಾಟನಿ) ಪದವಿ, ಚೆನ್ನೈನಲ್ಲಿ ಎಂ.ಎ. (ಸೋಶಿಯಲ್ ವರ್ಕ್ - ಮೆಡಿಕಲ್ ಮತ್ತು ಸೈಕಿಯಾಟ್ರಿ) ಪದವಿ ಪಡೆದಿದ್ದಾರೆ. ವೆಲ್ಲೂರು ಕ್ರಿಶ್ಚಿಯನ್ ಮೆಡಿಕಲ್ ಕಾಲೇಜಿನಲ್ಲಿ ಕೌನ್ಸೆಲಿಂಗ್ ಸೈಕಾಲಜಿ ಅಧ್ಯಯನ ಮಾಡಿದ್ದಾರೆ. ಕಲ್ಕತ್ತದ ಮದರ್ ಥೆರೇಸಾ ಮಿಷನ್‌ನಲ್ಲಿ ಮೂರು ತಿಂಗಳು ಕುಷ್ಠರೋಗ ಚಿಕಿತ್ಸೆ, ಶುಶ್ರೂಷೆ ತರಬೇತು ಪಡೆದಿದ್ದಾರೆ. ಚೆನ್ನೈನಲ್ಲಿದ್ದ ಜರ್ಮನ್ ಕುಷ್ಠರೋಗ ಸಂಘಟನೆಯಲ್ಲಿ ಮೂರು ವರ್ಷ, ಮನೋರೋಗ ಆಸ್ಪತ್ರೆಯಲ್ಲಿ ಮೂರು ವರ್ಷ ಕೆಲಸ ಮಾಡಿದ ಅನುಭವವಿದೆ. ಬಿ.ಎಲ್. ಪದವಿ ಪಡೆದಿದ್ದಾರೆ. ಸ್ವಲ್ಪ ಕಾಲ ಆಟೋರಿಕ್ಷಾ ಡ್ರೈವರ್ ಕೆಲಸ ಮಾಡಿದ್ದಾರೆ. ಕಟ್ಟಕಡೆಗೆ ಅವರ ಕೊರಳಿಗೆ ಬಿದ್ದದ್ದು ಮಾನವೀಯ ಸೇವೆಗಳ ಈ ಕ್ಷೇತ್ರ. ಮೇಲಿನ ಅವರ ಎಲ್ಲ ಅನುಭವಗಳ ಸಮುಪಯೋಗ ಇದರಿಂದ ಸಾಧ್ಯವಾಗಿದೆ.

ಕಾಲೇಜಿನಲ್ಲಿ ನಾಟಕಗಳಲ್ಲಿ ಭಾಗವಹಿಸುತ್ತಿದ್ದರು. ಅಭಿನಯಕ್ಕಾಗಿ ಬಹುಮಾನ ಗಳಿಸಿದ್ದರು. ಚೆನ್ನೈಗೆ ಬಂದಾಗ ಭರತನಾಟ್ಯ ಅಭ್ಯಾಸ ಮಾಡಿದ್ದರು. ಸಿನಿಮಾ ನಟನಾಗಬೇಕೆಂದು ಹಂಬಲಿಸಿದ್ದರು. ಹೀಗೆ ಸೇವಾ ಕಾರ್ಯಗಳಲ್ಲಿ ತೊಡಗಬಹುದೆಂಬ ಕಲ್ಪನೆ ಅವರಿಗಿರಲಿಲ್ಲ.

ಮೈಸೂರಿನಲ್ಲಿ ಕಾಲೇಜಿಗೆ ಸೇರಿದ ವರ್ಷ ಸಂಭವಿಸಿದ ಒಂದು ಘಟನೆ ಅವರನ್ನು ಚೆನ್ನೈಗೆ ಒಯ್ದಿತು. ರಸ್ತೆ ಅಪಘಾತದಲ್ಲಿ ಸಿಕ್ಕಿ ರಕ್ತದ ಮಡುವಿನಲ್ಲಿ ಪ್ರಜ್ಞೆತಪ್ಪಿ ಬಿದ್ದಿದ್ದ ಅಪರಿಚಿತ ವ್ಯಕ್ತಿಯನ್ನು ವಿದ್ಯಾಕರ್ ತಮ್ಮ ಗೆಳೆಯರ ಸಹಾಯದಿಂದ ಕೃಷ್ಣರಾಜೇಂದ್ರ ಆಸ್ಪತ್ರೆಗೆ ಸೇರಿಸಿದರು. ಆ ವ್ಯಕ್ತಿಗೆ ಮೂರು ದಿನಗಳನಂತರ ಪ್ರಜ್ಞೆ ಬಂದಿತು. ಅವರು ಚೆನ್ನೈ ಪಟ್ಟಣದವರು. ಅವರ ಹೆಸರು ಡಿ. ರಾಮಕೃಷ್ಣ. ಹೀಗೆ ತನ್ನ ಜೀವ ಉಳಿಸಲು ಸಹಾಯ ಮಾಡಿದುದಕ್ಕಾಗಿ ಅವರು ಕೃತಜ್ಞತೆ ಸಲ್ಲಿಸಿದರು. ಮುಂದೆ, ವಿದ್ಯಾಕರ್ ಚೆನ್ನೈ ತಲುಪಿದಾಗ ಅವರ ಓದು ಮುಂದುವರಿಸಲು ರಾಮಕೃಷ್ಣನ್ ಸಹಾಯ ಮಾಡಿದರು. ತಮ್ಮ ಮನೆಯಲ್ಲಿ ಆಶ್ರಯ ನೀಡಿದ್ದಲ್ಲದೆ, ವಿದ್ಯಾಕರರಲ್ಲಿದ್ದ ಸಮಾಜ ಸೇವೆಯ ಒಲವನ್ನು ಗುರುತಿಸಿದರು. ಈ ಸಂಸ್ಥೆ ಸ್ಥಾಪಿಸಲು ಪ್ರೇರಕರಾದದ್ದು ಮಾತ್ರವಲ್ಲದೆ, ಮುಂದೆ, ಕ್ಯಾನ್ಸರಿನಿಂದ ತೀರಿಕೊಳ್ಳುವವರೆಗೆ ವಿದ್ಯಾಕರರಿಗೆ ಮಾರ್ಗದರ್ಶಿಯಾದರು.

**S. Vidyakar**, Udaum Karangal, 460,, N.S.K. Nagar, Arumbakkam, Chennai - 600 106

ಮೈಸೂರು ಜಿಲ್ಲೆಯ ಕೊಳ್ಳೇಗಾಲದಲ್ಲಿ ಹುಟ್ಟಿದ ಎಸ್. ವಿದ್ಯಾಕರ್ ಎಂಬ ಉತ್ಸಾಹಿ ತರುಣ, ಚೆನ್ನೈ ವಾಸಿಗಳ, ಅಂತೆಯೇ ತಮಿಳರ ಕಣ್ಮಣಿಯಾದದ್ದು ಒಂದು ರೋಚಕ ವೃತ್ತಾಂತ. ವಿದ್ಯಾಕರರ ಮತ್ತು ಅವರು ನಡೆಸುತ್ತಿರುವ ಸೇವಾಸಂಸ್ಥೆಯ ಪರಿಚಯವಾದನಂತರ, ಇಂಥ ವ್ಯಕ್ತಿ ನಮ್ಮ ಮಧ್ಯೆ ಇದ್ದಾರೆಂಬ ಅಚ್ಚರಿ, ಸಂಭ್ರಮದ ಜೊತೆಗೆ, ಈ ವ್ಯಕ್ತಿ ಇನ್ನೆಷ್ಟು ಹೊರೆ ಹೊರಲು ಸಾಧ್ಯ [illegible].

ತಮಿಳರ ಮಧ್ಯೆ ಚಿರಪರಿಚಿತವಾಗಿರುವ ಸೇವಾ ಸಂಸ್ಥೆ 'ಉದವುಂ ಕರಂಗಳ್' (ಸ್ನೇಹ ಹಸ್ತ)



ತಿರುವೇರ್ಕಾಡಿನಲ್ಲಿ ಭವ್ಯ ಕಟ್ಟಡಗಳು

# ಅನಾಥರ ಕಣ್ಣೀರು

ಸಂದರ್ಶ

ಪ್ರದೇಶ, ಜಾತಿ, ಧರ್ಮ ಮುಂತಾದ ಚೌಕಟ್ಟುಗಳನ್ನು ಮೀರಿ ಪರಿತ್ಯಕ್ತ-ಅನಾಥ ಶಿಶುಗಳಿಗೆ, ದಿಕ್ಕಿಲ್ಲದ ವಿಕಲಾಂಗರಿಗೆ, ಬುದ್ಧಿಮಾಂದ್ಯರಿಗೆ, ಮನೋರೋಗಿಗಳಿಗೆ, ವೃದ್ಧಾಪ್ಯದಿಂದ ತೀರಾ ಅಸಹಾಯಕ ಸ್ಥಿತಿಗೆ ತಲುಪಿದ ಸ್ತ್ರೀ-ಪುರುಷರಿಗೆ, ಏಡ್ಸ್ ರೋಗಿಗಳಿಗೆ ಪ್ರೀತಿ, ಕರುಣೆ, ಸಹಾನುಭೂತಿ ತೋರಿಸಿ ಅವ ಜೋಪಾನ ಮಾಡುವ ಮೂಲಕ ಅವರ ಬದುಕನ್ನು ಸಹ್ಯವಾಗಿಸುವ ಅತ್ಯಂತ ಮಾನವೀ ಸೇವೆಗಳಲ್ಲಿ ತೊಡಗಿಕೊಂಡಿದೆ.

ಉದವುಂ ಕರಂಗಳ್ ವಿದ್ಯಾಕರ್ ಎಂದೇ ಪರಿಚಿತರಾಗಿರುವ ಇವರು ಹುಟ್ಟಿನಿಂದ ಕ್ರೈಸ್ ಬೆಳೆದದ್ದು ಹಿಂದು ಪರಿಸರದಲ್ಲಿ. ಈಗ ಪರಿಪೂರ್ಣ 'ಮನುಷ್ಯ'ರು ! ಹತ್ತು ವರ್ಷಗಳ ಹಿ ಇವರನ್ನು ಭೇಟಿ ಮಾಡಿದ್ದಾಗ ಈ ಸಂಸ್ಥೆ ಒಂದು ಇಕ್ಕಟ್ಟಾದ ಬಾಡಿಗೆ ಮನೆಯಲ್ಲಿತ್ತು. ಆಗ ಸುಮ ಐವತ್ತು ಅನಾಥ ಮಕ್ಕಳಿದ್ದರು. ವಿದ್ಯಾಕರ್ ಕಳೆದ ಹತ್ತು ವರ್ಷಗಳಲ್ಲಿ ತಮ್ಮ ನಿಸ್ವಾರ್ಥ ಸೇವೆ ಮೂಲಕ ಅಚ್ಚರಿ ಉಂಟುಮಾಡುವಂಥ ಹಲವು ಸಾಧನೆಗಳನ್ನು ಮಾಡಿದ್ದಾರೆ. ಈಗ ಈ ಸ ಸುಮಾರು ೧೫೦೦ ಅನಾಥರಿಗೆ ಆಶ್ರಯ ನೀಡಿದೆ. ಚೆನ್ನೈ ಸುತ್ತಮುತ್ತ ನಾಲ್ಕು ಕಡೆ ಚಟುವ ನಡೆಸುವುದಲ್ಲದೆ, ಕೊಯಂಬತ್ತೂರು, ತಿರುಪ್ಪೂರು, ಪಾಂಡಿಚೆರಿ ಮುಂತಾದ ಕಡೆ ಶಾಖೆಗಳಿವೆ.

ಚೆನ್ನೈ ವಾಸಿಗಳಿಗೆ ಉದವುಂ ಕರಂಗಳ್ ಬಗ್ಗೆ ಎಷ್ಟು ವಿಶ್ವಾಸವೆಂದರೆ, ರಸ್ತೆಯಂಚಿನ ಕಸದ ತೊಟ್ಟಿಯಲ್ಲಿ ಆದಾಗ ತ್ಯಜಿಸಿಹೋದ ಮಗುವನ್ನು ಕಂಡಾಗ, ಅಸಹಾಯಕ ಸ್ಥಿತಿಯಲ್ಲಿರುವ ವೃದ್ಧರು ಕಾಣಿಸಿದಾಗ, ಮನಸ್ಸಿಗೆ ಬಂದ ಕಡೆ ತಿರುಗಾಡುವ ಬುದ್ಧಿಮಾಂದ್ಯರನ್ನು ಕಂಡಾಗ, ವಿದ್ಯಾಕರರನ್ನು ನೆನಪು ಮಾಡಿಕೊಂಡು ಸಂಸ್ಥೆಗೆ ಫೋನು ಮಾಡುತ್ತಾರೆ. ಯಾವ ವೇಳೆಯಾಗಿದ್ದರೂ, ವಿದ್ಯಾಕರರಾಗಲಿ, ಅವರ ಸ್ವಯಂ ಸೇವಕರಾಗಲಿ ರಕ್ಷಣೆಗೆ ಧಾವಿಸುತ್ತಾರೆ. ಸ್ನೇಹ ಹಸ್ತ ಚಾಚಿ ಬರಮಾಡಿಕೊಳ್ಳುತ್ತಾರೆ. ಬುದ್ಧಿಮಾಂದ್ಯ ವ್ಯಕ್ತಿಗಳ ಕೈಕಾಲುಗಳಿಗೆ ಕಬ್ಬಿಣದ ಬಳೆಯ ಬಂಧನ ಹಾಕಿರುವ ವಿಷಯವನ್ನು ಅವರ ಗೆಳೆಯರು ಯಾರೋ ತಿಳಿಸಿದಾಗ, ವಿದ್ಯಾಕರ ಆಂಬುಲೆನ್ಸ್ ಸಹಿತ ಬೆಂಗಳೂರಿಗೆ ಬಂದು ಬಸವರಾಜ ಎ ವ್ಯಕ್ತಿಯನ್ನು ಕರೆದೊಯ್ದು ಚಿಕಿತ್ಸೆ ನೀಡಿ ಅವರ ಬೇಡಿಯನ್ನು ಕಳಚಿದ್ದಾರೆ. ಹಾಗೆಯ ಬಾಗಲಕೋಟೆಯಿಂದ ಆದಂ ಪಂಡಾರಿ ಎಂಬ ತುಸು ಉಗ್ರ ಸ್ವರೂಪದ ಮನೋರೋ ಚಿಕಿತ್ಸೆ ನೀಡಿಸುತ್ತಿದ್ದಾರೆ. ಇಂಥಾ ನೂರಾರು ಪ್ರಕರಣಗಳನ್ನು ಹೇಳಬಹುದು.



ಬುದ್ಧಿಮಾ

ಸಮಾಜದ, ಮಾನಾಪಮಾನದ ಅಂಜಿಕೆಯಿಂದ ಅವಿವಾಹಿತ ತಾಯಂದಿರು ತ್ಯಜ ಹೋಗುವ ಶಿಶುಗಳನ್ನು ಸಂರಕ್ಷಿಸುವ **ಶಿಶುಭವನ**, ಅನಾಥ ಮಕ್ಕಳಿಗಾಗಿ **ತಾಯಗಂ**, ಶಾ ಹೋಗುವ ಪ್ರಾಯದ ಮಕ್ಕಳಿಗಾಗಿ **ಬಾಲಮಿತ್ರ**, ಹಿರಿಯ ಅನಾಥ ಮನೋರೋಗಿಗ ಬುದ್ಧಿಮಾಂದ್ಯರು ಮತ್ತು ವಿಕಲಾಂಗರಿಗಾಗಿ **ಮಲರ್‌ವನಂ**, ಏಡ್ಸ್ ರೋಗಿಗಳಿಗೆ ಚಿಕಿತ್ಸೆ ನೀಡ ಸಹಾಯಕವಾಗುವ **ಶಾಂತಿವನಂ**, ಮನೆಗಳಿಂದ ತಪ್ಪಿಸಿಕೊಳ್ಳುವ ಮಕ್ಕಳು, ಸ್ತ್ರೀಯರು ಮ ಪುರುಷರನ್ನು ರಕ್ಷಿಸಿ ಅವರ ಮನೆಗಳಿಗೆ ತಲುಪಿಸುವ **ಅಡ್ಡೈಕಲಂ**, ಕುಟುಂಬ ಸಂಬಂಧ ಸಮಸ್ಯೆಗಳನ್ನು ಕೌನ್ಸೆಲಿಂಗ್ ಮೂಲಕ ನಿವಾರಿಸುವ ಮತ್ತು ಕೆಲವು ದಿನ ಅವರಿಗೆ ಉಳಿದುಕೊಳ್ಳ ಅವಕಾಶ ಕಲ್ಪಿಸುವ **ಸುಮೈತಾಂಗಿ**, ಮುದ್ರಣ ವಿಭಾಗವಾದ **ಉದವುಂ ಕರಂಗಳ್ ಪ್ರಿಂಟ** ಇವಲ್ಲದೆ ಬಡವರಿಗಾಗಿ **ಆಂಬುಲೆನ್ಸ್** ಹಾಗೂ **ಶವಸಂಸ್ಕಾರ ಸೇವೆ** ಮುಂತಾದವು ಅದರ ಸೇ ಘಟಕಗಳು.

## ಬಾಲಮಿತ್ರ ಪ್ರಾರಂಭಿಸಲು ಕಾರಣವಾದ ಘಟನೆ ಬಗ್ಗೆ

''ನಾನು ಬಿಡುವಿನ ವೇಳೆಯಲ್ಲಿ ಕುಷ್ಠರೋಗಿಗಳಿಗೆ, ಮನೋರೋಗಿಗಳಿಗೆ ಚಿಕಿ ಶುಶ್ರೂಷೆ ಮಾಡುತ್ತಿದ್ದೆ. ಹಾಗಾಗಿ ನನಗೆ ಅನೇಕ ಜನರ ಪರಿಚಯವಿತ್ತು. ಹಾಗೆ ಪರಿಚಿತನಾಗಿ

# ...ಲರೆಸುವ ಕೈಗಳು

...ಂಜ್ಯೋತಿ

ರಿಕ್ಷಾಚಾಲಕನೊಬ್ಬ, ಸಿನೆಮಾ ಥಿಯೇಟರಿನಲ್ಲಿ ಯಾರೋ ಬಿಟ್ಟು ಹೋಗಿದ್ದ ಹನ್ನೊಂದು ತಿಂಗಳ ಗಂಡು ಕೂಸನ್ನು ನನ್ನ ಬಳಿಗೆ ತಂದ. ...ು ವಿಪರೀತ ಜ್ವರದಿಂದ ನರಳುತ್ತಿತ್ತು. ಆ ಕ್ಷಣಕ್ಕೆ ಅದಕ್ಕೆ ತುರ್ತುಚಿಕಿತ್ಸೆ ಅಗತ್ಯವಾಗಿತ್ತು. ...ವಾಗಲು ಕೆಲವು ದಿನ ಹಿಡಿಯಿತು. ಈ ಮಧ್ಯೆ ಆದರ ತಂದೆತಾಯಿಗಳಿಗಾಗಿ ...ಡುಕಾಡಿದೆವು. ಅವರ ಮಗುವನ್ನು ಅವರಿಗೆ ಒಪ್ಪಿಸಿಬಿಡುವುದು ನಮ್ಮ ಉದ್ದೇಶವಾಗಿತ್ತು. ಆಗ ...ಗೆ ಸಣ್ಣ ಮಗುವಿನ ಪಾಲನೆಯ ತರಬೇತಿ ದೊರಕಿತು. ದಿನ ಕಳೆದಂತೆ ಆ ಮಗು ನನ್ನೊಂದಿಗೆ ...ಷ್ಟು ಚೆನ್ನಾಗಿ ಒಗ್ಗಿಕೊಂಡಿತೆಂದರೆ, ಅದರ ತಂದೆ-ತಾಯಿಗಳು ಪತ್ತೆಯಾದರ ಅದನ್ನು ...ಸಿಬಿಡುವುದು ಹೇಗಪ್ಪಾ ಎನ್ನಿಸಿತು.''

...ಮುಂದೆ ಹಲವು ವ್ಯಕ್ತಿಗಳು, ಸೇವಾ ಸಂಸ್ಥೆಗಳ ಮೂಲಕ, ಪೊಲೀಸರ ಮೂಲಕ ...ದೊಂದಾಗಿ ಮಕ್ಕಳು ಬಾಲಮಿತ್ರಕ್ಕೆ ಬಂದವು. ಎಲ್ಲ ಜಾತಿ ಧರ್ಮಗಳಿಗೆ ಸೇರಿದ ಮಕ್ಕಳು. ...ದೊಂದು ಮಗುವಿನ ಹಿನ್ನೆಲೆಯಲ್ಲೂ ಒಂದು ಕಣ್ಣೀರ ಕಥೆ. ಮನುಷ್ಯರ ಮನಸ್ಸಿನಲ್ಲಿ ...ಗಿರುವ ನಿರ್ದಯೆ, ಕ್ರೌರ್ಯವನ್ನು ಸ್ಪಷ್ಟಪಡಿಸುವಂತೆ. ಹೀಗೆ ಬಂದ ಮಕ್ಕಳಿಗೆ ವಿದ್ಯಾಕರರೇ ಪ್ರೀತಿಯ ಅಪ್ಪ. ಅವರನ್ನು ಕಂಡ ಕೂಡಲೇ ಅವರ ಸ್ಪರ್ಶಕ್ಕಾಗಿ, ಅಪ್ಪುಗೆಗಾಗಿ, ಪ್ರೀತಿಗಾಗಿ ಹಾತೊರೆಯುವ ಮಕ್ಕಳನ್ನು ನೋಡಬೇಕು! ಪ್ರತಿಯೊಂದು ಮಗು ತನ್ನ ಪಾಲಿನ ಪ್ರೀತಿ ಗಿಟ್ಟಿಸಿಕೊಂಡ ನಂತರವೇ ವಿದ್ಯಾಕರರಿಗೆ ಬಿಡುಗಡೆ. ಮಕ್ಕಳ ಬಾಲ್ಯವನ್ನು ಅವರಿಗೆ ನೀಡುವಲ್ಲಿ ವಿದ್ಯಾಕರ್ ಸಫಲರಾಗಿದ್ದಾರೆ.

...ವಿಭಾಗ

''ಇಲ್ಲಿ ನಾವು ಮಕ್ಕಳನ್ನು ಧರ್ಮ ದೇವರ ಹೆಸರಿನಲ್ಲಿ ವಿಂಗಡಿಸುವುದಿಲ್ಲ. ಅವರನ್ನು ಪ್ರೀತಿಯಿಂದ 'ಮನುಷ್ಯ'ರಾಗುವಂತೆ ಸಮಾಜ ಕಂಟಕರಾಗದಂತೆ ಬೆಳೆಸುತ್ತೇವೆ. ಅವರಲ್ಲಿರುವ ವ್ಯಕ್ತಿತ್ವ, ಪ್ರತಿಭೆ ಪ್ರಕಟಣೆಗೊಳ್ಳಲು ಸಹಾಯ ಮಾಡುತ್ತೇವೆ. ಮಕ್ಕಳನ್ನು ದತ್ತಕ್ಕೆ ಕೊಡುವುದಿಲ್ಲ. ನನ್ನ ಮಕ್ಕಳು ಮಾರಾಟಕ್ಕಿಲ್ಲ. ಅವರನ್ನು ಮತಾಂತರಗೊಳಿಸುವುದೂ ನಮ್ಮ ಉದ್ದೇಶವಲ್ಲ. ಅವರು ಹದಿನೆಂಟರ ಪ್ರಾಯಕ್ಕೆ ...ಪಿದನಂತರ ತಮಗಿಷ್ಟವಾದ ಧರ್ಮವನ್ನು ಆಯ್ಕೆ ಮಾಡಿಕೊಳ್ಳುವ ಹಕ್ಕು ಅವರದು.''

...ತಿರುವೇರ್ಕಾಡಿನಲ್ಲಿರುವ ವಿಶಾಲ ಕಟ್ಟಡದಲ್ಲಿ ಅವರು ಮಕ್ಕಳ ಆರೈಕೆಗಾಗಿ ನಿರ್ಮಿಸಿರುವ ...ಣೆಗಳನ್ನು ಮಕ್ಕಳ ಮನಸ್ಸಿಗೆ ಹಿತವಾಗುವಂತೆ ಅಲಂಕರಿಸಿರುವುದನ್ನು, ಅವರ ಊಟ, ಆಟ, ...ಕ್ಕಾಗಿ ತೆಗೆದುಕೊಳ್ಳುತ್ತಿರುವ ಕಾಳಜಿಯನ್ನು, ಸ್ವಚ್ಛತೆಯನ್ನು, ಅಲ್ಲಿ ಸೇವೆ ಮಾಡುತ್ತಿರುವವರ ...ಷ್ಠೆಯನ್ನು ಗಮನಿಸಿದಾಗ ಇದೊಂದು ಅನಾಥಾಶ್ರಮ ಎಂಬ ಕಲ್ಪನೆಯೇ ಬರುವುದಿಲ್ಲ.

...'ಬಾಲಮಿತ್ರ' ಮಕ್ಕಳಿಗೆಂದೇ ತಿರುವೇರ್ಕಾಡಿನಲ್ಲಿ ಕಟ್ಟಿಸಿರುವ ದೊಡ್ಡ ಶಾಲೆ ವಿದ್ಯಾಕರರ ...ಟಕ್ಕೊಂದು ತುರಾಯಿ. ಈಗ ಸುತ್ತಲಿನ ಅನೇಕ ಮಕ್ಕಳು ಅಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ.

...ಹುಟ್ಟಿದ ಕೆಲವು ದಿನಗಳಿಂದ ಹಿಡಿದು ಆರು ತಿಂಗಳ ಮಕ್ಕಳು ಬೇಬಿ ಕೇರ್ ವಿಭಾಗದಲ್ಲಿ ಆರೈಕೆ ...ದ ನಂತರ ಮತ್ತೊಂದು ವಿಭಾಗಕ್ಕೆ, ಒಂದರಿಂದ ಎರಡು ವರ್ಷಗಳ ಮಕ್ಕಳು ಇನ್ನೊಂದು ...ಾಗಕ್ಕೆ, ಶಾಲೆಗೆ ಹೋಗುವ ವಯಸ್ಸಿನ ಮಕ್ಕಳು ಮತ್ತೊಂದು ವಿಭಾಗಕ್ಕೆ ಹೋಗುತ್ತಾರೆ. ಇಲ್ಲಿ ...ಕ್ಕಳು ತಾಯಿಯ ಆರೈಕೆಯಲ್ಲಿ ಬೆಳೆಯುವಂತೆ ಪ್ರತಿ ೨೦ ಮಕ್ಕಳಿಗ ಒಂದೊಂದು ಮನೆ. ಅವರ ...ಕೆ ಮಾಡಲು ಸ್ವಯಂಸೇವಕ ತಾಯಿ. ಮನೆಪಾಠ, ಸಂಗೀತ, ನೃತ್ಯಾಭ್ಯಾಸ, ಕಂಪ್ಯೂಟರ್ ಕಲಿಕೆ, ...ಚನಾಲಯ - ಮುಂತಾದ ಎಲ್ಲ ಸೌಲಭ್ಯಗಳಿವೆ.

...ನಾನು ಮೊದಲು ವಿದ್ಯಾಕರರನ್ನು ಭೇಟಿ ಮಾಡಿದ್ದಾಗ ಅವರ ಮೊದಲ ಮಗನಿಗೆ ಐದು ...ರ್. ಆತನ ಬಗ್ಗೆ, ಮೊದಲ ಮಗಳ ಬಗ್ಗೆ ಕೇಳಿದಾಗ ಅವರ ಮುಖ ಅರಳಿತು.

''ಮಗ ಓದು ಮುಗಿಸಿ, ಕೊಯಂಬತ್ತೂರಿನ ಒಂದು ಸಿನಿಮಾ ಮಂದಿರದ ನಿರ್ವಹಣೆ ...ಡುತ್ತಿದ್ದಾನೆ. ಜೊತೆಗೆ ನಮ್ಮ ಶಾಖೆಯ ಉಸ್ತುವಾರಿ ಸಹ.''

ಎಡದಿಂದ ಬಲಕ್ಕೆ : ಮಂಜುಳಾ, ರಾಜೇಶ್ವರಿ, ಬೀನಾ

''ಮೊದಲನೆ ಮಗಳು ಈಗ ಸಿ. ಎ. ಮಾಡುತ್ತಿದ್ದಾಳೆ. ಅಂದಹಾಗೆ, ನನ್ನ ಇನ್ನೊಬ್ಬ ಮಗನಿಗೆ ಐ.ಐ.ಟಿ. ಸೀಟು ಸಿಕ್ಕಿದೆ. ಇಂದು ಆತನ ಫೀಜು ತುಂಬಿಸಬೇಕು:'' ತಂದೆಯ ಸಂಭ್ರಮ ! ಇವರ ಮಕ್ಕಳು ಹಲವರು ಕೆಲಸದಲ್ಲಿದ್ದಾರೆ, ಹೆಣ್ಣುಮಕ್ಕಳು ಮದುವೆಯಾಗಿದ್ದಾರೆ. ಅವರ ಬಾಣಂತನ ಮಾಡಲು ತವರು ಮನೆಯವರು ತಯಾರು! ಎಲ್ಲರೂ ಸಂಸ್ಥೆಯೊಂದಿಗೆ, ಅಪ್ಪನೊಂದಿಗೆ ಸಂಪರ್ಕ ಇರಿಸಿಕೊಂಡಿದ್ದಾರೆ.

ಪ್ರಾರಂಭದಲ್ಲಿ ಮಕ್ಕಳಿಗೆ ಪ್ರತಿದಿನ ಹೊಟ್ಟೆ ತುಂಬ ಊಟ ಒದಗಿಸಲು ಪರದಾಡಬೇಕಿತ್ತು. ಇವರು ಮನೆಗಳಿಗೆ ಹೋಗಿ ಯಾಚಿಸುವುದಿತ್ತು. ಅವರ ಸಹಾಯಕರಿಗೆ ಮುಜುಗರದ ವಿಷಯ. ಆದರೆ, ಬೇರೆ ಯಾರೋ ಈ ಸಂಸ್ಥೆಯ ಹೆಸರಿನಲ್ಲಿ ಯಾಚಿಸಿ ದೋಚುತ್ತಿರುವುದು ತಿಳಿದನಂತರ ಅದನ್ನು ಕೈಬಿಡಬೇಕಾಯಿತು. ಸಮುದ್ರ ತೀರದಲ್ಲಿ ಗಾಳಿ ಸೇವನೆಗಾಗಿ ಬಂದವರಿಂದ ಸಹಾಯ ಬೇಡುತ್ತಿದ್ದರು. ಒಮ್ಮೆ ಮಹಾಶಯನೊಬ್ಬ ವಿದ್ಯಾಕರರನ್ನು 'ಇಂಗ್ಲೀಷ್‌ನಲ್ಲಿ ಬೇಡುವ ಸಭ್ಯ ಭಿಕ್ಷುಕ' ಎಂದು ಚುಚ್ಚಿದ ಮೇಲೆ ಅದಕ್ಕೂ ಮುಕ್ತಾಯ. ಆದರೆ, ತಮಿಳು ಪತ್ರಿಕೆಗಳು ವಿದ್ಯಾಕರರ ನೆರವಿಗೆ

ಎಲ್ಲ ಕೆಲಸವನ್ನೂ ಒಬ್ಬರೇ ನಿರ್ವಹಿಸಲು ಸಾಧ್ಯವಿಲ್ಲವಷ್ಟೆ. ಅತ್ಯಂತ ಅರ್ಪಣಾ ಭಾವದಿಂದ ಸಹಾಯ ಮಾಡುವ ಸ್ವಯಂ ಸೇವಕರಿದ್ದಾರೆ. ಇವರು ಸಂಬಳಕ್ಕಾಗಿ ದುಡಿಯುವವರಲ್ಲ. ಈ ಸಂಸ್ಥೆಯ ಬಗ್ಗೆ ಪತ್ರಿಕೆಗಳಲ್ಲಿ ಬಂದ ಲೇಖನಗಳನ್ನು ಓದಿ, ಸೇವೆ ಮಾಡುವ ಭಾವನೆಯಿಂದ ಬಂದಿರುವವರು. ಈ ಪೈಕಿ ಹಲವು ಮಂದಿ ಪದವೀಧರ ಯುವಕ ಯುವತಿಯರು. ನನ್ನನ್ನು ಮುಖ್ಯ ಕಚೇರಿಯಿಂದ ತಿರುವೇರ್ಕಾಡಿಗೆ ಕರೆದೊಯ್ದ ದಾಡಿವಾಲ ಅಜ್ಜನನ್ನು (ಶ್ರೀನಿವಾಸನ್) ನಾನು ಡ್ರೈವರ್ ಎಂದೇ ಭಾವಿಸಿದ್ದೆ. ಆದರೆ ಆತ ನಿವೃತ್ತ ಎಂಜಿನಿಯರ್! ಸಂಸ್ಥೆಗೆ ತಮ್ಮ ರೀತಿಯಲ್ಲಿ ಹೀಗೆ ನೆರವಾಗುತ್ತಿದ್ದಾರೆ ಎಂಬುದು ತಿಳಿದಾಗ ಆಶ್ಚರ್ಯವಾಗದೆ ಇರಲಿಲ್ಲ. ಆಫೀಸು ಪತ್ರವ್ಯವಹಾರ ನೋಡಿಕೊಳ್ಳಲು ಸಹಕರಿಸುವವರು ಸಹ ನಿವೃತ್ತ ಅಧಿಕಾರಿ.

ಕುಷ್ಠ, ಏಡ್ಸ್ ರೋಗಿಗಳನ್ನು, ಬುದ್ಧಿಮಾಂದ್ಯರನ್ನು, ಅಂಗವಿಕಲರನ್ನು, ಉಗ್ರ ಮನೋರೋಗಿಗಳನ್ನು, ತೀರಾ ಅಸ್ವಸ್ಥರನ್ನು, ಸಾವಿನ ನಿರೀಕ್ಷೆಯಲ್ಲಿರುವವರನ್ನು ನಿಭಾಯಿಸಲು ಎಷ್ಟು ಸಹನೆ, ಶ್ರದ್ಧೆ ಇರಬೇಕು ಎಂಬುದನ್ನು ಅಲ್ಲಿ ಸೇವೆ ಮಾಡುತ್ತಿರುವ ಸ್ವಯಂ ಸೇವಕರನ್ನು ನೋಡಿಯೇ ತಿಳಿಯಬೇಕು.

ತಿರುವೇರ್ಕಾಡು ಘಟಕದ ಉಸ್ತುವಾರಿ ನೋಡಿಕೊಳ್ಳುವ ಬೆಂಗಳೂರಿನ ರಾಜೇಶ್ವರಿ, ಪುಟ್ಟಮಕ್ಕಳಿಗೆ ಸ್ನಾನ ಮಾಡಿಸಿ ಸಿಂಗರಿಸುವ ಚಿಂತಾಮಣಿಯ ಅಜ್ಜಿ, ಇಪತ್ತು ಮಕ್ಕಳಿಗೆ ಅಮ್ಮನಾಗಿ ಸೇವೆ ಸಲ್ಲಿಸುತ್ತಿರುವ ಮಳವಳ್ಳಿಯ ಮಂಜುಳಾ. [illegible] ಅಕೌಂಟೆಂಟ್ ಹುದ್ದೆಗೆ ರಾಜಿನಾಮೆ ನೀಡಿ ಮಕ್ಕಳ ಜವಾಬ್ದಾರಿ [illegible] ಯುವತಿ ಬೀನಾ, ಕರುಣಾಲಯದ ಬಲ್ಕೀಸ್, ಮಲರ್‌ವನಂನ ದಾಸ್, ಮುಖ್ಯ ಕಛೇರಿಯಲ್ಲಿ ಕೆಲಸ ಮಾಡುವ ಯುವಕ (ಈತ ಸಹ ಸಿ. [illegible]ಗ್ರಾಫರ್) ಶ್ರೀನಿವಾಸ್ - ಮುಂತಾದ ಅನೇಕರನ್ನು [illegible] ಸದಸ್ಯರನೇಕರು ಸ್ವಯಂ ಸೇವಕರಾಗಿದ್ದಾರೆ.

ಬಂದವು. ಪತ್ರಿಕೆಗಳಲ್ಲಿ ಇವರ ಸೇವಾಕಾರ್ಯದ ಕುರಿತು ಲೇಖನಗಳು ಪ್ರಕಟವಾದಾಗ ಹಲವು ಮೂಲಗಳಿಂದ ಸಹಾಯ ಬರತೊಡಗಿತು.

ಪ್ರಾರಂಭದಲ್ಲೊಮ್ಮೆ ಮಕ್ಕಳು ಹಸಿವಿನಿಂದ ಕಂಗೆಡಬೇಕಾದ ಸಂದರ್ಭ ಬಂದಿತ್ತು. ಅಂದು ಮಂಗಳವಾರ. ಇವರ ಜೇಬು ಖಾಲಿ. ಅಕ್ಕಿ ಮುಗಿದಿದೆ. ಇವರಿಗೆ ಸಾಲ ನೀಡುತ್ತಿದ್ದ ಅಂಗಡಿಗೆ ಅಂದು ರಜೆ. ಸ್ವಲ್ಪ ಅಕ್ಕಿ ನುಚ್ಚು ಉಳಿದಿತ್ತು. ಅದರಲ್ಲಿ ಗಂಜಿ ಮಾಡಿದರು. ಮಕ್ಕಳು ಸಂತೋಷದಿಂದ ಉಣ್ಣುವುದನ್ನು ನೋಡಿ ಎಲ್ಲರಿಗೂ ತೃಪ್ತಿಯಾಯಿತು. ಆದರೆ, ರಾತ್ರಿಗೂ ಇದೇ ಗತಿಯಾದರೆ ಹೇಗಪ್ಪಾ ಎಂಬ ಚಿಂತೆ ಕಾಡಿಸತೊಡಗಿತು. ಆಗ ಮಹಿಳೆಯೊಬ್ಬರು ಕಾರಿನಿಂದ ಇಳಿದರು. ತಾನು ಸರಿಯಾದ ವಿಳಾಸಕ್ಕೆ ಬಂದಿದ್ದೇನೆ ಎಂಬುದನ್ನು ಖಚಿತಪಡಿಸಿಕೊಂಡು, ಕಾರಿನಲ್ಲಿ ತಂದಿದ್ದ ಅಕ್ಕಿ ಮೂಟೆಯನ್ನು ಇಳಿಸಿದರು. ಇಂತಹ ಹಲವು ಪ್ರಕರಣಗಳನ್ನು ಅವರು ಹೇಳುತ್ತಾ ಹೋಗುತ್ತಾರೆ.

ಅನೇಕ ಸಂದರ್ಭಗಳಲ್ಲಿ ಸಾರ್ವಜನಿಕರಲ್ಲದೆ, ಸರಕಾರಿ ಅಧಿಕಾರಿಗಳು, ಪೊಲೀಸರು, ಇತರ ಸೇವಾ ಸಂಸ್ಥೆಗಳು ಇವರ ಸ್ನೇಹ ಹಸ್ತ ಬಯಸುತ್ತಾರೆ. ಬೇರೊಂದು ಆಶ್ರಮದಲ್ಲಿ ಸಮಸ್ಯೆ ತಲೆದೋರಿದಾಗ, ಅಲ್ಲಿದ್ದ ಮಹಿಳಾ ಸದಸ್ಯೆಯರನ್ನು ಸಂರಕ್ಷಿಸುವ ಹೊಣೆಯನ್ನು ಇವರಿಗೆ ಹೇರಲಾಯಿತು. ಎರಡು ವರ್ಷ ಅವರ ಯೋಗಕ್ಷೇಮ ನೋಡಿಕೊಳ್ಳಬೇಕಾಯಿತು. ಬಾಂಗ್ಲಾದೇಶದ ಬಾಲಕರನ್ನು ಗಲ್ಫ್ ದೇಶಗಳಿಗೆ ಬಾಲಕಾರ್ಮಿಕರಾಗಿ ಅಕ್ರಮವಾಗಿ ಸಾಗಿಸುತ್ತಿದ್ದ ಮಂದಿ ಸಿಕ್ಕಿ ಬಿದ್ದಾಗ, ಆ ಮಕ್ಕಳಿಗೆ ಸಹಾಯಹಸ್ತ ನೀಡಬೇಕಾಯಿತು. ಸರಕಾರಿ ಇಲಾಖೆಗಳು, ಪೊಲೀಸು ಠಾಣೆಗಳು, ಸ್ವಾಸ್ಥ್ಯ ಇಲಾಖೆ, ಆಸ್ಪತ್ರೆಗಳು ಸಹ ಇವರ ಸಹಾಯ ಪಡೆದಿವೆ. ಪ್ರತಿಯಾಗಿ ಅವರಿಂದ ಲಭಿಸಿದ ಸಹಾಯ ಸೊನ್ನೆ! ಮತ್ತೆ ಕಿರುಕುಳ ಅನುಭವಿಸಿದ್ದೂ ಉಂಟು. ತೀವ್ರ ಕಾಯಿಲೆಯಿರುವವರು ಸಂಸ್ಥೆಯ ಸಂಪರ್ಕಕ್ಕೆ ಬಂದಾಗ ಅವರನ್ನು ಬೇರೆಲ್ಲಿಗೋ ದಾಟಿಸಿ ಕೈತೊಳೆದುಕೊಳ್ಳುವುದಿಲ್ಲ. ಅವರನ್ನು ಆಸ್ಪತ್ರೆಗೆ ಸೇರಿಸಿ ಚಿಕಿತ್ಸೆ ಕೊಡಿಸುತ್ತಾರೆ. ಗುಣವಾದ ನಂತರ ಆಶ್ರಯ ನೀಡುತ್ತಾರೆ. ಮರಣ ಹೊಂದಿದರೆ ಅಂತಿಮ ಕ್ರಮ ನೆರವೇರಿಸುತ್ತಾರೆ.

*ಬೆಂಗಳೂರಿನ ಬಸವರಾಜು, ಬಾಗಲಕೋಟೆಯ ಆದಂ ಪಂಡಾರಿ*

ಉದವುಂ ಕರಂಗಳ್ ಸಂಸ್ಥೆ ನಿರ್ಮಿಸಿರುವ ಹಲವು ಕಟ್ಟಡಗಳಿಗೆ ದಾನಿಗಳು ಸಹಾಯ ಮಾಡಿದ್ದಾರೆ. ಇವರ ಸೇವೆಯನ್ನು ಗಮನಿಸಿ ಬ್ಯಾಂಕ್ ಆಫ್ ಬರೋಡ, ಹಿಂದುಸ್ತಾನ್ ಪೆಟ್ರೋಲಿಯಂ, ಸ್ಟಾಂಡರ್ಡ್ ಚಾರ್ಟರ್ಡ್ ಬ್ಯಾಂಕ್ ಮುಂತಾದವು ಆಂಬುಲೆನ್ಸ್‌ಗಳನ್ನು ನೀಡಿವೆ. ರೋಗಿಗಳನ್ನು ಕರೆತರಲು, ತುರ್ತುಚಿಕಿತ್ಸೆಗಾಗಿ ರೋಗಿಗಳನ್ನು ಆಸ್ಪತ್ರೆಗೆ ಒಯ್ಯಲು ಇವು ನೆರವಾಗುತ್ತವೆ. ನವೀನ್‌ಚಂದ್ ಎಂಬ ವ್ಯಾಪಾರಿ ಸಹ ಒಂದು ಮಾರುತಿ ಆಂಬುಲೆನ್ಸ್ ನೀಡಿದ್ದಾರೆ. ಅಮೇರಿಕೆಯಲ್ಲಿ ಉದ್ಯೋಗದಲ್ಲಿರುವ ಕೆಲವರು ವಾಚನಾಲಯಗಳಿಗೆ ಒಳ್ಳೆಯ ಕಬ್ಬಿಣದ ಕಪಾಟುಗಳನ್ನು ನೀಡಿದ್ದಾರೆ.

ಸರಕಾರದ ಅನುದಾನ ಪಡೆದು ನಡೆಯುವ ಸೇವಾಶ್ರಮ ಅಥವಾ ಅನಾಥಾಲಯಗಳಿಗೂ ವಿದ್ಯಾಕರರ 'ಬಾಲಮಿತ್ರ' ಸಂಸ್ಥೆಗೂ ಇರುವ ವ್ಯತ್ಯಾಸವೆಂದರೆ, ಇಲ್ಲಿರುವ ಮಕ್ಕಳೊಂದಿಗೆ ಪ್ರೀತಿಯನ್ನು ಹಂಚಿಕೊಳ್ಳುವಲ್ಲಿ ದಾನಿಗಳೂ ತೊಡಗಿಕೊಳ್ಳುವಂತೆ ಮಾಡುವುದಾಗಿದೆ. ಇದು ವಿದ್ಯಾಕರರ ವಿಶಿಷ್ಟ ಮಾರ್ಗ. ಅನೇಕರು ತಮ್ಮ ಮಗುವಿನ ಅಥವಾ ತಂದೆತಾಯಿಗಳ ಹುಟ್ಟು ಹಬ್ಬವನ್ನು ಇಲ್ಲಿನ ಮಕ್ಕಳೊಂದಿಗೆ ಆಚರಿಸುತ್ತಾರೆ. ಅಂದು ಅವರಿಗೆ ಪ್ರಿಯವಾದ ಸಿಹಿ ಮಾಡಿಸಿ, ತಾವೇ ನಿಂತು ಮಕ್ಕಳಿಗೆ ಬಡಿಸುವುದಲ್ಲದೆ ಅವರೊಂದಿಗೆ ಕುಳಿತು ಊಟ ಮಾಡುವ ಮೂಲಕ ಆಚರಿಸುತ್ತಾರೆ. ಇದು ಸಹ ವಿದ್ಯಾಕರ್ ರೂಢಿಗೆ [illegible] ಒಂದು ಸಂಪ್ರದಾಯವಾಗಿದೆ. ಅನೇಕರು ದೀಪಾವಳಿ, ಪೊಂಗಲ್, [illegible] ದ ಹಬ್ಬಗಳನ್ನು ಇಲ್ಲಿನ ಮಕ್ಕಳೊಡನೆ [illegible]ಸುತ್ತಾರೆ. ಅನ್ನದಾನ, [illegible] ಅಲ್ಲದೆ ಸಂಸ್ಥೆಯ ವಸತಿ ನಿರ್ಮಾಣಕ್ಕೆ ವಿವಿಧ [illegible]

[illegible]

ವಿದ್ಯಾಕರ್ ಚಿಕ್ಕಂದಿನಲ್ಲಿ ಇಗರ್ಜಿಗೆ ಹೋಗುತ್ತಿದ್ದರು. ಆದರೆ ದೇವರ ಹುಂಡಿಗೆ ಕಾಸು ಹಾಕುತ್ತಿರಲಿಲ್ಲ. ಫಾದರ್ ಅಪ್ಪೇನೂ ಬಡವರಲ್ಲ ಎಂದುಕೊಂಡು, ಕಾಸನ್ನು ಕುರುಡರಿಗೆ ದಾನ ಮಾಡುತ್ತಿದ್ದರು. ಚೆನ್ನೈಗೆ ಬಂದನಂತರ ಎಲ್ಲ ದೇವಾಲಯಗಳಿಗೂ ಹೋಗ ತೊಡಗಿದರು. ಈಗ ಉದವುಂ ಕರಂಗಳ್ ಕೇಂದ್ರಗಳೇ ಅವರ ದೇವಾಲಯಗಳು, ಅವರ ಸೇವಾ ಚಟುವಟಿಕೆಗಳೇ ಪ್ರಾರ್ಥನೆಗಳೆಂದು ಭಾವಿಸುತ್ತಾರೆ. ತಾನು ಮಾಡಬಹುದಾದ ಕೆಲಸವೆಂದರೆ ಈ ಸೇವಾ ಕಾರ್ಯವೊಂದೇ ಎನ್ನುತ್ತಾರೆ. ಆದರಿಂದಾಗಿಯೇ ಅವರು ಅವಿವಾಹಿತರಾಗಿ ಉಳಿದಿದ್ದಾರೆ.

ಅವರ ಚಟುವಟಿಕೆಗಳನ್ನು ಗಮನಿಸುತ್ತಿದ್ದಂತೆ, ಸಮಾಜ ಸೇವೆಯ ಹೆಸರಿನಲ್ಲಿ ಶೋಷಣೆ ಮಾಡುವವರ ಮಧ್ಯೆ, ಅಸಹಾಯಕರ ಕಣ್ಣೀರು ಒರೆಸುವ ಆ ವ್ಯಕ್ತಿಯ ಅಪಾರ ಆತ್ಮವಿಶ್ವಾಸದ ಬಗ್ಗೆ ಅಚ್ಚರಿಯುಂಟಾಗುತ್ತದೆ. ಅದೇ ವೇಳೆ, ಅವರಿಗೆ ಸೇವೆ ಎಂದರೆ ದಿನನಿತ್ಯದ ಸಾಮಾನ್ಯ ಚಟುವಟಿಕೆಯಷ್ಟು ಸರಳವಾಗಿರುವದನ್ನೂ ಕಾಣುತ್ತೇವೆ.

''ವಿದ್ಯಾಕರರೇ, ನಿಮ್ಮ ಎಲ್ಲ ಸೇವೆ, ಚಟುವಟಿಕೆಗಳು ತಮಿಳ್ನಾಡಿಗೇ ಮೀಸಲಾಗಿವೆಯಲ್ಲ, ನಿಮ್ಮ ಸೇವೆ ಕನ್ನಡಿಗರಿಗೆ ದಕ್ಕಬಾರದೆಂದಿದೆಯೇ ?''

''ಹಾಗೇನಿಲ್ಲ. ಇಲ್ಲಿ ನಾವು ಇಷ್ಟೆಲ್ಲ ಸಾಧಿಸಿರುವುದಕ್ಕೆ ಇಲ್ಲಿನ ದಾನಿಗಳೇ ಕಾರಣ. ನಮಗೆ ಸಹಾಯಕರಾಗಲು ದಾನಿಗಳು ಮುಂದೆ ಬಂದಲ್ಲಿ, ನಮಗೆ ಸಹಾಯ ಹಸ್ತ ನೀಡಿದಲ್ಲಿ, ಬೆಂಗಳೂರಿನಲ್ಲಾಗಲೀ ಬೇರೆ ಯಾವುದೇ ನಗರದಲ್ಲಾಗಲಿ ಒಂದು ಶಾಖೆ ಪ್ರಾರಂಭಿಸಲು ತಡವಾಗಲಾರದು.''

''ಕಳೆದ ಹತ್ತು ವರ್ಷಗಳ ನಿಮ್ಮ ಸಾಧನೆ ಯಾರೂ ಹೆಮ್ಮೆ ಪಡುವಂಥದ್ದು. ಇದೆಲ್ಲ ಹೇಗೆ ಸಾಧ್ಯವಾಯಿತು? ಇದನ್ನೆಲ್ಲ ಹೇಗೆ ನಿಭಾಯಿಸುತ್ತೀರಿ? ನಿಮ್ಮ ಯಶಸ್ಸಿನ ಗುಟ್ಟು ಏನು?''

''ಇದೆಲ್ಲ ಸಾಧ್ಯವಾದದ್ದು ಕೊಡುಗೈ ದಾನಿಗಳಿಂದ. ಹೀಗೆ ಒಮ್ಮೆ ದಾನಿಗಳಾದವರು ಆಗಾಗ ಬರುವ ಮೂಲಕ ನಮ್ಮ ಕಷ್ಟಸುಖಗಳಲ್ಲಿ ಭಾಗಿಗಳಾಗುವ ಮಿತ್ರರಾಗಿದ್ದಾರೆ. ನಮ್ಮ ಮಕ್ಕಳ ಬೆಳವಣಿಗೆ ನೋಡಿ ಸಂತೋಷಪಡುವ ಹಿತೈಷಿಗಳಿದ್ದಾರೆ. ಇನ್ನು ಯಶಸ್ಸಿನ ಬಗ್ಗೆ ಹೇಳಬೇಕೆಂದರೆ: ಇಂಥ ಸೇವಾ ಸಂಸ್ಥೆ ನಡೆಸುವವರು ಯಾರೇ ಆದರೂ, 'ನಮ್ಮ ಸ್ವಂತಕ್ಕೆಂದು ಏನಾದರೂ ಮಾಡಿಕೊಳ್ಳಬೇಕೆಂದು' ಆಲೋಚಿಸತೊಡಗಿದಾಗ ಅದರ ಅವನತಿ ಪ್ರಾರಂಭವಾಗುತ್ತದೆ.''

ಕನ್ನಡಿಗ ದಾನಿಗಳು, ಸರಕಾರ, ಅಧಿಕಾರಿಗಳು, ಸಾರ್ವಜನಿಕರು ವಿದ್ಯಾಕರರ ಸೇವೆಯ ಪ್ರಯೋಜನ ಪಡೆಯುವರೆ?

ಕೆ. ಪಿ. ಸ್ವಾಮಿ

[illegible] ನೇ ಮೈನ್ ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ. ಬೆಂಗಳೂರು-೫೮.

ಸ್ವಿಜರ್‌ಲ್ಯಾಂಡಿನ ನರ್ಸ್ ಬರ್ನಸ್‌ಕೋನಿ, ಹಾಲೆಂಡ್‌ನ ಶಿಕ್ಷಕಿ ನಿಕೋಲ್, ಸ್ವಿಜರ್‌ಲ್ಯಾಂಡಿನ ವಿದ್ಯಾರ್ಥಿ ನುರಿಯ, ದಕ್ಷಿಣ ಕೊರಿಯಾದ ಸಿಯೋಲ್‌ನ ಮಹಿಳಾ ವಕೀಲರಾದ ಶಿಂಜಾ - ಪ್ರತಿ ವರ್ಷ ಭಾರತಕ್ಕೆ ಬಂದು ಸಂಸ್ಥೆಯ ಸೇವೆಯಲ್ಲಿ ತೊಡಗುವವರು. ಇದನ್ನು ಒಂದು ಪವಿತ್ರ ಯಾತ್ರೆ ಎನ್ನುವಂತೆ ತಪ್ಪದೆ ನಡೆಸುತ್ತ ಬಂದಿದ್ದಾರೆ.

''ಬರ್ನಸ್‌ಕೋನಿ ಕಳೆದ ವಾರವಷ್ಟೆ ಅವರ ದೇಶಕ್ಕೆ ಹಿಂದಿರುಗಿದ್ದಾರೆ. ಅವರು ಏಡ್ಸ್ ರೋಗಿಗಳ ಸೇವೆ ಮಾಡುವುದನ್ನು, ಅನಾಥ ಶವಗಳ ಸಂಸ್ಕಾರದಲ್ಲಿ ತೋರಿಸುವ ಶ್ರದ್ಧೆಯನ್ನು ನೀವು ನೋಡಬೇಕಿತ್ತು'' ಎನ್ನುತ್ತಾರೆ ವಿದ್ಯಾಕರ್.

ಅವರ ಅನುಭವದ ಆಧಾರದ ಮೇಲೆ ಹೇಳುವುದಾದರೆ, ಕರುಳ ಕುಡಿಯನ್ನು ಕಸದ ತೊಟ್ಟಿಯಲ್ಲಿ ಬಿಸುಟಿಹೋಗುವ ತಾಯಂದಿರ ಸಂಖ್ಯೆ ಹೆಚ್ಚುತ್ತಲೇ ಇದೆ. ಅದೇ ರೀತಿ ಏಡ್ಸ್ ವ್ಯಾಧಿಯ ಬಗ್ಗೆ ಎಷ್ಟು ತಿಳಿವಳಿಕೆಯ ಕಾರ್ಯಕ್ರಮಗಳು ನಡೆದರೂ ಆ ರೋಗ ಹೆಚ್ಚುತ್ತಿದೆ. ಈ ಬಗ್ಗೆ ಅವರಿಗೆ ವಿಷಾದವಾಗುತ್ತದೆ. ಅಷ್ಟು ಮಾತ್ರವಲ್ಲದೆ, ತಮ್ಮ ಒಂದು ಮಗುವನ್ನು ಅಥವಾ ವೃದ್ಧ ಅಜ್ಜ ಅಥವಾ ತಾಯಿಯನ್ನು ಸಾಕುವ ಹೊಣೆ ಹೊತ್ತುಕೊಳ್ಳುವಂತೆ ಕಿರುಕುಳ ನೀಡುವ ನಾಗರಿಕರೂ ಕಡಿಮೆಯಿಲ್ಲ!

# ರಾಯರ 'ವಾಕ್' ವೈಖರಿ

ಡಾ|| ಜ್ಯೋತ್ಸ್ನಾ ಕಾಮತ್

''ಮ್ಯಾಡಂ, ನೀವೊಂದು ಕಾರು ಕೊಳ್ಳಬೇಕು !'' ಆಫೀಸು ಮುಚ್ಚಿ, ಸಕಾಲಕ್ಕೆ ಎಂದೂ ಬಾರದ ಬಸ್ಸಿಗೆ ಕಾಯುತ್ತ ನಿಂತಾಗ, ಕಾರಿನಲ್ಲಿ ಹೊರಟ ಸಹೋದ್ಯೋಗಿಯೊಬ್ಬ ವಾಹನ ನಿಲ್ಲಿಸಿ, ಕನಿಕರದಿಂದ ನುಡಿದ. ಸ್ವಲ್ಪ ತಡೆದು, ''ಕಾರು ಕೊಳ್ಳುವದಿದ್ದರೆ ನನಗೇ ಹೇಳಿ ! ಫಸ್ಟ್‌ಕ್ಲಾಸ್, ಸೆಕೆಂಡ್‌ಹ್ಯಾಂಡ್ ಫಿಯೆಟ್ ಕಾರನ್ನು ತೀರ ಕಡಿಮೆ ಬೆಲೆಗೆ ನಾಳೆಯೇ ನಿಮ್ಮ ಮನೆಯ ಎದುರು ತಂದು ನಿಲ್ಲಿಸುತ್ತೇನೆ !'' ಎಂದು ಕಾರಿನ ಮಾರಾಟವನ್ನೇ ಕಾಯಕವನ್ನಾಗಿ ಮಾಡಿಕೊಂಡು, ಆಫೀಸ್ ಕೆಲಸವನ್ನು ಉಪವೃತ್ತಿಯಾಗಿಸಿದ ಸಹೋದ್ಯೋಗಿ ನುಡಿದ.

''ಬೇಡಪ್ಪ ಮಹಾರಾಯ್ರೇ ! ಕಾರೂ ಬೇಡ. ವ್ಯಾನೂ ಬೇಡ. ಡ್ರಾಯವ್ಹರ್, ಪೆಟ್ರೋಲ್, ಸರ್ವಿಸು, ಎಲ್ಲವೂ ಸಮಸ್ಯೆಗಳೇ ! ಕಾರು ನನ್ನಂಥವಳಿಗಲ್ಲ. ಸಾಧ್ಯವಿದ್ದರೆ ನಡೆದೇ ಮನೆ ಸೇರುತ್ತಿದ್ದೆ'' ನಾನೆಂದೆ.

''ಯಾವ ನಂಬರ್ ಬಸ್ ನಿಮ್ಮದು ?'' ಆತನ ಜೊತೆಗಿದ್ದಾತ ಕೇಳಿದ. ''ಇಲ್ಲಿಂದ ೯೩ಇ ಮಲ್ಲೇಶ್ವರಂ ೮ನೇ ಕ್ರಾಸ್ ತನಕ. ಅಲ್ಲಿಂದ ಮುಂದೆ ಹನ್ನೊಂದನೆ ನಂಬರ್ ಇದ್ದೇ ಇದೆ !''

''೧೧ನೇ ನಂಬರ್ ಬಸ್ ಆ ರೂಟ್‌ನಲ್ಲಿ ಎಲ್ಲಿದೆ ಮ್ಯಾಡಂ ?'' ದಿಙ್ಮೂಢನಾಗಿ ವಿಚಾರಿಸಿದ ಆ ಜೊತೆಗಾರ.

''ನಮ್ಮೆರಡು ಕಾಲುಗಳಿಗೇ ನಮ್ಮವರು ೧೧ನೇ ನಂಬರ್ ಕಾರ್ ಎನ್ನುತ್ತಾರೆ. ಅವರು ಯಾವಾಗಲೂ ಇದೇ (ನಂಬರಿನ) ಕಾರನ್ನೇ ಬಳಸುವುದು ! ಈಗ ನಾನು ಇಷ್ಟು ಹೊತ್ತು ಬಸ್ಸಿಗೆ ಕಾಯುತ್ತ ನಿಂತದ್ದನ್ನು ಕಂಡರೆ,'ಅಷ್ಟೇ ಹೊತ್ತಿನಲ್ಲಿ ನಡೆಯುತ್ತ ಹೋದರೆ, ಅರ್ಧ, ಮುಕ್ಕಾಲು ದಾರಿ ಮುಗಿಸುವಂತೆ ಆಗುತ್ತಿತ್ತು. ನಿನ್ನ ಆರೋಗ್ಯವೂ ಸುಧಾರಿಸುತ್ತಿತ್ತು! ಅನ್ನುತ್ತಿದ್ದರೋ ಏನೋ !'' ಎಂದೆ. ನೆಲಕ್ಕೆ ಕಾಲನ್ನು ತಗುಲಿಸದ ತರುಣರಿಬ್ಬರೂ ಕಕ್ಕಾವಿಕ್ಕಿಯಾಗಿ, ಅಪ್ಪಣೆ ಪಡೆದು ಕಾರು ಓಡಿಸಿದರು.



ನಡೆಯುವವನ ಭಾಗ್ಯ ನಡೆಯುತ್ತಲೇ ಇರುತ್ತದೆ. ಚರನ್ ವೈ ಮಧು ವಿಂದತಿ ! 'ಚಲಿಸುತ್ತಲೇ ಇರುವವನಿಗೆ ಸವಿಜೇನು ಲಭ್ಯ' ಎಂದು ವೇದ ಹೇಳುತ್ತದೆ. ವೇದ ಓದದಿದ್ದರೂ ಚಲನ ಕ್ರಿಯೆಯಲ್ಲಿ ರಾಯರಿಗೆ ಅಪರಿಮಿತ ವಿಶ್ವಾಸ. ಅವರೊಂದಿಗೆ ಚಲಿಸುತ್ತಿದ್ದರೆ, ಸವಿಜೇನು ಸಿಗದಿದ್ದರೂ, ಜೇನಿನಂತೆ ಸವಿಯಾದ ಮಾತುಗಳೊಂದಿಗೆ ಜೇನು ಕಡಿತದ ಅನುಭವ ಆಗೀಗ ಆಗುವದೂ ಸುಳ್ಳಲ್ಲ! ಮನೆಯಲ್ಲಿದ್ದಾಗ ಸದಾ ಮೌನಿ. ಕೆಲಸದಲ್ಲಿದ್ದಾಗಂತೂ ಬಾಯಿಗೆ ಬೀಗಮುದ್ರೆಯೇ. ಆದರೆ 'ವಾಕ್' ಅಥವಾ ತಿರುಗಾಟಕ್ಕೆ ಹೊರಟಾಗ ಅವರ ವಾಗ್ವೈಖರಿಯ ಸರಿಯಾದ ಪರಿಚಯವಾಗುತ್ತದೆ. ಪ್ರಾಣಿ ಪ್ರಪಂಚದ, ಕೀಟ ಲೋಕದ ವಿಷಯಗಳ ಕುರಿತಾದ ಮಾಹಿತಿ, ಆಫೀಸು. ಗೃಹಕೃತ್ಯದ ಸಮಸ್ಯೆಗಳಿಗೆ ಪರಿಹಾರ, ಸಾಮಯಿಕ ವಿಚಾರಗಳ ವಿಶ್ಲೇಷಣೆಗಳು ಬೇಕಾಗಿದ್ದರೆ, ಎಲ್ಲ ಕೆಲಸಗಳನ್ನು ಬದಿಗಿಟ್ಟು ರಾಯರೊಂದಿಗೆ ತಿರುಗಾಡಲು ಹೋಗಬೇಕು. ಆದರೆ ಈ ವಿರಾಮ, ಇಬ್ಬರಿಗೂ ಸಾಧ್ಯವಾಗದ್ದರಿಂದ ಬೆಳಿಗ್ಗೆ ಬಲುಬೇಗ ಏಳುವ ರೂಢಿ ಪ್ರಾರಂಭಿಸಿದೆವು. ಆಗಾಗ ಸಾಯಂಕಾಲದಲ್ಲೂ ವಾಕ್ ಹೋಗುವದುಂಟು.

ನಸುಕಿನ ಐದು ಗಂಟೆಗೆ ನಾವು ಹೊರಡುವದು ವಾಡಿಕೆ. ಅದಕ್ಕೂ ಸಾಕಷ್ಟು ಮೊದಲೇ ಎದ್ದ ರಾಯರು, ಪ್ರಾತರ್ವಿಧಿ, ಮುಖಮಾರ್ಜನ ಮುಗಿಸಿ, ಕಾಫಿ ಮಾಡಿ ಕುಡಿದು, ನನಗೂ ಕೊಟ್ಟು ಗೆಲುವಾಗಿರುತ್ತಾರೆ. ಬೆಂಗಳೂರು ಮಹಾನಗರ, ಕಣ್ತೆರೆಯಲೋ ಬೇಡವೋ ಎಂದು ಹಿಂಜರಿಯುತ್ತಲೇ ಮೈ ಮುರಿಯುತ್ತಿದ್ದಾಗ, ರಾಯರು ಬಟ್ಟೆಬರೆ ಶೂ ಧರಿಸಿ ರಸ್ತೆಗಿಳಿದೊಡನೆ ಬಿಸಿರಕ್ತದ ತರುಣರಾಗಿ ಮಾರ್ಪಡುತ್ತಾರೆ. ನಲವತ್ತು ವರ್ಷಗಳ ಹಿಂದಿನ ತಮ್ಮ ಎನ್.ಸಿ.ಸಿ. ದಿನಗಳು ನೆನಪಾಗುತ್ತಿರಬೇಕು. ಮಾರ್ಚಿಂಗ್ ಶುರುವಾಗುತ್ತದೆ. ಕಾಲು ನೆಲದಿಂದ ಅಷ್ಟೇ ಎತ್ತರಕ್ಕೆ ಎತ್ತುತ್ತಿರಬೇಕು. ಹಿಮ್ಮಡಿ ನೆಲಕ್ಕೆ ಹತ್ತಬಾರದು, ಪಾದವನ್ನು ಪೂರ್ತಿ ಒತ್ತಬಾರದು, ವೇಗ ಹೆಚ್ಚು ಕಡಿಮೆ ಆಗಬಾರದು, ಎಂದೆಲ್ಲ ಶಿಸ್ತಿನಿಂದ ನಡೆಯುವ ಕ್ರಮವನ್ನು ನನಗೆ ಹೇಳಿಕೊಡುತ್ತಾರೆ. ಹಾಗೆ ಮುಂದುವರಿದಾಗ ರಸ್ತೆಯ ಬದಿಯ ಮರದಲ್ಲಿ ಬಾಗಿನಂತ ಟೊಂಗೆಯಲ್ಲಿ ಟಿಂವ್ ಟಿಂವ್ ಪಕ್ಷಿಯಾಗಲಿ, ಗುಟ್ರಗುಮ್ಮ (ಬಾರ್ಬೆಟ್) ಆಗಲಿ ಗೋಚರಿಸಿತೇ, ಇವರ ನಡಿಗೆಗೆ ಬ್ರೇಕ್ ಬಿದ್ದಂತೆಯೇ ! ಅವಕ್ಕೆ ತೊಂದರೆಯಾಗದಷ್ಟು ದೂರದಲ್ಲಿ ನಿಂತು. ಕಣ್ತುಂಬ ಅವುಗಳ ಚಲನವಲನಗಳನ್ನು ಗಮನಿಸುತ್ತಾರೆ. ಅವು ಹಾರಿಹೋದ ಬಳಿಕವೇ ವಾಕಿಂಗ್ ಮುಂದುವರಿಯುತ್ತದೆ.

ರಾಯರ ವಿರಾಮದ ವಾಕ್ ವೇಳೆಯೆಲ್ಲ ಕಾಗೆ. ಕೋಗಿಲೆ. ಹದ್ದುಗಳಿಗೆಲ್ಲ ಮೀಸಲಾಗಿರುತ್ತದೆಯಾದ್ದರಿಂದ ಅವುಗಳೊಂದಿಗೆ ನಾನು ಪೈಪೋಟಿ ಮಾಡಿ ಅವರ ಗಮನ ಸೆಳೆಯಬೇಕಾಗುತ್ತದೆ ! ರಸ್ತೆಯಲ್ಲಿ ಸಾಗುತ್ತ ನಾಯಿ. ಕತ್ತೆ, ಬೆಕ್ಕು, ಹೆಗ್ಗಣ. ಕಣ್ಣುಕಪ್ಪಡಿ. ಹುಳು-ಹುಪ್ಪಡಿಗಳೆಲ್ಲ ಅವರ ಲಕ್ಷ್ಯ ಎಳೆಯದಿರುವದಿಲ್ಲ.

'ಇಮೆಲ್ಡಾ ಮಾರ್ಕೋಸ್ ಅಷ್ಟೊಂದು ಅಪಾರ ಹಣ ಸಂಗ್ರಹಿಸಿ[illegible] ಸಹಸ್ರ ಶೂಗಳೋ ! ಅವುಗಳ ಸದುಪಯೋಗ [illegible] ವರ್ತಮಾನ ಪತ್ರದಲ್ಲಿ ನನಗೆ ಆಸಕ್ತಿ ಎನಿಸಿದ ವಿಷಯಕ್ಕೆ ಅವರ ಗಮನ [illegible]

''ಅಕೋ ! ಅಲ್ಲಿ ನೋಡು. ಆ ಗಿಣಿ ಪ್ರಿಯತಮೆಗೆ [illegible] ಎಂದು ಮೈಮರೆತು ನೋಡುತ್ತ [illegible]

ಬೇವಿನಮರದ ತುಂಬ ಹಣ್ಣು ಬಿಟ್ಟಿದೆ. ಗಂಡು ಹಕ್ಕಿ ಒಳ್ಳೆ ಹಣ್ಣು ಹೆಕ್ಕಿ ಹೆಕ್ಕಿ ಪಕ್ಕದಲ್ಲಿದ್ದ ಪ್ರಿಯೆಯ ಕೊಕ್ಕಿನಲ್ಲಿ ಇಡುತ್ತದೆ. ತಕ್ಷಣ ಅದು ತ್ಯಜಿಸಿಬಿಡುತ್ತದೆ. ವಿಚಲಿತವಾಗದೇ ಗಂಡುಹಕ್ಕಿ ತನ್ನ ಕಾಯಕವನ್ನು ಮುಂದುವರಿಸುತ್ತದೆ. ಹೆಣ್ಣು ಪುನಃ ಬಿಸಾಕುತ್ತದೆ. ಮಾನವನ ಸಂಗ್ರಹ, ಹಕ್ಕಿಯ ಅಸಂಗ್ರಹದ ನೋಟಗಳ ಎರಡು ಧ್ರುವಗಳ ನಡುವೆ ನಮ್ಮ ನಡೆದಾಟ ಸಾಗಿರುತ್ತದೆ.

ಕಾದಂಬರಿಗಳನ್ನು ಓದದ ರಾಯರಿಗೆ ತ. ರಾ. ಸು. ಅವರ ೪x೪ = ೦ ಶೀರ್ಷಕವುಳ್ಳ. ಸತ್ಯಕಾಮ ಜಾಬಾಲಿಯ ಕತೆಯನ್ನು ಆಧರಿಸಿದ ಕಾದಂಬರಿಯ ಸೊಗಸನ್ನು ಬಣ್ಣಿಸುತ್ತ ಹೊರಟಿದ್ದೇನೆ. ಕೇಂದ್ರ ವಿದ್ಯಾಸಂಸ್ಥೆಯ ಪಕ್ಕದಲ್ಲಿ ನಿಧಾನವಾಗಿ ನಡೆಯುತ್ತ ಕಿವಿಯನ್ನು ನನ್ನ ಮಾತಿಗೆ ತೆರೆದಿಟ್ಟು (ನಾನು ಹಾಗೆ ಭಾವಿಸುತ್ತೇನೆ !) ಪಕ್ಕದ ಬೇಲಿಯತ್ತ ನಿಡುಗಣ್ಣು ತೆಗೆದಿಟ್ಟು ಸಾಗಿದ್ದಾರೆ ರಾಯರು.

''ನೋಡು ! ನೋಡು, ಕಣ್ತೆರೆದು ನೋಡು !'' ಪಿಸು ಧ್ವನಿಯಲ್ಲಿ ನುಡಿದು, ಬಟ್ಟು ಮಾಡಿ ತೋರಿಸುತ್ತಾರೆ. ಬೇಲಿಯ ಲಾಂಟಾನದ ಹಸಿರು ಎಲೆಗಳ ಮರೆಯಲ್ಲಿ ದೊಡ್ಡ ಹಸಿರು ಹುಳವೊಂದು ಮೊಟ್ಟೆಯಿಡುತ್ತಲಿದೆ. ಒಂದು, ಎರಡು, ಮೂರು.... ಅದರ ಪ್ರಸವ ಸಮಾರಂಭಕ್ಕೆ ನಿಸರ್ಗವೇ ಸಾಕ್ಷಿ. ಕೀಟ ಜ್ಞಾನದ ಪ್ರಾಥಮಿಕ ಪಾಠ ನನಗೆ ಪ್ರಾರಂಭವಾಯಿತು. ಆ ಕೀಟ ಮೊಟ್ಟೆಯೊಡೆದು ಬಂದು ಬೆಳೆದ ಪರಿ, ಅದರ ಹರೆಯ, ಪ್ರಣಯ, ಪ್ರಸವ, ಮರಿಗಳ ಬೆಳವಣಿಗೆಯ ಸರಪಣಿಯೇ ಹೊರಬೀಳುತ್ತದೆ.

ಬ್ರಹ್ಮಾಂಡದಿಂದ ಕೀಟಾಂಡದ ಕತೆಗೆ ಇಳಿಯಬೇಕೆ ? ಮಂತ್ರದ್ರಷ್ಟಾರನನ್ನು ಮರೆತು ಕೀಟ ಸಂಸಾರವನ್ನು ಅರಿಯಲು ಯತ್ನಿಸುತ್ತೇನೆ. 'ಸರ್ವಂ ಖಲ್ವಿದಂ ಬ್ರಹ್ಮ' ತಾನೇ ? ಕೀಟವೂ ಬ್ರಹ್ಮವೇ ! ಕೀಟ ಬ್ರಹ್ಮನ ಸೃಷ್ಟಿಯ ಬಗ್ಗೆ ಸೋಜಿಗ ನಟಿಸುತ್ತಾ, ಬ್ರಹ್ಮಾಂಡ ಸೃಷ್ಟಿಯ ಬೆರಗನ್ನು ಅರಗಿಸಲು ಯತ್ನಿಸುತ್ತೇನೆ.

ಗುಟುರ್ ಗುಕ್ ! ಗುಟುರ್ ಗುಕ್ ! ಕುಟುರ್ ! ಕುಟುರ್.... ದೂರದಲ್ಲಿ ಹಕ್ಕಿಯೊಂದು ತಾನ- ತಾಳಗಳನ್ನು ಮೇಳೈಸಿ ಹಾಡುತ್ತಿದೆ.

''ಇದು ಯಾವ ಪಕ್ಷಿಯ ಧ್ವನಿ ಹೇಳು ?'' ರಾಯರು ಕೇಳುತ್ತಾರೆ. ''ಕುಟುರ್, ಕುಟುರ್ ಎನ್ನುತ್ತಿರುವದು ಮರಕುಟಿಗನೇ ಇರಬೇಕು !'' ಯೋಚಿಸದೇ, ಆ ಕೂಡಲೇ ಜವಾಬು ಕೊಡುತ್ತೇನೆ.

''ಥೂ ! ನಿನ್ನ ಅಜ್ಞಾನವೇ ! ಪ್ರಾಣಿಶಾಸ್ತ್ರಜ್ಞನ ಪತ್ನಿಯಾದದ್ದು ಸಾರ್ಥಕವಾಯ್ತು !'' ಹಂಗಿಸುತ್ತಾರೆ. ಅದು ಪಾರಿವಾಳ ! ಎಂದು ತಿದ್ದುತ್ತಾರೆ. ನಂತರ ಪ್ರಣಯ ಚೇಷ್ಟೆಗೆ ಹೆಸರಾದ ಪಾರಿವಾಳ ಜೋಡಿಯ ಹತ್ತಾರು ಶೃಂಗಾರ ಚೇಷ್ಟೆಗಳನ್ನು ವಿವರಿಸುತ್ತಾರೆ. ಅಂಥ ಪಾರಿವಾಳ ಪ್ರಣಯದ ಸನ್ನಿವೇಶ ಎದುರಾದರೆ ತಪ್ಪದೇ ತೋರಿಸುತ್ತಾರೆ. ಮಕ್ಕಳಲ್ಲಿ ಮಕ್ಕಳಾಗಿ ಜೋಡಿಯ ಪ್ರಣಯಲೀಲೆ ನೋಡಿ ನಲಿಯುತ್ತಾರೆ.

ಒಂದು ತಿರುವಿನಲ್ಲಿ, ಹಳೆಮನೆಯೊಂದಕ್ಕೆ ಹೊಂದಿದ್ದ ಹೆಮ್ಮರದಲ್ಲಿ ಹಲಪ್ರಕಾರದ ಹಕ್ಕಿಗಳ ವಾಸಸ್ಥಳವಿದೆ. ಬೆಳಗಿನ ಚಿಲಿ ಪಿಲಿ ನಿನಾದ ಆಹ್ಲಾದಕರವಾಗಿದೆ. ರಾಯರಿಗೆ ಈ ತಾಣ ಪ್ರಿಯವಾದದ್ದು. ''ಈ ಕೂಗು ಕೇಳು ! ಯಾವ ಪಕ್ಷಿಯದೆಂದು ಹೇಳು'' ರಾಯರೆನ್ನುತ್ತಾರೆ.

ಗುಕ್ ! ಗುಕ್ ! ಕುವ್, ಕುವ್ ! ಗುರುತಿಸಲಾಗದ ಹಕ್ಕಿಯ ದನಿ. ಸೋಲೊಪ್ಪಿಕೊಳ್ಳುತ್ತೇನೆ.

''ಕೋಗಿಲೆ !'' ರಾಯರು ಗೆಲುವಿನಿಂದ ನುಡಿಯುತ್ತಾರೆ. ''ಕೋಗಿಲೆಯೇ ? ಅದು ಕೂಹೂ, ಕುಹು ! ಎನ್ನುತ್ತದೆ. ವಸಂತಋತುವಿನಲ್ಲಿ ಅಷ್ಟೇ ಹಾಡುತ್ತದೆ ಅಲ್ಲವೇ ?'' ನನ್ನ ಕನ್ನಡ ಕವಿ ಸಮಯದ ಜ್ಞಾನ ಪ್ರಕಟಿಸುತ್ತೇನೆ.

''ಅದಕ್ಕೇ ಹೇಳುವದು, ನಿಮ್ಮ ಯಾವತ್ತೂ ಓದು, ಕೆಲಸಕ್ಕೆ ಬಾರದ ಕವಿಕಲ್ಪನೆಗೇ ಮೀಸಲಾಗಿದೆ ಎಂದು ! ಕಣ್ಣು, ಕಿವಿ ತೆರೆದಿಟ್ಟು ನಿಸರ್ಗದಿಂದ ಪಡೆಯಬಹುದಾದ ಶಿಕ್ಷಣ ನಿನ್ನಂಥ ಪುಸ್ತಕ ಕೀಟಕ್ಕೆ ಹರದಾರಿ ದೂರ ! ಕೋಗಿಲೆಯ ಕುಯ್ಯಲಿಗೆ ಹಲವು ಹತ್ತು ಆಯಾಮಗಳಿವೆ ಎಂದು ಒಂದೊಂದಾಗಿ ಅದರ ಪ್ರತಿ ಕೂಗಿನ ಹಿಂದಿರುವ ಕತೆಯನ್ನು ಹೇಳುತ್ತಾರೆ.

ನಡೆದಂತೆ ನುಡಿಯುತ್ತ ಸಾಗುವ ರಾಯರ ಹೆಜ್ಜೆಗೆ ಸರಿಯಾಗಿ ನಡೆಯಲು ಯತ್ನಿಸಿ ತೇಕುತ್ತ ಸಾಗುತ್ತೇನೆ.

ನಡೆಯುತ್ತ ರಸ್ತೆ ದಾಟಿ, ಓಣಿಯಲ್ಲಿ ನಿಲ್ಲಿಸಿದ ಕೊಳಾಯಿ ನೀರು ಮಡುಗಟ್ಟಿದ ಜಾಗಕ್ಕೆ ಬರುತ್ತೇವೆ.

ಸ್ನಾನದ ವೈಖರಿ ನೋಡಿದೆಯ ? ಎಂದು ಕೇಳುತ್ತಾರೆ. ''ಎಲ್ಲಿ ? ಯಾರೂ ಇಲ್ಲವಲ್ಲ ?'' ಕಕ್ಕಾವಿಕ್ಕಿಯಾಗಿ ಕೇಳುತ್ತೇನೆ. ಆದರೆ ಮನುಷ್ಯರಲ್ಲ ! ಇವರೆನ್ನುತ್ತಾರೆ.

ಈಗ ಎಚ್ಚತ್ತು ಸರಿಯಾಗಿ ನೋಡುತ್ತೇನೆ. ಕಾಕದಂಪತಿ, ನೀರು ಮಡುಗಟ್ಟಿದೆಡೆ ಸ್ನಾನದಲ್ಲಿ ಮೈಮರೆತಿದೆ. ಗಂಡುಹಕ್ಕಿ ಒಂದು ಚೆನ್ನಾಗಿ ಮುಳುಗು ಹಾಕಿ, ಮೇಲೆ ಬಂದು ರೆಕ್ಕೆ ಝಾಡಿಸುತ್ತದೆ. ತುಂಟತನದಿಂದ ಜೊತೆಗಾತಿಯ ಮೈಮೇಲೆಲ್ಲ ನೀರು ಸಿಂಪಡಿಸುತ್ತದೆ. ಹೆಣ್ಣು ಕಾಗೆ, ಅದನ್ನು ಲೆಕ್ಕಿಸದೇ ಕೊಕ್ಕಿನಿಂದ ಇನಿಯನ ರೆಕ್ಕೆಗಳ ಅಡಿಯ ಕೊಳಕನ್ನು ಕುಕ್ಕಿ ಹೊರತೆಗೆಯುತ್ತದೆ. ಮತ್ತೆ, ಅವೆರಡೂ ನೀರಿಗೆ ಇಳಿಯುತ್ತವೆ. ಮನದಣಿ ಮೀಯುತ್ತವೆ. ಸುತ್ತಲ ಜಗತ್ತನ್ನು ಮರೆತು ಅದನ್ನು ನೋಡುವಲ್ಲಿ ರಾಯರು ಮೈಮರೆಯುತ್ತಾರೆ. ಅಕ್ಕ ಪಕ್ಕದಲ್ಲಿ ಹಾದು ಹೋಗುವವರೆಲ್ಲ ವಿಚಿತ್ರವಾಗಿ ನಮ್ಮನ್ನು ನೋಡುತ್ತಿದ್ದಾರೆ.

'ಬನ್ರಿ ಹೋಗೋಣ !' ಒತ್ತಾಯದಿಂದ ರಾಯರನ್ನು ಅಲ್ಲಿಂದ ಹೊರಡಿಸುತ್ತೇನೆ. ಈಗ ಕಾಕಪುರಾಣ ಬಿಚ್ಚಿಕೊಳ್ಳುತ್ತದೆ. ನಡೆದಂತೆ ನುಡಿಯುತ್ತ ಹೋಗುವ ರಾಯರನ್ನು ನಡೆ-ನುಡಿಗಳಲ್ಲಿ ಸರಿಗಟ್ಟುವುದು ನನಗಂತೂ ಸಾಧ್ಯವಿಲ್ಲ.

ಅಂತೂ, ನನಗೆ ಅವಶ್ಯವಿದ್ದ ವಾಕ್ ಜೊತೆಗೆ ರಾಯರ ವಾಗ್ ವೈಖರಿ ಸೇರಿಕೊಂಡು ಓಡಾಟದೊಂದಿಗೆ ಜೀವನ ಪಾಠ ಲಭಿಸಿದೆ.

**ಡಾ|| ಜ್ಯೋತ್ಸ್ನಾ ಕಾಮತ್**
೧೧೦, ಶಶಿಕಿರಣ್, ೧೮ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫

## ಯಾವುದು ಜಾತ್ಯಾತೀತ ಧೋರಣೆ!

ನೈಜ ಜಾತ್ಯಾತೀತತೆ ಯಾವುದೇ ಕೋಮಿನ ತುಷ್ಟೀಕರಣದಲ್ಲಿ ಪರ್ಯವಸಾನವಾಗಬಾರದು. ಆಧ್ಯಾತ್ಮ ಅಥವಾ ದೈವಭಕ್ತಿಯ ಸಾರಾಸಗಟು ತಿರಸ್ಕಾರವು ನೈಜ ಜಾತ್ಯಾತೀತತೆ ಎಂದೆನಿಸಿಕೊಳ್ಳಲಾರದು. ಎಲ್ಲಾ ಕೋಮುಗಳಲ್ಲಿಯೂ ಮತಾಂಧರಿದ್ದಾರೆ ಹಾಗೂ ಕೋಮುವಾದವಿದೆಯೆಂಬುದನ್ನರಿತು ಅಂಥವರಿಗೆ ಬೆಂಬಲ ಕೊಡದೆ ಇರುವುದು ನೈಜ ಜಾತ್ಯಾತೀತತೆ ಆಗಿದೆ. ಬಹುಸಂಖ್ಯಾತರ ಕೋಮುವಾದ ಮತ್ತು ಅಲ್ಪ ಸಂಖ್ಯಾತರ ಕೋಮುವಾದ ಪರಸ್ಪರ ಪೂರಕವಾಗಿವೆ. ರಾಜ್ಯಾಡಳಿತವು ಎಲ್ಲಾ ಬಗೆಯ ಕೋಮುವಾದಗಳಿಂದ ದೂರವಿರಬೇಕು. ಮತೀಯ ಶ್ರದ್ಧೆ ಹಾಗೂ ಭಕ್ತಿ ಭಾವನೆಗಳನ್ನು ಖಾಸಗಿ ಬದುಕಿನಲ್ಲಿ ಅಳವಡಿಸಿಕೊಳ್ಳುವುದೇನೋ ವ್ಯಕ್ತಿಗತ ಆಯ್ಕೆ. ಆದರೆ ರಾಜಕೀಯ ಮುಖಂಡನಾಗಿ ಈ ಮತೀಯ ವಿಚಾರಗಳ ಬೆನ್ನುಹಿಡಿದು ರಾಜಕೀಯ ಲಾಭ ಪಡೆಯಲು ಬಯಸುವುದು ಬಹು ದೊಡ್ಡ ಅಪರಾಧ. ಜವಾಹರಲಾಲ್ ನೆಹರುರವರು ಪ್ರಧಾನಿಯಾಗಿದ್ದ ಹದಿನೇಳು ವರ್ಷಗಳ ಅವಧಿಯಲ್ಲಿ ಸಾಧುಸಂತರು, ಬಾಬಾಗಳು, ಮಠಾಧಿಪತಿಗಳು ಹಾಗೂ ದೇವರ ಏಜಂಟರು ಎಂದೆನಿಸುವವರೆಲ್ಲರಿಂದಲೂ ದೂರವಿದ್ದರು. ''ಸತ್ತ ನಂತರ ಲಭಿಸುವ ಪ್ರಪಂಚದಲ್ಲಿ ನನಗೆ ಆಸಕ್ತಿ ಇಲ್ಲ. ಈ ಪ್ರಪಂಚದಲ್ಲಿ ನಾನು ಮಾಡಬೇಕಾಗಿರುವ ಕೆಲಸಗಳೇ ನನ್ನ ಮನಸ್ಸಿನಲ್ಲಿ ತುಂಬಿವೆ. ಇಲ್ಲಿ ನಾನು ನನ್ನ ದಾರಿಯನ್ನು ಸರಿಯಾಗಿ ಕಾಣಬಲ್ಲೆನೆಂಬುದಾದರೆ ನನಗೆ ತೃಪ್ತಿ ದೊರೆಯುವುದೆಂಬುದು ಖಂಡಿತ'' ಎಂದಿದ್ದರು ನೆಹರು. ಇದುವೇ ನೈಜ ಜಾತ್ಯಾತೀತ ಧೋರಣೆ. ಇದೇ ಎಲ್ಲಾ ರಾಜಕಾರಣಿಗಳಲ್ಲಿರಬೇಕಾದ ನೈತಿಕ ಪ್ರಜ್ಞೆಯ ಬೆನ್ನೆಲುಬು.

– ವಿ. ವಿ. ಉಪಾಧ್ಯಾಯ

# ಬದುಕಲು ದಾರಿ ನೂರಾರು

ಜನರು ಬೆಂಗಳೂರಿಗೆ ವಲಸೆ ಬರುವುದಕ್ಕೆ ನಿರುದ್ಯೋಗ, ಬಡತನ ಇತ್ಯಾದಿ ಕಾರಣಗಳಿರುತ್ತವೆ. ಜೊತೆಗೆ ನಗರದಲ್ಲಾದರೆ ಹೇಗಾದರೂ ಜೀವಿಸಬಹುದು ಎಂಬ ನಂಬಿಕೆ. ವಲಸೆಗಾರರಿಂದ ನಗರದ ಜನ ಒತ್ತಡ ಹೆಚ್ಚುವುದಲ್ಲದೆ, ಕೊಂಪೆಗಳ ಹುಟ್ಟಿಗೂ ಕಾರಣವಾಗುತ್ತದೆ. ಆದರೆ, ಹೀಗೆ ಬಂದವರಲ್ಲಿ ಅನೇಕರು ಬದುಕಿನ ನೂರಾರು ದಾರಿಗಳಲ್ಲೊಂದನ್ನು ಹುಡುಕಿಕೊಂಡು, ಇತರರಿಗೆ ಭಾರವಾಗದ ರೀತಿಯಲ್ಲಿ ಜೀವನ ಸಾಗಿಸುತ್ತಾರೆ.

ಮೇಲಿನ ಮಾತಿಗೆ ಉದಾಹರಣೆಯೆಂದರೆ, ಪೀಣ್ಯ ಕೈಗಾರಿಕಾ ಪ್ರದೇಶದ ರಸ್ತೆಯಂಚುಗಳಲ್ಲಿ ಮುಂಜಾನೆಯಿಂದಲೇ ಕಾಯಕ ಪ್ರಾರಂಭಿಸುವ 'ಸಂಚಾರಿ ದರ್ಶಿನಿ'ಗಳು. ಇಲ್ಲಿನ ನೂರಾರು ಕಾರ್ಮಿಕರು, ನೌಕರರು, ಗಾರ್ಮೆಂಟ್ಸ್ ಮಹಿಳೆಯರು ಬೆಳಗ್ಗೆ ಮತ್ತು ಮಧ್ಯಾಹ್ನ ಸಿದ್ಧ ಆಹಾರ ಒದಗಿಸುವ ಈ ಬಡದರ್ಶಿನಿಗಳನ್ನು ಅವಲಂಬಿಸಿರುತ್ತಾರೆ.

ರಾಜಗೋಪಾಲ ನಗರದ ಕಡೆ ತಿರುಗುವ ರಸ್ತೆಯಂಚಿನಲ್ಲಿರುವ ದರ್ಶಿನಿಯ ಮುಂದೆ ಜನರ ಗುಂಪು. ನಾಲ್ಕು ಚಕ್ರದ ಗಾಡಿ. ಬಿಸಿಲು-ಮಳೆಯ ರಕ್ಷಣೆಗಾಗಿ ಟಾರ್ಪಾಲಿನ್ ಚಾವಣಿ. ಮನೆಯಲ್ಲಿ ತಯಾರಿಸಿ ತಂದಿರುವ ಇಡ್ಲಿ, ಚಿತ್ರಾನ್ನ, ಪಲಾವ್, ಚಟ್ನಿ, ಸಾಂಬಾರ್ ತುಂಬಿಸಿದ ಡಬ್ಬಿಗಳು. ದರ್ಶಿನಿಯ ಒಡೆಯ ಕೃಷ್ಣೇಗೌಡರಿಗೆ ತಲೆ ತುರಿಸಿಕೊಳ್ಳಲೂ ಬಿಡುವಿಲ್ಲ. ಎಲ್ಲರೂ ಅವಸರದಲ್ಲಿರುತ್ತಾರೆ. ಗಿರಾಕಿಗಳು ಕೇಳಿದ ತಿಂಡಿ ಒದಗಿಸಬೇಕು. ಪಾರ್ಸಲ್ ಕಟ್ಟಿಕೊಡಬೇಕು. ಹಣ ಗಲ್ಲಾಪೆಟ್ಟಿಗೆಗೆ ಸೇರಿಸಬೇಕು. ಚಿಲ್ಲರೆ ಎಣಿಸಿಕೊಡಬೇಕು. ಈ ಮಧ್ಯೆ 'ಅಣ್ಣಾ ನಂದು ಎಂಟು ರೂಪಾಯಿ ಬರ್ಕಳಿ' ಎಂದು ಸೈಕಲ್ ಏರುವವರೂ ಇರುತ್ತಾರೆ. ಕೂಡಲೇ ಲೆಕ್ಕದ ಪುಸ್ತಕ ಬಿಚ್ಚಿ ಗುರುತು ಹಾಕಿಕೊಳ್ಳಬೇಕು. ಪ್ರತಿದಿನ ಸುಮಾರು ನೂರುಮಂದಿ ಈ ದರ್ಶಿನಿಯ ಸೇವೆ ಪಡೆಯುತ್ತಾರೆ. ಹೆಚ್ಚಿನವರು ಸಮೀಪದ ಫ್ಯಾಕ್ಟರಿಗಳಲ್ಲಿ ಕೆಲಸಮಾಡುವ ಖಾಯಂ ಗಿರಾಕಿಗಳು. ಸಾಲಕೊಡಲು ಅನುಮಾನಪಡಬೇಕಿಲ್ಲ. ಕೃಷ್ಣೇಗೌಡರ ಪತ್ನಿ ಲಲಿತಮ್ಮ ದೋಸೆ ಹೊಯ್ದು ಹಾಟ್‌ಕೇಸಿನೊಳಕ್ಕೆ ತುಂಬಿಸುತ್ತಾರೆ. ಮಕ್ಕಳಾದ ಶ್ರೀಕಾಂತ ಮತ್ತು ಕುಮಾರಸ್ವಾಮಿ ಚುರುಕಿನಿಂದ ಓಡಿಯಾಡುತ್ತ ಲೋಟ ತಟ್ಟೆ ತೊಳೆದುಕೊಡುತ್ತಾರೆ. ಇವರನ್ನು ಬಾಲಕಾರ್ಮಿಕರು ಎನ್ನುವಂತಿಲ್ಲ. ಸ್ವಲ್ಪ ಹೊತ್ತು ತಂದೆ ತಾಯಿಗಳ ಕೆಲಸದಲ್ಲಿ ಸಹಾಯ ಮಾಡುತ್ತಿದ್ದು, ಶಾಲೆಗೆ ಹೋಗುವವರು, ಫಸ್ಟ್‌ಕ್ಲಾಸ್ ಮಾರ್ಕ್ಸ್



ಕೃಷ್ಣೇಗೌಡರ ಸಂಚಾರಿ ದರ್ಶಿನಿ

ತೆಗೆಯುವವರು. ಇವರ ಅಕ್ಕ ಮಂಜುಶ್ರೀ ಸಹ ಓದಿನಲ್ಲಿ ಮುಂದಿರುವ ವಿದ್ಯಾರ್ಥಿನಿ ! ಈ ಬಗ್ಗೆ ತಂದೆ ತಾಯಿಗಳಿಗೆ ಅಪಾರ ಹೆಮ್ಮೆ.

ಮೂವತ್ತೊಂಬತ್ತರ ಪ್ರಾಯದ ಕೃಷ್ಣೇಗೌಡರು ಹಾಸನ ಜಿಲ್ಲೆಯ ಶಾಂತಿಗ್ರಾಮದವರು. ಹೈಸ್ಕೂಲು ಶಿಕ್ಷಣ ಮುಗಿಸಿದ್ದಾರೆ. ಹಾಸನದಲ್ಲಿ ಎಲೆಕ್ಟ್ರಿಷಿಯನ್ ತರಬೇತು ಪಡೆದಿದ್ದಾರೆ. ಊರಿನಲ್ಲಿ ಐದು ಎಕರೆ ಜಮೀನಿದೆ. ವಯರಿಂಗ್ ಕಂತ್ರಾಟು ಮಾಡಿದ ಅನುಭವವೂ ಇದೆ. ಅವರ ಬಳಗದವರಲ್ಲಿ ಕೆಲವರು ಸ್ಥಳೀಯ ರಾಜಕೀಯ ನಾಯಕರು.

ಕೃಷ್ಣೇಗೌಡರು ಮಾತಿಗೆ ಸಿಕ್ಕಬೇಕಾದರೆ ಗಿರಾಕಿಗಳ ಗುಂಪು ಕರಗಬೇಕು. ಬೆಂಗಳೂರು ಮಾರ್ಗ ಹಿಡಿಯಬೇಕಾಗಿ ಬಂದ ಸಂದರ್ಭ ವಿವರಿಸುತ್ತಾರೆ. ''ಈ ವಯಸ್ಸಿಗೇ ತುಂಬಾ ಕಷ್ಟ ಅನುಭವಿಸಿದ್ದೀನಿ ಸಾರ್. ನಮ್ಮ ಬಳಗದವರ ಕಿರುಕುಳ ಸಹಿಸುಕ್ಕಾಗಲಿಲ್ಲ.'' ಪತ್ನಿಯ ಕಡೆಗೆ ಕಿರುನೋಟ ಬೀರುತ್ತಾ ''ನಮ್ದು ಲೌ ಮ್ಯಾರೇಜು ಸಾರ್. ಅದನ್ನೇ ಒಂದು ನೆಪ ಮಾಡಿಕಂಡ್ರು. ನಾನು ಮಾಡಿದ ಕೆಲಸಕ್ಕೆ ಸರಕಾರ[illegible] ನನಗೆ ಬರಬೇಕಾದ ಹಣ ದಕ್ಕದಂತೆ ರಾಜಕೀಯ ಮಾಡಿದ್ರು. ಸುಮಾರು ಒಂದು ಲಕ್ಷ ರೂಪಾಯಿ ! ಸಾಲಾನೂ ಆಯ್ತು. ಜಮೀನ್ನಿಂದ್ಲೂ ಉತ್ಪಾದ್ನೆ ಇಲ್ಲ. ಊರ್ನಲ್ಲೇ ಇದ್ದು ಈ ಬಳಗದವರ ಕಿರುಕುಳ ಅನುಭವಿಸೋದಕ್ಕಿಂತ ಎಲ್ಲಾರ ಬದಿಕಳನ ಅಂತ ಮಕ್ಕಳ ಸಹಿತ ಬೆಂಗ್ಳೂರಿಗೆ ಬರಬೇಕಾಯ್ತು.''

ಎಲೆಕ್ಟ್ರಿಷಿಯನ್ ತರಬೇತು ಪಡೆದಿದ್ದು, ಕೆಲಸ ಮಾಡಿದ ಅನುಭವವೂ ಇದ್ದುದರಿಂದ ಬೆಂಗಳೂರಿಗೆ ಬಂದ ಕೆಲವೇ ದಿನಗಳಲ್ಲಿ ಕೆ.ಇ.ಬಿ.ಯಲ್ಲಿ ತಾತ್ಕಾಲಿಕ ಕೆಲಸ ಸಿಕ್ಕಿತು. ಬಳಗದವರು ನೀಡಿದ್ದ ಕಿರುಕುಳದ ನೋವನ್ನು ಸ್ವಲ್ಪಮಟ್ಟಿಗೆ ಮರೆಯಲು



ದುಡಿಮೆಯನಂತರ ಬಿಡುವು

ಸಾಧ್ಯವಾಯಿತು. ಆದರೆ, ಬರುತ್ತಿದ್ದ ಸಂಬಳ ಮನೆ ಬಾಡಿಗೆ, ಮೂರು ಮಕ್ಕಳ ಶಾಲೆ ಮತ್ತು ಮನೆಯ ಖರ್ಚು ನಿಭಾಯಿಸಲು ಸಾಲುತ್ತಿರಲಿಲ್ಲ. ಹೀಗೇ ಪರದಾಡುತ್ತ ಎರಡು ವರ್ಷ ಕಳೆದದ್ದಾಯಿತು. ಆಗ ಹೊಳೆದದ್ದು ಈ ದರ್ಶಿನಿಯ ವಿಚಾರ. ಪ್ರಾರಂಭದಲ್ಲಿ ಅವರ ಭಾವಮೈದುನ ಎರಡೂವರೆ ಸಾವಿರ ರೂಪಾಯಿ ನೀಡಿ ಸಹಾಯ ಮಾಡಿದರು.

ಈಗ ದರ್ಶನಿ ತಕ್ಕಮಟ್ಟಿಗೆ ಚೆನ್ನಾಗಿ ನಡೆಯುತ್ತಿದೆ. ಸ್ವಂತಕ್ಕೆ ಒಂದು ಸಣ್ಣ ಮನೆ ಮಾಡಿಕೊಳ್ಳಲು, ಮಕ್ಕಳ ಓದಿಗೆ ತೊಂದರೆಯಾಗದಂತೆ ನೋಡಿಕೊಳ್ಳಲು ಸಾಧ್ಯವಾಗಿದೆ. ಅಡುಗೆಗೆ ಒಳ್ಳೆಯ ಅಕ್ಕಿ, ತರಕಾರಿ, ತೆಂಗಿನ ಕಾಯಿ ಉಪಯೋಗಿಸುತ್ತಾರೆ. ರುಚಿಯಾಗಿ ತಿಂಡಿ ತಯಾರಿಸುತ್ತಾರೆ. ಗಿರಾಕಿಗಳೊಂದಿಗೆ ನಗುನಗುತ್ತ ಸ್ನೇಹದಿಂದ ವರ್ತಿಸುತ್ತಾರೆ. ಹಾಗಾಗಿ, ಖಾಯಂ ಗಿರಾಕಿಗಳ ಸಂಖ್ಯೆಯೂ ಹೆಚ್ಚಾಗಿದೆ. ಹೆಚ್ಚು ಕಿರುಕುಳ ಇಲ್ಲ.

ಮಕ್ಕಳು ಶಾಲೆಗೆ ಹೊರಟಾಯಿತು. ಗಿರಾಕಿಗಳ ಸಂಖ್ಯೆಯೂ ಇಳಿಯಿತು. ಡಬ್ಬಿಗಳೆಲ್ಲ ಖಾಲಿ. ಮನೆಯ ಕಡೆ ಗಾಡಿ ತಿರುಗಿಸಬೇಕು. ಆದರೆ, ಲಲಿತಮ್ಮನ ಕೆಲಸ ಮುಗಿದಿಲ್ಲ. ಪಾತ್ರೆಗಳನ್ನು ಅಲ್ಲೇ ತಿಕ್ಕಿ ತೊಳೆಯುತ್ತಿದ್ದಾರೆ. ನಾಳಿನ ಸಿದ್ಧತೆಗೆ ಅಲ್ಲಿಂದಲೇ ಪ್ರಾರಂಭ.

ಅವರ ದಿನಚರಿಯ ಬಗ್ಗೆ ಕೇಳಿದಾಗ, ಕೃಷ್ಣೇಗೌಡರು ತಮ್ಮ ಪತ್ನಿಯ ಕಡೆಗೆ ಮೆಚ್ಚಿನ ನೋಟ ಬೀರುತ್ತ ಹೇಳುತ್ತಾರೆ. ''ಮನೆಯವರ ಸಹಕಾರ ಇಲ್ಲದಿದ್ದರೆ ಇದೆಲ್ಲ ಆಗ್ತಾನೆ ಇರ್‍ಲಿಲ್ಲ. ಎರಡೂ ಕೈ ಸೇರಿದ್ರೆ ತಾನೆ ಸಾರ್ ಚಪ್ಪಾಳೆ !''

ಎಸ್ಸೆಲ್ಸಿವರೆಗೆ ಓದಿರುವ ಲಲಿತಮ್ಮ (ಅಮ್ಮ ಒಂದು ಸಬ್ಜೆಕ್ಟ್‌ನಲ್ಲಿ 'ಡುಮ್ಕಿ' ಎಂದು ಮಕ್ಕಳು ತಮಾಷೆ ಮಾಡಿ ನಗುತ್ತಾರೆ) ಮನೆಗೆ ಹೋದನಂತರ, ಬಿಡುವು ದೊರಕುವುದು ಸ್ವಲ್ಪ ಹೊತ್ತು ಮಾತ್ರ. ಇಡ್ಲಿ, ದೋಸೆಗಾಗಿ ರುಬ್ಬುವ ಕೆಲಸ ಪ್ರಾರಂಭವಾಗುತ್ತದೆ. ನಾಳೆಗೆ ಬೇಕಾದ ಪ್ರತಿಯೊಂದು ಸಾಮಗ್ರಿಯನ್ನು ತಯಾರಾಗಿಟ್ಟುಕೊಳ್ಳುವುದು, ಮನೆಯವರಿಗಾಗಿ ರಾತ್ರಿ ಅಡುಗೆ ಕೆಲಸ. ಸ್ವಲ್ಪಹೊತ್ತಿನ ನಿದ್ದೆಯ ನಂತರ ಮುಂಜಾನೆ ನಾಲ್ಕು ಗಂಟೆಗೆ ಇಡ್ಲಿ ಬೇಯಿಸುವ, ಚಟ್ನಿ ಅರೆಯುವ, ಸಾಂಬಾರು ತಯಾರಿಸುವ ಕೆಲಸ. ಐದು ಗಂಟೆಗೆ ಗಂಡ ಮಕ್ಕಳನ್ನು ಎಚ್ಚರಿಸಿ, ಕಳಿಸಿದ ನಂತರ ಅಡಿಗೆ [illegible] ಮತ್ತೆ ಏಳು ಗಂಟೆಗೆಲ್ಲ ದರ್ಶಿನಿ ನಿಲ್ಲುವ ಜಾಗದಲ್ಲಿ ದೋಸೆ [illegible] ಕೆಲಸ. ಭಾನುವಾರ ರಜಾದಿನ.

ಕೃಷ್ಣೇಗೌಡರ ಸಂಚಾರಿ ದರ್ಶಿನಿಯ ಯಶಸ್ಸಿನ ಗುಟ್ಟು ಅವರ ಸಂಸಾರದ ಎಲ್ಲ ಸದಸ್ಯರ ದಣಿವರಿಯದ ದುಡಿಮೆಯಲ್ಲಿದೆ.

- [illegible]

# ಕೈಬೀಸಿ ಕರೆಯುವ ಖಗೋಳ ಕೌತುಕಗಳು

ಡಾ॥ ಬಿ. ಎಸ್. ಶೈಲಜಾ

ಧೂಳನ್ನೆಲ್ಲಾ ಧರೆಗಿಳಿಸಿದ ಮಳೆ ನಿಮಗಾಗಿ ಶುಭ್ರವಾದ ನೀಲಿ ಆಕಾಶವನ್ನು ಅಣಿಗೊಳಿಸಿದೆ. ಈ ನಿರಭ್ರ ಆಕಾಶದ ನೆತ್ತಿಯ ಮೇಲೆ ಕಾಣುವುದು ಒಂದು ಚೌಕ. ಸ್ಕೈರ್ ಆಫ್ ಪೆಗಸಸ್ ಎಂದಿದರ ಹೆಸರು. ಗ್ರೀಕ್ ಕಥೆಯಲ್ಲಿ ಇದೊಂದು ಕುದುರೆ - ಹಾರುವ ಕುದುರೆ. ರೆಕ್ಕೆ ಕಟ್ಟಿಕೊಂಡು ಆಕಾಶಕ್ಕೆ ಹಾರಿದರೇನಂತೆ - ನೀರಿನ ಆಳಕ್ಕೆ ಮುಳುಗಬಲ್ಲುದೇ ? ಹೀಗೆ ಕುದುರೆಯನ್ನು ಹಂಗಿಸುವ ಮೀನುಗಳ ಕಲ್ಪನೆ ಖಗೋಳ ವೀಕ್ಷಕ ಜಾರ್ಜ್ ರೀಡ್ ಅವರದ್ದು. ತಾತ್ಪರ್ಯ ಸರಳ-ಚೌಕದ ಪಕ್ಕದ್ದೇ ಮೀನ ರಾಶಿ.

ಎರಡು ತಿಂಗಳಿಂದ ಸಂಜೆಯ ಆಕಾಶದಲ್ಲಿ ಕಂಗೊಳಿಸುತ್ತಿದ್ದ ವೃಶ್ಚಿಕ ಈಗ ಪಶ್ಚಿಮದಂಚಿಗೆ ಜಾರಿದೆ.






ಅದನ್ನು ಹಾದು ಧನುರಾಶಿಗೆ ಬಂದಿರುವ ಮಂಗಳಗ್ರಹ ಸೂರ್ಯಾಸ್ತವಾದ ಮೇಲೆ ಸ್ವಲ್ಪ ಹೊತ್ತು ಪ್ರಕಾಶಿಸಿ, ದಿಗಂತದಂಚಿನಲ್ಲಿ ಮರೆಯಾಗುತ್ತದೆ. ಅಷ್ಟೇನೂ ಪ್ರಕಾಶವಿಲ್ಲದ ಮಕರ ಕುಂಭ ರಾಶಿಗಳು ಆಕಾಶ [illegible] ಖಾಲಿ ಎಂಬ ಭ್ರಮೆ ಹುಟ್ಟಿಸುತ್ತವೆ. ಉತ್ತರದಲ್ಲಿ ಸಿಗ್ನಸ್, ಅಕ್ವಿಲಾ ಮತ್ತು ಲೈರಾ [illegible].

ಪೂರ್ವದಿಕ್ಕಿನಲ್ಲಿ ಈ ಕೊರತೆಯಿಲ್ಲ. ಪೆಗಸಸ್‌ನಿಂದ ಪೂರ್ವಕ್ಕೆ ನಡೆದ ಹಾಗೆ ಮೀನ, ಮೇಷ, ವೃಷಭಗಳು ಕಾಣುತ್ತವೆ. ಆದರೆ ಈ "[illegible]" ಮತ್ತು "[illegible]" [illegible] ಪ್ರಮುಖವಾಗಿ ಕಾಣುವ ಎರಡು ಕಾಯಗಳು [illegible]. ಅದರ ಪೂರ್ವಕ್ಕೆ ಶನಿ ಗ್ರಹ. ದಿಗಂತದಂಚಿನಲ್ಲಿ ಕಾಣುವ ನಕ್ಷತ್ರ ಸಮೂಹ ಕೃತ್ತಿಕಾ.

[illegible] ಮಾರ್ಗದರ್ಶಿ [illegible] [illegible] ನವೆಂಬರ್ [illegible] [illegible] [illegible] [illegible] [illegible] [illegible] [illegible] ಮಂಗಳಗ್ರಹ ಸಮೀಪ. ಕಳೆದ ತಿಂಗಳು ಸಿಕ್ಕಿದ ಹಾಗೆ ಈ ತಿಂಗಳೂ ನೆಪ್ಚೂನ್ ಮತ್ತು ಯುರೇನಸ್‌ಗಳನ್ನು ಕಷ್ಟವಿಲ್ಲದೇ ಹುಡುಕುವ ಅವಕಾಶ ಇದೆ. ನವೆಂಬರ್ ೧೮ರ ಸಂಜೆ ಚಂದ್ರ ನೆಪ್ಚೂನ್ ಅನ್ನು ಮರೆಮಾಡಿರುತ್ತದೆ. ಚಂದ್ರ ಮುಳುಗುವುದಕ್ಕೆ ಸ್ವಲ್ಪ ಮುಂಚೆ ನೆಪ್ಚೂನ್ ಚಂದ್ರನ ಹಿಂದಿನಿಂದ ಇಣಿಕಿ ನೋಡುತ್ತದೆ. ದುರ್ಬೀನಿನಿಂದ ಹೀಗೆ ನೆಪ್ಚೂನ್ ಅನ್ನು ಗುರುತಿಸಬಹುದು.

ಮರುದಿನ ಅಂದರೆ ಹದಿನೈದರಂದು ಯುರೇನಸ್‌ನ ಸರದಿ. ಆದರೆ ಈ ಘಟನೆ ಮಧ್ಯಾಹ್ನವೇ ನಡೆಯುವುದರಿಂದ ಸಂಜೆಯಾಗುವಾಗ ಚಂದ್ರನ ಪಕ್ಕದಲ್ಲಿ "ಗ್ರಹಣಮುಕ್ತ"(!) ಯುರೇನಸ್ ಕಾಣುತ್ತದೆ!

ನವೆಂಬರ್ ೨೨ರ ಹುಣ್ಣಿಮೆಯಂದು ಚಂದ್ರನ ಪಕ್ಕವೇ ಕಾಣುವ ನಕ್ಷತ್ರ ಸಮೂಹವನ್ನು ಗಮನಿಸಿ. ಇದರ ಹೆಸರು ಕೃತ್ತಿಕಾ ಎಂದು ಈಗ ತಾನೇ ಹೇಳಿದೆನಲ್ಲವೇ ? ಈ ತಿಂಗಳ ಹೆಸರು ಕಾರ್ತೀಕ ಎಂದೇಕೆ ಎಂಬುದು ಈಗ ಸ್ಪಷ್ಟವಾಯಿತಲ್ಲ !

ನವೆಂಬರ್ [illegible].ರಂದು ಚಂದ್ರನ ಪಕ್ಕ ಮಿನುಗುವ ನಕ್ಷತ್ರ ರೋಹಿಣಿ.

ಈ ತಿಂಗಳು ಇಷ್ಟೊಂದು ವೈವಿಧ್ಯಪೂರ್ಣ ಘಟನಾವಳಿಗಳ ಜೊತೆಗೆ ಬುಧ ಸಂಕ್ರಮಣವೂ ಸೇರಿದೆ. ನಿಮ್ಮನ್ನು ತಿಂಗಳಿಡೀ ಹಿಡಿದಿಡುವ ಇನ್ನೊಂದು ಘಟನೆ - ಉಲ್ಕಾವೃಷ್ಟಿ. ಪ್ರತಿದಿನವೂ ಬೆಳಿಗ್ಗೆ ಅರ್ಧಗಂಟೆ ಆಕಾಶವನ್ನು ವೀಕ್ಷಿಸಿ. ಪೂರ್ವದಿಕ್ಕಿನಿಂದ ಉಲ್ಕೆಗಳ ಸಂಖ್ಯೆ ಕ್ರಮೇಣ ಹೆಚ್ಚುವುದು, ನವೆಂಬರ್ ೧೭ರ ಹೊತ್ತಿಗೆ ಗರಿಷ್ಠವನ್ನು ಮುಟ್ಟುವುದು. ಆಗ ನೀವು ಈ ಉಲ್ಕೆಗಳೆಲ್ಲಾ ಯಾವುದೋ ಒಂದು ನಿರ್ದಿಷ್ಟ ದಿಕ್ಕಿನಿಂದ ಬರುತ್ತದೆ ಎಂದು ಗುರುತಿಸಬಲ್ಲಿರಿ. ಆ ದಿಕ್ಕು ಸಿಂಹರಾಶಿಯತ್ತ ಇದೆ. ಲಿಯೋನಿಡ್ಸ್ ಎಂಬುದು ಈ ಉಲ್ಕಾವೃಷ್ಟಿಯ ಹೆಸರು.

## ನೀವು ಕೇಳಿದ್ದು

**ಸ್ಪಷ್ಟೀಕರಣ**

ನಭಾವಲೋಕನದ ನಕ್ಷೆಯನ್ನು ಉಪಯೋಗಿಸಲು ಕೆಲವರು ಕಷ್ಟಪಟ್ಟಿದ್ದಾರೆ. ಇದರಲ್ಲಿ ಪೂರ್ವ ಪಶ್ಚಿಮಗಳು ಅದಲುಬದಲಾಗಿವೆ ಎಂಬುದು ಕೆಲವರ ಭಾವನೆ. ಅದು ಹಾಗಲ್ಲ. ಈ ನಕ್ಷೆಯನ್ನು ಎತ್ತಿ ನೆತ್ತಿಯ ಮೇಲೆ ಹಿಡಿದು ನೋಡಬೇಕು. ಉತ್ತರ ದಿಕ್ಕಿಗೆ ಹೊಂದಿಸಿಕೊಂಡಲ್ಲಿ ಪೂರ್ವ ಪಶ್ಚಿಮಗಳು ತಾವಾಗಿ ಹೊಂದುತ್ತವೆ.

ಇನ್ನೊಂದು ಅಂಶ. ಈ ನಕ್ಷೆಗಳು ಆಯಾ ತಿಂಗಳಿನ ಸಂಜೆಗೆ ಅನ್ವಯಿಸುತ್ತವೆ. ಅಂದರೆ ರಾತ್ರಿ ಹನ್ನೊಂದು ಗಂಟೆಗೆ ಈ ನಕ್ಷೆಯನ್ನು ಉಪಯೋಗಿಸಲಾಗದು. ಇದರಲ್ಲಿ ಪಶ್ಚಿಮದಲ್ಲಿ ಸೂಚಿಸಿರುವ ನಕ್ಷತ್ರಗಳು ಮುಳುಗಿಹೋಗಿರುತ್ತವೆ. ಪೂರ್ವದ ನಕ್ಷತ್ರಗಳು ನೆತ್ತಿಗೆ ಬಂದಿರುತ್ತವೆ. ಬೆಳಿಗ್ಗೆ ಏಳು ಗಂಟೆಗೆ ಸೂರ್ಯ ಪೂರ್ವದಲ್ಲಿದ್ದು ಹನ್ನೆರಡು ಗಂಟೆಯ ಹೊತ್ತಿಗೆ ನೆತ್ತಿಗೆ ಬರುವುದಲ್ಲವೇ ? ಅದೇ ರೀತಿ ಈ ನಕ್ಷತ್ರಗಳು ಪೂರ್ವದಿಂದ ಪಶ್ಚಿಮಕ್ಕೆ ಚಲಿಸುತ್ತವೆ. ಕಾರಣ ಸುಸ್ಪಷ್ಟ. ಪಶ್ಚಿಮದಿಂದ ಪೂರ್ವಕ್ಕೆ ಭೂಮಿಯ ಆವರ್ತನೆ.

ಯುರೇನಸ್ ಮತ್ತು ನೆಪ್ಚೂನ್‌ಗಳನ್ನು ಕಾಣುವ ತವಕ ಅನೇಕರಿಗಿದೆ. ನಭಾವಲೋಕನದಲ್ಲಿ ಸೂಚಿಸಿರುವ ದಿನಾಂಕಗಳಲ್ಲಿ ಮಾತ್ರ ಈ ಗ್ರಹಗಳು ಕಾಣುವುವೇ ? ಉಳಿದ ದಿನಗಳಂದು ಕಾಣುವುದಿಲ್ಲವೇ ? ಇದು ಅನೇಕರು ದೂರವಾಣಿಯಲ್ಲಿ ಕೇಳಿದ ಪ್ರಶ್ನೆ. ಉಳಿದ ರಾತ್ರಿಗಳೂ ಯುರೇನಸ್ ನೆಪ್ಚೂನ್‌ಗಳು ಕಾಣುತ್ತವೆ. ಆದರೆ ಅವನ್ನು ನೀವು ಪತ್ತೆ ಮಾಡುವುದು ಹೇಗೆ ? ಇದಕ್ಕಾಗಿ ಚಂದ್ರನ ಮಾರ್ಗದರ್ಶಿತ್ವ ಅಗತ್ಯ. "ಕಾರು ನಿಂತಿದೆಯಲ್ಲಾ ಅದೇ ಮನೆ" ಎಂದು ಗುರುತು ಹೇಳುತ್ತೇವಲ್ಲವೇ ? ಅದು ಮನೆಯ ಗುರುತಿಗೆ. ಕಾರು ಹೊರಟುಹೋದ ಮೇಲೂ ಮನೆಯನ್ನು ಗುರುತಿಸಲು ಕಲಿಯುವವರೆಗೆ ಇದು ಅವಶ್ಯಕ. ಹೀಗೆಯೇ ಚಂದ್ರನ ಸಹಾಯದಿಂದ ಯುರೇನಸ್ ಮತ್ತು ನೆಪ್ಚೂನ್ ಅನ್ನು ಗುರುತಿಸಲು ಕಲಿತ ಮೇಲೆ, ಸುತ್ತಲಿನ ಇತರ ನಕ್ಷತ್ರಗಳನ್ನು ನೆನಪಿನಲ್ಲಿಟ್ಟುಕೊಂಡು, ಚಂದ್ರ ಇಲ್ಲದಾಗಲೂ ಗ್ರಹಗಳನ್ನು ಗುರುತಿಸಬಹುದು.

ಈ ಎರಡು ಗ್ರಹಗಳು ಬರಿಗಣ್ಣಿಗೆ ಕಾಣುವುವೇ ? ಇದೊಂದು ವಿವಾದಾಸ್ಪದ ವಿಷಯ. ಬೆಂಗಳೂರಿನಂತಹ ನಗರದಿಂದ ಇವುಗಳನ್ನು ಬರಿಗಣ್ಣಿನಿಂದ ನೋಡುವುದಂತೂ ಸಾಧ್ಯವೇ ಇಲ್ಲ. ಆದರೆ ವಿದ್ಯುದ್ದೀಪ ನುಸುಳದ ಪ್ರದೇಶಗಳಲ್ಲಿ ಆಕಾಶ ಶುಭ್ರವಾಗಿದ್ದು ಚಂದ್ರನೂ ಇಲ್ಲದಾಗ ಇವನ್ನು ಬರಿಗಣ್ಣಿನಿಂದ ಗುರುತಿಸುವ ಪ್ರಯತ್ನ ಮಾಡಿ ಗೆದ್ದವರಿದ್ದಾರೆ. ಅವರಿಗೆ ಆಗಸದ ಒಂದೊಂದು ನಕ್ಷತ್ರವೂ ಪರಿಚಿತ. ಆದ್ದರಿಂದ ನಕ್ಷತ್ರವಲ್ಲದ ಈ ಕಾಯವನ್ನು ಸುಲಭವಾಗಿ ಗುರುತಿಸಬಲ್ಲರು.

ಗ್ರಾಮೀಣ ಪ್ರದೇಶಗಳಿಂದ ಈ ಕಸರತ್ತನ್ನು ಮಾಡಿ ತಂತಮ್ಮ ದೃಷ್ಟಿ ಪರೀಕ್ಷೆ ಮಾಡಿಕೊಳ್ಳಲು ಇದು ಒಳ್ಳೆಯ ಅವಕಾಶ.

- ಬಿ. ಎಸ್. ಶೈಲಜಾ

ಡಾ॥ ಬಿ. ಎಸ್. ಶೈಲಜಾ
ಜವಹರ್‌ಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಶ್ರೀ ಟಿ. ಚೌಡಯ್ಯ ರಸ್ತೆ, ಬೆಂಗಳೂರು - ೫೬೦ ೦೦೧

# ಇತಿಹಾಸದಲ್ಲಿ ದಾಖಲಾದ ಖಗೋಳ ಕೌತುಕ

ಡಾ॥ ಬಿ. ಎಸ್. ಶೈಲಜಾ

ನ್ಯೂಝಿಲೆಂಡ್ ದೇಶದ ಆಕ್ಲಂಡ್ ನಗರದ ಸಮೀಪದ ಒಂದು ಸುಪ್ರಸಿದ್ಧ ವಿಹಾರ ಧಾಮದ ಹೆಸರು ''ಮರ್ಕ್ಯುರಿ ಬೇ''. - ಇದಕ್ಕೆ ಈ ಹೆಸರು ಹೇಗೆ ಬಂದಿತು ಎಂಬ ಸಂಗತಿ ಸ್ವಾರಸ್ಯವಾಗಿದೆ.

ಚರಿತ್ರೆಯ ಪುಟಗಳು ತಿಳಿಸುವಂತೆ ನ್ಯೂಝಿಲೆಂಡ್ ದೇಶವನ್ನು ನಾಗರಿಕರಿಗೆ ಪರಿಚಯಿಸಿದವನು ಕ್ಯಾಪ್ಟನ್ ಜೇಮ್ಸ್ ಕುಕ್. ಅಂದಿನ ದಿನಗಳಲ್ಲಿ ದಕ್ಷಿಣ ಸಾಗರದಲ್ಲೊಂದು ದೊಡ್ಡದೊಂದು ಖಂಡವಿದೆ ಎಂಬ ಗುಮಾನಿ ಎಲ್ಲ ಐರೋಪ್ಯರಿಗಿತ್ತು. ಆ ಖಂಡವನ್ನು ಆಕ್ರಮಿಸಿಕೊಂಡು ಬ್ರಿಟಿಷ್ ವಸಾಹತನ್ನಾಗಿ ಮಾಡಬೇಕು ಎಂಬ ''ಘನ'' ಉದ್ದೇಶ ಸರಕಾರದ್ದು. ಆದ್ದರಿಂದ ಕ್ಯಾಪ್ಟನ್ ಕುಕ್‌ನ ಕರ್ತವ್ಯವೂ ''ಘನ''ವೇ ಆಗಿತ್ತು. ಆ ಖಂಡವನ್ನು ಹುಡುಕಿ ಪತ್ತೆ ಮಾಡಿ ಅಲ್ಲಿಯ ಅಕ್ಷಾಂಶ ರೇಖಾಂಶಗಳನ್ನು ಗುರುತಿಸುವುದು ಇನ್ನೂರು ವರ್ಷಗಳ ಹಿಂದೆ ಸುಲಭ ಸಾಧ್ಯವಾಗಿರಲಿಲ್ಲ. ಆದ್ದರಿಂದ ಒಂದು ವಿಶೇಷ ಸಂದರ್ಭದೊಡನೆ ಇದನ್ನು ಹೊಂದಿಸಲಾಯಿತು.

ಎಡ್ಮಂಡ್ ಹ್ಯಾಲೀ ಆಕಾಶಕಾಯಗಳ ಅಧ್ಯಯನ ನಡೆಸುವಾಗ ಗಮನಿಸಿದ ಒಂದು ಕೊರತೆ ಎಂದರೆ ಭೂಮಿ-ಸೂರ್ಯರ ದೂರವನ್ನು ಅಳತೆ ಮಾಡಲು ಸಾಧ್ಯವಾಗದಿರುವುದು. ಇದು ಇತರ ಖಗೋಳಜ್ಞರನ್ನೂ ಬಾಧಿಸಿತ್ತಾದರೂ ಹ್ಯಾಲಿಗೆ ಇದನ್ನು ಬಗೆಹರಿಸುವ ಉಪಾಯ ಹೊಳೆಯಿತು. ಚಂದ್ರನಲ್ಲದೆ ಇನ್ಯಾವುದಾದರೂ ಸಣ್ಣ ಕಾಯ ಸೂರ್ಯನ ಮುಂದೆ ಹಾದು ಹೋಗುವುದರ ಸಮಯವನ್ನು ಗುರುತಿಸಿಕೊಳ್ಳುವುದೇ ಈ ಉಪಾಯ. ''ಸಣ್ಣ'' ಎಂದರೆ ಭೂಮಿಯಿಂದ ಕಂಡಂತೆ ಅದು ಸೂರ್ಯನಿಗಿಂತ ಚಿಕ್ಕದಾಗಿ ಕಾಣಬೇಕೆಂದು ಅರ್ಥ ಅಷ್ಟೇ. ಈ ಸಂದರ್ಭಕ್ಕೆ ಹೊಂದುವ ಕಾಯಗಳು ಎರಡೇ - ಬುಧ ಮತ್ತು ಶುಕ್ರ. ಇವು ಸೂರ್ಯನ ಮುಂದೆ ಹಾದು ಹೋಗುವ ಘಟನೆಗಳೇ ಸಂಕ್ರಮಣಗಳು (Transits).

1761 ಹಾಗೂ 1769ರಲ್ಲಿ ಶುಕ್ರಗ್ರಹ ಸೂರ್ಯನ ಮುಂದೆ ಹಾದುಹೋಗುತ್ತದೆ ಎಂದು ತಿಳಿಸಿದ ಹ್ಯಾಲೀ. ಎಲ್ಲ ಖಗೋಳಜ್ಞರಲ್ಲಿ ಈ ಬಗ್ಗೆ ಆಸಕ್ತಿ ಮೂಡಿತು. ಭೂಮಿಯ ಮೇಲಿನ ಎರಡು ಸಾಕಷ್ಟು ದೂರವಿರುವ ಪ್ರದೇಶಗಳಿಂದ ಈ ಸಂಕ್ರಮಣವನ್ನು ವೀಕ್ಷಿಸಿ, ಭೂಮಿ ಸೂರ್ಯರ ದೂರವನ್ನು ನಿಖರವಾಗಿ ಅಳೆಯಬಹುದು ಎಂದು ಹ್ಯಾಲೀ ವಿವರಿಸಿದ್ದ. ಈ ವೀಕ್ಷಣೆಗಾಗಿ ಎಲ್ಲ ದೇಶಗಳಿಂದ ವೀಕ್ಷಕರು ಹೊರಟುನಿಂತರು. ಕ್ಯಾಪ್ಟನ್ ಕುಕ್ ಹೊರಟದ್ದೂ ಈ ಕಾರಣಕ್ಕಾಗಿ. ಲೆ ಜೆಂಟಿಲ್ ಎಂಬ ಫ್ರೆಂಚ್ ಸತದೃಷ್ಟ ವಿಜ್ಞಾನಿ ಇದಕ್ಕಾಗಿ ಭಾರತಕ್ಕೆ ಹೊರಟ. ಬ್ರಿಟಿಷರ ದಾಳಿಗೆ ತುತ್ತಾಗಿ ಆತನ ಹಡಗು ಬಳಸುದಾರಿ ಹಿಡಿದು ಪಾಂಡಿಚೇರಿ ತಲುಪಿದಾಗ 1761ರ ಸಂಕ್ರಮಣ ಆಗಿಹೋಗಿತ್ತು. 1769ಕ್ಕಾಗಿ ಕಾದ ಆತನಿಗೆ ನಿರಾಶೆಯೇ ಆಯಿತು. ಮಳೆ, ಮೋಡಗಳು ಅಡ್ಡಿಯಾದವು. ಪ್ಯಾರಿಸ್‌ಗೆ ಹಿಂದಿರುಗಿದರೆ ಅಲ್ಲಿ ಏಳು ವರ್ಷ ''ನಾಪತ್ತೆ''ಯಾಗಿದ್ದ ಕಾರಣ ಮೃತವ್ಯಕ್ತಿಗಳ ಪಟ್ಟಿಯಲ್ಲಿ ಆತನ ಹೆಸರು ಸೇರಿಹೋಗಿತ್ತು. ಉತ್ತರಾಧಿಕಾರಿಗಳು ಆಸ್ತಿಯನ್ನು ಕಬಳಿಸಿಬಿಟ್ಟಿದ್ದರು.

ಕುಕ್ ಅದೃಷ್ಟವಂತ. 1761 ಹಾಗೂ 1769 ಇವೆರಡರ ವೀಕ್ಷಣೆಗಳನ್ನೂ ನಡೆಸಿದ. ಮಧ್ಯದಲ್ಲಿ ನ್ಯೂಝಿಲೆಂಡ್‌ನ ಎಲ್ಲ ಭೂಭಾಗಗಳ ಅಕ್ಷಾಂಶ, ರೇಖಾಂಶಗಳನ್ನು ಅಳೆದ. ಇದನ್ನು ಗ್ರೀನಿಚ್ ಸಮಯದೊಂದಿಗೆ ಹೊಂದಿಸುವ ಕೆಲಸ ಬಾಕಿ ಉಳಿಯಿತು. ಇದಕ್ಕಾಗಿ ಆತ 1769ರ ನವೆಂಬರ್‌ನ ಬುಧಸಂಕ್ರಮಣವನ್ನು ಆಯ್ದುಕೊಂಡ. ಅದನ್ನು ವೀಕ್ಷಿಸಿ ತನ್ನ ಕರ್ತವ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ. ಇದಕ್ಕಾಗಿ ಆತನ ಹಡಗು ''ಎನ್ಡೀವರ್'' ಲಂಗರು ಹಾಕಿದ ಕೊಲ್ಲಿಯೇ ''ಮರ್ಕ್ಯುರಿ ಬೇ''.

ಭೂಗೋಳದ ಮೇಲೆ ನ್ಯೂಝಿಲೆಂಡ್‌ನ ಸ್ಥಾನವನ್ನು ನಿರ್ಧರಿಸುವಲ್ಲಿ ಹೀಗೆ ''ಮರ್ಕ್ಯುರಿ ಬೇ'' ಮುಖ್ಯ ಪಾತ್ರ ವಹಿಸಿತು.

ಈ ಘಟನೆಯನ್ನು ನೆನೆಸಿಕೊಳ್ಳುವ ಅವಕಾಶ ನವೆಂಬರ್ 15ರಂದು ಒದಗಿಬರಲಿದೆ. ಅಂದು ಬುಧ ಸಂಕ್ರಮಣ.

ಆರೇಳು ವರ್ಷಗಳ ಅವಧಿಯಲ್ಲಿ ಪುನರಾವೃತ್ತಿಯಾಗುವ ಈ ಘಟನೆಯ ಒಳಗುಟ್ಟು ಬಹಳ ಸರಳ. ಸೂರ್ಯಗ್ರಹಣದಲ್ಲಿ ಚಂದ್ರ ಪರ್ವಬಿಂದುವಿನಲ್ಲಿದ್ದಾಗ ಉಂಟಾಗುವಂತಹ ಪರಿಣಾಮ ಅಷ್ಟೇ.

ಚಂದ್ರ ಪರ್ವಬಿಂದುಗಳನ್ನು (ಅಂದರೆ ಚಂದ್ರ ಕಕ್ಷೆ ಭೂಮಿ-ಸೂರ್ಯರ ತಲವನ್ನು ಭೇದಿಸುವ ಬಿಂದುಗಳು) ಹದಿನೈದು ದಿನಕ್ಕೊಮ್ಮೆ ದಾಟುವಾಗ ಅಮಾವಾಸ್ಯೆ ಆದರೆ ಗ್ರಹಣ ಖಂಡಿತ. ಅದೇ ರೀತಿ ಬುಧಗ್ರಹದ ಪರ್ವ ಬಿಂದುಗಳನ್ನು ಭೂಮಿ ದಾಟುವುದು ನವೆಂಬರ್ ಮತ್ತು ಮೇ ತಿಂಗಳುಗಳಲ್ಲಿ. ಅದೇ ದಿನ ಬುಧಗ್ರಹವೂ ಆ ಬಿಂದುವಿನ ಸಮೀಪವೇ ಇದ್ದರೆ ಸಂಕ್ರಮಣ ವೀಕ್ಷಣೆ ಸಾಧ್ಯ.

ಈಗ ನವೆಂಬರ್ 15ರ ಗ್ರಹಣವನ್ನು ಪೆಸಿಫಿಕ್ ಸಾಗರದಿಂದ ವೀಕ್ಷಿಸುವ ಅವಕಾಶ ಒದಗಿಬಂದಿದೆ. ಭಾರತಕ್ಕೆ ಈ ಅವಕಾಶವಿಲ್ಲ. ಆಸ್ಟ್ರೇಲಿಯಾ, ನ್ಯೂಝಿಲೆಂಡ್‌ನ ಉತ್ತರದ್ವೀಪ ಮತ್ತು ಹವಾಯ್ ದ್ವೀಪಗಳು ಪ್ರಶಸ್ತವಾದ ಆಯ್ಕೆ. ಉತ್ತರ ಮತ್ತು ದಕ್ಷಿಣ ಅಮೇರಿಕದಿಂದ ಸೂರ್ಯಾಸ್ತವಾಗುವಾಗ ಸಂಕ್ರಮಣ ವೀಕ್ಷಣೆ ಸಾಧ್ಯ. ಸೂರ್ಯಬಿಂಬದ ಉತ್ತರದ ಅಂಚಿನಲ್ಲಿ ಕಾಣುವ ಈ ಕಪ್ಪು ಚುಕ್ಕೆಯನ್ನು ನೋಡಲು ಹವ್ಯಾಸಿ ವೀಕ್ಷಕರು ಮತ್ತು ವೃತ್ತಿಪರರು ಸಜ್ಜಾಗಿದ್ದಾರೆ. ಇದು ಹವ್ಯಾಸಿಗಳಿಗೊಂದು ಸವಾಲು. ವೃತ್ತಿಪರರ ದೃಷ್ಟಿಕೋನವೇ ಬೇರೆ. ಸೂರ್ಯನ ಕಿರೀಟವನ್ನು ಇದು ದಾಟಿ ಬರುವುದನ್ನು ಅಭ್ಯಸಿಸಿ, ಕಿರೀಟದ ವೈಶಿಷ್ಟ್ಯಗಳನ್ನು ಗುರುತಿಸುವ ಆಲೋಚನೆ ಅವರದು. ನ್ಯೂಝಿಲೆಂಡ್‌ನ ಉತ್ತರ ದ್ವೀಪದಿಂದ ಪೂರ್ಣಸಂಕ್ರಮಣ ವೀಕ್ಷಿಸಬಹುದು. ದಕ್ಷಿಣ ದ್ವೀಪದಿಂದ ಚುಕ್ಕೆ ಸೂರ್ಯನ ಅಂಚನ್ನು ಸವರಿಕೊಂಡು ಹೋಗುವುದನ್ನು ಕಾಣಬಹುದು.




ಸಂಕ್ರಮಣವನ್ನು ವೀಕ್ಷಿಸಬಹುದಾದ ಭೂಭಾಗ

ಕಳೆದ ಇನ್ನೂರು ವರ್ಷಗಳಲ್ಲಿ ಇಂತಹ 25-30 ಸಂಕ್ರಮಣಗಳ ವೀಕ್ಷಣೆಗಳು ದಾಖಲಾಗಿವೆ. ಕಪ್ಪು ಬಿಲ್ಲೆಯಂತೆ ಕಾಣುವ ಬುಧಗ್ರಹದ ಮಧ್ಯಭಾಗದಲ್ಲಿ ಒಂದು ಬೆಳಕಿನ ಚುಕ್ಕೆ ಮೂಡುವುದನ್ನು ಅನೇಕರು ಗಮನಿಸಿದ್ದಾರೆ. ಬ್ಲಾಕ್ ಡ್ರಾಪ್ [illegible] [illegible] [illegible] [illegible]

# ಬೋಗಾ ಮತ್ತು ಗುಲಾಮರು

(ಸ್ಪೇನ್‌ನ ಜನಪದ ಕಥೆ)

ದು. ನಿಂ. ಬೆಳಗಲಿ

ಮೂರ್ ಸರದಾರನಾಗಿದ್ದ ಬೋಗಾ, ಹತ್ತು ಸಾವಿರ ಗುಲಾಮರ ಒಡೆಯನಾಗಿದ್ದ. ಆತನ ಮನಸ್ಸಿನಲ್ಲಿ ಒಂದು ಚಿಂತೆ ಕಾಡುತ್ತಲಿತ್ತು. ವಿಷಯ ಎಷ್ಟು ಚಿಕ್ಕದಾಗಿದ್ದರೂ ಮನಸ್ಸಿಗೆ ತೃಪ್ತಿ ಕೊಡುವ ತನಕ ನೆಮ್ಮದಿ ಇರುವುದಿಲ್ಲ.

ಸರದಾರ ಬೋಗಾ ಮಾವನ ಮನೆಗೆ ನಡೆದಿದ್ದ. ಆದಷ್ಟು ಬೇಗ ಆತ ಅತ್ತ ಹೋಗಬೇಕೆಂದು ಆತುರಪಟ್ಟಿದ್ದ. ಅಳಿಯ ಬರುವ ಸಮಾಚಾರವು ಮಾವನಿಗೆ ಒಂದು ಬೆಳಗಿನಲ್ಲಿ ತಲುಪಿತು. ತಮ್ಮ ಕುಲ ಸಂಪ್ರದಾಯದಂತೆ ಆತ ತನ್ನ ಮಗಳನ್ನು ಒಂದು ಕತ್ತೆಯ ಮೇಲೆ ಕೂಡಿಸಿ ಅಳಿಯನ ಸ್ವಾಗತಕ್ಕಾಗಿ ಕಳುಹಿಸಿದ. ಆ ಗ್ರಾಮದ ಗಡಿಸೀಮೆಯಲ್ಲಿ ಅವರಿಬ್ಬರೂ ಕತ್ತೆಗಳ ಮೇಲೆ ಕುಳಿತುಕೊಂಡು ಭೇಟಿಯಾದರು. ಪರಸ್ಪರ ಕೈಕೂಡಿಸಿ ಸಂತಸವನ್ನು ವ್ಯಕ್ತಪಡಿಸಿದರು.

ಪತಿ-ಪತ್ನಿಯರ ಈ ಸಮಾಗಮದಲ್ಲಿ ಅವರು ಸವಾರಿ ಮಾಡಿದ ಎರಡೂ ಕತ್ತೆಗಳು ಪರಸ್ಪರ ಎದುರು ಮುಖ ಮಾಡಿಕೊಂಡು ನಿಂತಿದ್ದವು. ತಮ್ಮ ಸ್ವಭಾವದಂತೆ ಎರಡೂ ಕತ್ತೆಗಳು ಕಿವಿಗಳನ್ನು ನಿಮಿರಿಸಿ, ಮೂಗು ಹೊರಳೆಗಳನ್ನು ಅಲುಗಿಸಿದ್ದವು. ಯಾವನಾದರೂ ಪ್ರಶ್ನೆ ಕೇಳಿದರೆ, ಉತ್ತರಿಸುವ ರೀತಿಯಲ್ಲಿ, ಅವೆರಡೂ ಕುತೂಹಲಿಗಳಾಗಿ ನಿಂತುಕೊಂಡಿದ್ದವು. ಈ ನೋಟವನ್ನು ಕಂಡು ಬೋಗಾನ ಮನಸ್ಸಿನಲ್ಲಿ ಒಂದು ಸಂದೇಹದ ಬೀಜ ಮೊಳೆಯಿತು. ಆತ ಅದರ ಬಗೆಗೆ ತುಂಬಾ ಚಿಂತಿತನಾದ.

ಮಾವನ ಮನೆಗೆ ಹೋಗಿ ಬೋಗಾ ಎಲ್ಲ ಸಂಬಂಧಿಕರನ್ನು ಕಂಡನು. ಆದರೆ ಆತನ ಮನಸ್ಸಿನಲ್ಲಿಯ ಸಮಸ್ಯೆ ಇನ್ನೂ ಬೆಳೆದಿತ್ತು.

''ಆ ಎರಡೂ ಕತ್ತೆಗಳು ಏನನ್ನು ಹೇಳುತ್ತಿರಬಹುದು ? ಅವೆರಡೂ ಅಪರಿಚಿತವಾಗಿದ್ದರೂ ಚಿರಪರಿಚಿತರಂತೆ ಪರಸ್ಪರ ಏಕೆ ನಿಂತುಕೊಂಡವು ?'' ಈ ಪ್ರಶ್ನೆಗಳಿಂದ ಪೀಡಿತನಾದ ಬೋಗಾನಿಗೆ ಸಂದ ಆತಿಥ್ಯ ಸತ್ಕಾರಗಳೆಲ್ಲ ಹೊಳೆಯಲ್ಲಿ ಹುಣಸೆಹಣ್ಣು ತೊಳೆದಂತಾದವು. ಆತ ತುಂಬಾ ಮಾನಸಿಕ ಹಿಂಸೆಗೆ ಒಳಗಾಗಿದ್ದ.

ಅಳಿಯನ ಚಿಂತೆಯ ಬಗೆಗೆ ಮಾವ ವಿಚಾರಿಸಿದ. ಅಳಿಯನು ಮಾನಸಿಕ ವ್ಯಥೆಯನ್ನು ತಿಳಿದು ಆತ ತನ್ನ ರಾಜ್ಯದಲ್ಲೆಲ್ಲ ಡಂಗುರ ಹೊಡೆಸಿದ. ಬೋಗಾನ ಸಂದೇಹಕ್ಕೆ ಪರಿಹಾರ ಹುಡುಕಿದವರಿಗೆ ಆತನ ತೂಕದಷ್ಟು ಬಂಗಾರದ ನಾಣ್ಯಗಳನ್ನು ಕೊಡುವುದಾಗಿ ಪ್ರಚಾರ ಮಾಡಿಸಿದ. ಜಗತ್ತಿನ ಮೂಲೆಮೂಲೆಗಳಿಂದ ಚಿಂತನಶೀಲರು, ವಿಚಾರವಾದಿಗಳು, ಜ್ಞಾನಿಗಳು, ಸಾಧು ಸಂತರು, ಎಲ್ಲ ಬಗೆಯ ಜನರು ಬಂದರು. ಆದರೆ ಆ ಕತ್ತೆಗಳ ಭಾಷೆಯನ್ನು ತಿಳಿಯುವ ಜ್ಞಾನ ಅವರಲ್ಲಿ ಯಾರಿಗೂ ಇರಲಿಲ್ಲ.



ಸರದಾರ ಬೋಗಾನ ವ್ಯಾಕುಲತೆ ಇನ್ನೂ ಅಧಿಕವಾಯಿತು. ಆತ ಇನ್ನೂ ಚಿಂತಾಗ್ನಿಯಲ್ಲಿ ಬೇಯುತ್ತಲಿದ್ದ.

ಒಂದು ಸಂಜೆ, ಬೆನ್ನು ಬಾಗಿದ, ತೀರ ವೃದ್ಧನಾದ ವ್ಯಕ್ತಿಯೊಬ್ಬ, ಕೋಲು ಊರುತ್ತ ಬೋಗಾನ ಮಾವನೆದುರು ಬಂದುನಿಂತು ವಂದನೆ ಸಲ್ಲಿಸಿದ.

''ಅನ್ನದಾತಾ, ತಮ್ಮ ಅಳಿಯನ ಚಿಂತೆಯ ಸಮಸ್ಯೆಯನ್ನು ನಾನು ಬಿಡಿಸುತ್ತೇನೆ. ಅಪ್ಪಣೆಯಾಗಬೇಕು'' ಎಂದು ಆ ಮುದುಕ ವಿನಯದಿಂದ ಕೇಳಿಕೊಂಡ.

ಕುರುಡನಿಗೇನು ಬೇಕು, ಎರಡು ಕಣ್ಣುಗಳಲ್ಲವೆ ? ಕೂಡಲೇ ಆ ವೃದ್ಧನನ್ನು ಬೋಗಾನ ಹತ್ತಿರ ಕರೆದುಕೊಂಡು ಹೋದರು. ಆತ ಬೋಗಾನ ಸಮಸ್ಯೆಗೆ ಪರಿಹಾರ ನೀಡತೊಡಗಿದ :

''ಒಡೆಯರೇ, ಬಹಳ ಸಮಯವಾಯಿತು. ಅನೇಕ ವರ್ಷಗಳು ಕಳೆದವು. ಈ ಹಿಂದೆ ಒಂದು ದಿನ, ಮನುಷ್ಯನ ಶೋಷಣೆಯಿಂದ ಬಿಡುಗಡೆ ಹೊಂದಲು, ಜಗತ್ತಿನ ಎಲ್ಲ ಕತ್ತೆಗಳು ಒಂದು ಸಭೆ ಸೇರಿಸಿದವು. ಒಂದು ಕತ್ತೆಯನ್ನು ತಮ್ಮ ಪ್ರತಿನಿಧಿಯನ್ನಾಗಿ ಆಯ್ದು, ದೇವರ ಆಸ್ಥಾನಕ್ಕೆ ಕಳಿಸಬೇಕೆಂದು ಕೊನೆಗೆ ಅವೆಲ್ಲ ನಿರ್ಧರಿಸಿದವು. ದೇವರ ಆಸ್ಥಾನಕ್ಕೆ ಹೋದ ಆ ಪ್ರತಿನಿಧಿ ಕತ್ತೆ, ತಮ್ಮೆಲ್ಲರ ಮುಕ್ತಿಗಾಗಿ ದೇವರಿಂದ ಆಜ್ಞೆ ಪಡೆದು ತರಬೇಕಾಗಿತ್ತು. ಹುಜೂರ್, ಆ ಪ್ರತಿನಿಧಿ ಕತ್ತೆ ದೇವರ ಆಸ್ಥಾನದಿಂದ ಇನ್ನೂ ಈವರೆಗೆ ಮರಳಿಬಂದಿಲ್ಲ. ಜಗತ್ತಿನ ಎಲ್ಲ ಕತ್ತೆಗಳು ಇನ್ನೂ ತಮ್ಮ ಪ್ರತಿನಿಧಿಯ ದಾರಿ ಕಾಯುತ್ತಲಿವೆ. ಅದು ಯಾವಾಗ ಆಜ್ಞೆಯನ್ನು ತರುವುದೋ, ತಮ್ಮ ಮುಕ್ತಿ ಎಂದು ಆಗುವುದೋ, ಎಂಬ ಚಿಂತೆಯಲ್ಲಿಯೇ ಎಲ್ಲ ಕತ್ತೆಗಳಿವೆ. ಅನ್ನದಾತಾ, ಇದೇ ವಿಷಯವನ್ನು ಕುರಿತು ಎರಡು ಕತ್ತೆಗಳು ಪರಸ್ಪರ ಭೇಟಿಯಾದಾಗ ದೇವರ ಆಜ್ಞೆಯ ಬಗೆಗೆ ವಿಚಾರಿಸಿಕೊಳ್ಳುತ್ತವೆ.

''ನಮ್ಮ ಮುಖಂಡನ ಸಮಾಚಾರ ಏನಾದರೂ ತಿಳಿದಿದೆಯೇ ? ಎಂದು ಕೇಳಿಕೊಳ್ಳುತ್ತವೆ. ಅನಂತರ ಭವಿಷ್ಯತ್ತಿನ ಭರವಸೆಯಿಂದ ಮೌನವಾಗಿ ನಿಲ್ಲುತ್ತವೆ. ಇದು ಎಂದಿನಿಂದ ನಡೆದುಬಂದಿದೆಯೋ ತಿಳಿದಿಲ್ಲ. ಆದರೆ ಆ ಕತ್ತೆಗಳಿಗೆ ಇನ್ನೂ ಭರವಸೆಯಿದೆ. ಒಂದಿಲ್ಲ ಒಂದು ದಿನವಾದರೂ ದೇವರು ತಮ್ಮ ಮೇಲೆ ದಯೆ ತೋರಿಸುವನು. ಆ ಪ್ರತಿನಿಧಿ ದೇವರ ಅಪ್ಪಣೆಯನ್ನು ತಂದೇ ತರುವನು, ಎಂದು ಅವು ಧೈರ್ಯ ತಾಳಿಕೊಂಡೇ ಇರುತ್ತವೆ. ಅನೇಕ ಕಷ್ಟ-ಸಂಕಟಗಳನ್ನು ಎದುರಿಸುತ್ತಲಿದ್ದರೂ ಅವು ನಿರಾಶೆ ಹೊಂದಿಲ್ಲ. ಆಸೆ-ಭರವಸೆಗಳಿಂದಲೇ ಬದುಕನ್ನು ತೇಯುತ್ತಲಿವೆ.''

ಆ ವೃದ್ಧ ಗುಲಾಮನ ಮಾತುಗಳಿಂದ ಬೋಗಾನಿಗೆ ಒಂದು ಬಗೆಯ ಜ್ಞಾನೋದಯವಾದಂತಾಯಿತು. ಆತನಿಗೆ ಸಮಸ್ಯೆಯೂ ಅರ್ಥವಾಗಿತ್ತು. ಬೋಗಾನ ಕಣ್ಣು ಹನಿದಿದ್ದವು. ದುಃಖ ತಡೆಯದೇ ಆತ ಬಿಕ್ಕಿ ಬಿಕ್ಕಿ ಅತ್ತನು. ಮನದಣಿ ಅತ್ತನು. ಆ ಅಳು ಆತನ ಹೃದಯವನ್ನು ನಿರ್ಮಲಗೊಳಿಸಿತ್ತು. ಮನಸ್ಸು ಹಗುರಾಗಿತ್ತು.

ಆ ಮುದುಕ ಗುಲಾಮನಿಗೆ ಏನೂ ತಿಳಿಯದೇ, ಆತ ಭಯಭೀತನಾಗಿದ್ದನು. ತನ್ನ ಆಸನದಿಂದ ಎದ್ದು ಬೋಗಾ ಆ ವೃದ್ಧನನ್ನು ಬಲವಾಗಿ ಅಪ್ಪಿಕೊಂಡನು.

''ನಮ್ಮ ಸರದಾರ ಕುಲವು ನಿಮ್ಮ ಗುಲಾಮ ವರ್ಗದವರ ಮೇಲೆ ಅದೆಷ್ಟು ಅನ್ಯಾಯ-ಅನಾಚಾರ ಮಾಡುತ್ತಲಿದೆ ! ನಮ್ಮೆಲ್ಲರ ಪರವಾಗಿ ನಾನು ನಿಮ್ಮ ಕ್ಷಮೆ ಕೇಳುತ್ತೇನೆ. ಈಗ ನಾನು ನನ್ನಲ್ಲಿದ್ದ ಎಲ್ಲ ಗುಲಾಮರನ್ನು ಮುಕ್ತಗೊಳಿಸುತ್ತೇನೆ. ಮನುಷ್ಯ ಇತರ ಮನುಷ್ಯರನ್ನು ದನಗಳಂತೆ ಕಾಣುವುದು, ಇದಕ್ಕಿಂತ ದೊಡ್ಡ ಪಾಪ ಈ ಜಗತ್ತಿನಲ್ಲಿ ಯಾವುದೂ ಇಲ್ಲ !'' ಎಂದು ಹೇಳಿ ಬೋಗಾ ಸಂತೋಷದಿಂದ ಕುಣಿದಾಡಿದ.

ದು. ನಿಂ. ಬೆಳಗಲಿ
'ಕಾದಂಬರಿ', ಸೋ[illegible]

## ಮಾತೆಗೆ ನಮಿಸೋಣ

ಒಗ್ಗಿ ನಾವು
ಎಲ್ಲರೂ ಸೇರಿ
ಮಾತೆಗೆ ನಮಿಸೋಣ ||

ಮೇಲು-ಕೀಳು
ಭಾವ ತೊರೆದು
ಎಲ್ಲರೊಂದೇ ಸೇರೋಣ ||

ಭಾರತ ಮಾತೆಯ
ಕೀರ್ತಿಪತಾಕೆಯ
ಹಿಡಿದು ನಾವು ಸಾಗೋಣ ||



ಜನಗಣಮನ
ಹಾಡುತ ನಾವು
ವಂದೇ ಮಾತರಂ ಎನ್ನೋಣ ||

ಒಗ್ಗಿ ನಾವು
ಎಲ್ಲರೂ ಸೇರಿ
ಮಾತೆಗೆ ನಮಿಸೋಣ ||

ನಾರಾಯಣ ರೈ ಕುಕ್ಕುವಳ್ಳಿ
[illegible] ಪುತ್ತೂರು - ೫೭೪ ೨೦೧

## ''ನನ್ನ ಗೊಂಬೆ''

ನಮ್ಮ ಮನೆಯಲೊಂದು
ಪುಟ್ಟ ಗೊಂಬೆ ಇರುವುದು
ಹಗಲು ರಾತ್ರಿ ಎನದೆ
ಸದಾ ನಗುತಲಿರುವುದು ।

ಎಷ್ಟೇ ನಡೆಯುತಿರಲಿ ಅದಕೆ
ದಣಿವು ಆಗದು
ಸೀತ, ಕೆಮ್ಮು, ಜ್ವರವು
ಅದರ ಬಳಿಗೆ ಸುಳಿಯದು ।

ಹಾಲು-ಹಣ್ಣು ಬೇಡಿ ಗೊಂಬೆ
ಹಟವು ಮಾಡದು
ಅದರ ಮುಂದೆ ತಂದು ಇಡಲು
ಎಂದೂ ತಿನ್ನದು ।

ನನ್ನ ಮಗ್ಗುಲಲ್ಲೇ ದಿನವೂ
ಮಲಗಿ ಬಿಡುವುದು
ರಾತ್ರಿಯಲ್ಲಿ ಕನಸುಗಳನು
ಕರೆದು ತರುವುದು ।

ಕೈಯ ಹಿಡಿದು ಮುಗಿಲ ಮೇಲೆ
ನಡೆದು ಬಿಡುವುದು
ಚುಕ್ಕಿಗಳ ಗೋಲಿ ಮಾಡಿ
ಆಟಕೆಳೆವುದು ।

ಸೂರ್ಯ ಮೂಡಿದಾಗ ಗೊಂಬೆ
ಜೊತೆಯಲಿರುವುದು
ಶಾಲೆಯಿಂದ ಬರುವವರೆಗೆ
ಮೂಲೆ ಹಿಡಿವುದು ।



ಚಿತ್ರಶೇಖರ ಕಂಠಿ
(''ಗ್ರೀಷ್ಮ'' ಸಂ: ೧೫೫/೨ಎ,, ಮಾಕಾ ಬಡಾವಣೆ,
ಜೇವರ್ಗಿ ರಸ್ತೆ, ಗುಲ್ಬರ್ಗಾ - ೫೮೫ ೧೦೨.

### ಮಕ್ಕಳ ವಿಮರ್ಶೆ

ನಮ್ಮ ತಾತ ನಾಲ್ಕು ಪುಸ್ತಕಗಳನ್ನು ತಂದುಕೊಟ್ಟಿದ್ದಾರೆ. 'ಪ್ರಾಣಿಗಳ್ಳರು ಮತ್ತು ಮಯೂರ' ನನ್ನನ್ನು ಆಕರ್ಷಿಸಿತು. ಕಳ್ಳತನ ಮಾಡದ ಹಾಗೆ ಬುದ್ಧಿ ಕಲಿಸಲು ಅರಣ್ಯದ ಅಧಿಕಾರಿಗಳಿಗೆ ಕಳ್ಳರನ್ನು ಹಿಡಿದುಕೊಟ್ಟ ಆ ಕಿರಿಯರ ಸಾಹಸಕ್ಕೆ ಎಲ್ಲರೂ ಮೆಚ್ಚಬೇಕು. ಉಳಿದಿರುವ ಪುಸ್ತಕ ಓದಿ ಬರೆಯುತ್ತೇನೆ.

ಬೆಂಗಳೂರು — ರಘು

'ಸಾಹಸದ ಸಮುದ್ರ ಯಾತ್ರೆ' ಕಥೆಯಲ್ಲಿ ಯಾತ್ರೆ ಮಾಡಿದ ಮತ್ತು ನಾವಿಕರ ಅವರ ಸಾಹಸಗಳು. ಆಕ್ಟೋಪಸ್ ಮತ್ತು ಬೇರೆ ವಿಚಿತ್ರ ಪ್ರಾಣಿಗಳು ಸಮುದ್ರದಲ್ಲಿ ವಾಸಿಸುವುದನ್ನು [illegible] ತಿಳಿದುಕೊಂಡೆ. ಇನ್ನೂ ಕಥೆಗಳು ಸ್ವಾರಸ್ಯವಾಗಿವೆ.

ಬೆಂಗಳೂರು — ರಶ್ಮಿ

### ಕಲೆಯ ಬಗ್ಗೆ ನಿಮ್ಮ ತಿಳುವಳಿಕೆ ಪರೀಕ್ಷಿಸಿ (೨)

೧. ಚಿತ್ರಕಲೆ, ಜ್ಯೋತಿಷ್ಯ, ಮತ್ತಿತರ ಅನೇಕ ವಿಷಯಗಳನ್ನೊಳಗೊಂಡ ಶ್ರೀ ತತ್ವನಿಧಿ ರಚಿತವಾದುದು ಇವರ ಆಳ್ವಿಕೆಯಲ್ಲಿ
ಅ) ಚಾಮರಾಜ ಒಡೆಯರು ಆ) ಮುಮ್ಮಡಿ ಕೃಷ್ಣರಾಜ ಒಡೆಯರು ಇ) ನಾಲ್ವಡಿ ಕೃಷ್ಣರಾಜ ಒಡೆಯರು

೨. ಸಾಂಪ್ರದಾಯಿಕ ಚಿತ್ರ ಶೈಲಿಗಳಾದ ಮೈಸೂರು ಮತ್ತು ತಂಜಾವೂರು, ಇವುಗಳಲ್ಲಿ ಸ್ವಲ್ಪ ವ್ಯತ್ಯಾಸಗಳಿದ್ದರೂ, ಬಹಳ ಹೋಲಿಕೆಯಿದೆ. ಒಂದೇ ಮೂಲದಿಂದ ಬಂದ ಕಲಾವಿದರು ಇವುಗಳನ್ನು ರಚಿಸಿರುವುದರಿಂದ ಈ ಸಾಮರಸ್ಯವಿದೆ ಎನ್ನಲಾಗಿದೆ. ಈ ಕಲಾವಿದರು ಮೂಲತಃ
ಅ) ಹೊಯ್ಸಳ ಆ) ವಿಜಯನಗರ ಇ) ಚಾಲುಕ್ಯ

೩. ಮೈಸೂರಿನಲ್ಲಿರುವ ಅರಮನೆಯೊಂದು ಚಿತ್ರಪ್ರದರ್ಶನಾಲಯವಾಗಿದೆ. ಅದು,
ಅ) ಲಲಿತ ಮಹಲ್ ಆ) ಜಗನ್ಮೋಹನ ಅರಮನೆ ಇ) ಇವೆರಡೂ ಅಲ್ಲ.

೪. ಬೆಂಗಳೂರಿನಲ್ಲಿ, ಕಸ್ತೂರ್ಬಾ ಬಾಯಿ ರಸ್ತೆಯಲ್ಲಿರುವ ಪ್ರಾಚ್ಯವಸ್ತು ಸಂಗ್ರಹಾಲಯದ ಪಕ್ಕದಲ್ಲಿ ನಮ್ಮ ನಾಡಿನ ಹೆಸರಾಂತ ಕಲಾವಿದರ ಹೆಸರಿನಲ್ಲಿ ಚಿತ್ರ ಪ್ರದರ್ಶನಾಲಯವನ್ನು ನಿರ್ಮಿಸಲಾಗಿದೆ. ಆ ಕಲಾವಿದರ ಹೆಸರು
ಅ) ಸುಂದರಯ್ಯ ಆ) ವೆಂಕಟಪ್ಪ ಇ) ಹೆಬ್ಬಾರ್

೫. ಕೇಂದ್ರ ಸರ್ಕಾರದ ನೆರವಿನಿಂದ, ಮೈಸೂರು ಶೈಲಿಯ ಸಾಂಪ್ರದಾಯಿಕ ಚಿತ್ರ ರಚನೆ ಪುನರುಜ್ಜೀವಗೊಳಿಸುವ ತರಬೇತಿ ಕೇಂದ್ರ ಬೆಂಗಳೂರಿನಲ್ಲಿ ಆರಂಭವಾದಾಗ ಅದರ ಮುಖ್ಯ ಶಿಕ್ಷಕರಾದವರು
ಅ) ವೈ. ನಾಗರಾಜು ಆ) ವೈ. ಸುಬ್ರಹ್ಮಣ್ಯರಾಜು ಇ) ಎಂ. ಎಸ್. ನಂಜುಂಡರಾವ್

ಉತ್ತರಗಳು : ೧. ಇ ೨. ಆ ೩. ಆ ೪. ಆ ೫. ಆ

ಪ್ರಶ್ನೋತ್ತರಗಳು : ಯು. ಎಸ್. ವೆಂಕಟರಾಮನ್

## ಅಕ್ಟೋಬರ್ ಸಂಚಿಕೆಯ ಪ್ರಶ್ನೆಗೆ ಉತ್ತರ

ಆರು ಸದಸ್ಯರಿರುವ ಯಾವುದೇ ಸಮಿತಿಯಲ್ಲಿ ಪರಸ್ಪರ ಮೂವರು 'ಮಿತ್ರ'ರಾಗಿರಬೇಕು ಅಥವಾ ಮೂವರು ಪರಸ್ಪರ 'ವಿರೋಧಿ'ಗಳಾಗಿರಲೇಬೇಕು. ಇದನ್ನು ಸಾಧಿಸಲು : ಸಮಿತಿಯ ಆರು ಸದಸ್ಯರಿಗೆ ಕ,ಚ,ಟ,ತ,ಪ,ಬ ಎಂದು ಹೆಸರಿಡೋಣ. ಇವರಲ್ಲಿ ಒಂದು ಹೆಸರನ್ನು ಗುರುತಿಸೋಣ.

ಉದಾ : ಕ. - ಈಗ ಉಳಿದ ಐದು ಹೆಸರುಗಳಲ್ಲಿ ಕೆಳಗೆ ಕಂಡ ಎರಡು ಸಾಧ್ಯತೆಗಳಲ್ಲಿ ಒಂದಾದರೂ ನಿಜವಿರಲೇಬೇಕು (ಏಕೆ !)

ಅ. (ಚ,ಟ,ತ,ಪ,ಬ)ಗಳಲ್ಲಿ ಯಾರಾದರೂ ಮೂವರು 'ಕ'ಗೆ ಮಿತ್ರರು.

ಆ. (ಚ,ಟ,ತ,ಪ,ಬ)ಗಳಲ್ಲಿ ಯಾರಾದರೂ ಮೂವರು 'ಕ'ಗೆ ವಿರೋಧಿಗಳು.

ಸಾಧ್ಯತೆ 'ಅ' ನಿಜವೆಂದು ಇಟ್ಟುಕೊಳ್ಳೋಣ.

ಉದಾಹರಣೆ : (ಚ,ತ,ಪ) 'ಕ'ಗೆ ಮಿತ್ರರಾಗಿರಲಿ.

ಈಗ ಮತ್ತೊಮ್ಮೆ ಕೆಳಗಿನ ೨ ಸಾಧ್ಯತೆಗಳಲ್ಲಿ ಒಂದಾದರೂ ನಿಜವಿರಲೇಬೇಕು (ಅಲ್ಲವೆ ?)

ಇ. (ಚ,ತ,ಪ)ಗಳಲ್ಲಿ ಯಾರಾದರೂ ಇಬ್ಬರು ಪರಸ್ಪರ ಮಿತ್ರರಾಗಿರುತ್ತಾರೆ.

ಈ. (ಇ)ನಲ್ಲಿ ಹೇಳಿದ ಸಾಧ್ಯತೆ ಇಲ್ಲ.

ಇ. ಸಾಧ್ಯವೆಂದು ಇಟ್ಟುಕೊಳ್ಳೋಣ. ಉದಾಹರಣೆಗೆ : (ತ,ಪ) ಪರಸ್ಪರ ಮಿತ್ರರಾಗಿರಲಿ.

ಈಗ (ಕ,ತ,ಪ) ಪರಸ್ಪರ ಮಿತ್ರರೆಂಬುದು ಸ್ವಯಂ ವೇದ್ಯ.

(ಈ) ಸಾಧ್ಯವಾದರೆ (ಚ,ತ,ಪ) ಮೂವರು ಪರಸ್ಪರ 'ವಿರೋಧಿ'ಗಳೆಂಬುದು ಸ್ವಯಂ ವೇದ್ಯ. ಹೀಗಾಗಿ ಸಾಧ್ಯತೆ (ಅ) ಇದ್ದರೆ ನಮ್ಮ ಮೂಲ ಹೇಳಿಕೆಯನ್ನು ಸಾಧಿಸಿದಂತಾಯಿತು.

(ಅ) ಬದಲು (ಆ) ನಿಜವಾದರೆ ? ಮೇಲೆ (ಅ) ಸಂದರ್ಭದಲ್ಲಿ ಮಾಡಿದ ಸಾಧನೆಯ ಉದ್ದಕ್ಕೂ 'ಮಿತ್ರ' ಮತ್ತು 'ವಿರೋಧಿ' ಎಂಬ ಎಡೆಯಲ್ಲಿ ಕ್ರಮವಾಗಿ ತದ್ವಿರುದ್ಧ ಸಂಬಂಧಗಳನ್ನು ಬಳಸಿದರೆ 'ಆ' ಸಂದರ್ಭದಲ್ಲಿಯೂ ನಮ್ಮ ಮೂಲ ಹೇಳಿಕೆಯನ್ನು ಸಮರ್ಥಿಸಿದಂತಾಗುತ್ತದೆ. ಒಂದರ್ಥದಲ್ಲಿ ಎರಡನೇ ಭಾಗದ ಸಾಧನೆಯು ತಾರ್ಕಿಕವಾಗಿ ಮೊದಲನೆ ಭಾಗದ ಸಾಧನೆಯ 'ಪ್ರತಿಬಿಂಬ' !

## ಪ್ರಶ್ನೆ 2

ಒಂದು ಬಿಳಿ ಹಾಳೆಯ ಮೇಲೆ ಆರು ಬಿಂದುಗಳನ್ನು ಗುರುತಿಸಿ. ಈ ಬಿಂದುಗಳಿಗೆ ಅ,ಕ,ಚ,ಟ,ತ,ಪ ಎಂದು ಹೆಸರಿಡೋಣ. ಈ ಎಲ್ಲ ಬಿಂದುಗಳನ್ನೂ ಉಳಿದೆಲ್ಲ ಬಿಂದುಗಳೊಡನೆ ಸರಳರೇಖೆಯಿಂದ ಸೇರಿಸಿರಿ. ಆಗ ಹದಿನೈದು ಬಾಹುಗಳುಳ್ಳ ಚಿತ್ರದಲ್ಲಿ ತೋರಿಸಿರುವಂತಹ ಆಕೃತಿ ದೊರೆಯುತ್ತದೆ. ಈಗ 'ಕೆಂಪು' ಅಥವಾ 'ನೀಲಿ' ಬಣ್ಣಗಳನ್ನುಪಯೋಗಿಸಿ ನಿಮಗಿಷ್ಟ ಬಂದಂತೆ ಎಲ್ಲ ಬಾಹುಗಳಿಗೆ ಬಣ್ಣ ಕೊಡಿ. ನೀವು ಹೇಗೆ 'ಬಣ್ಣ'ಸಿದರೂ ಮೂರೂ ಬಾಹುಗಳೂ ಕೆಂಪೋ ಅಥವಾ ನೀಲಿಯೋ ಆಗಿರುವ ಒಂದು ತ್ರಿಕೋಣವಾದರೂ ಇದ್ದೇ ಇರುತ್ತದೆ ! ಅದು ಹೇಗೆ ?

ಮೊದಲು ಗುರುತಿಸಿದ ಆರು ಬಿಂದುಗಳಲ್ಲಿ ಯಾವುದಾದರೂ ಮೂರು ಬಿಂದುಗಳಲ್ಲಿ ಕೋಣಗಳುಳ್ಳ ತ್ರಿಭುಜಗಳನ್ನೇ ಗಣನೆಗೆ ತೆಗೆದುಕೊಳ್ಳಬೇಕು. ಬಿಂದುಗಳನ್ನು ಪರಸ್ಪರ ಸೇರಿಸಿದಾಗ ಹಲವಾರು ಚಿಕ್ಕ/ಪುಟ್ಟ ತ್ರಿಭುಜಗಳು ಕಾಣಸಿಗುತ್ತವೆ. ಅವನ್ನು ಪರಿಗಣಿಸುವಂತಿಲ್ಲ.



# ಮಕ್ಕಳಿಗೆ ಕೊಡುತ್ತಿರುವ ಹಿಂಸೆ

ಡಾ|| ಸಿ. ಆರ್. ಚಂದ್ರಶೇಖರ್

### ಕೀಳರಿಮೆ

''ಇವಳು ನಮ್ಮ ಮಗಳೆಂದು ಹೇಳಿಕೊಳ್ಳಲು ನಾಚಿಕೆಯಾಗುತ್ತದೆ. ಇಷ್ಟು ಚಿಕ್ಕ ವಯಸ್ಸಿಗೇ ಕಳ್ಳತನ ಮಾಡುವುದನ್ನು ಕಲಿತಿದ್ದಾಳೆ. ಆದರೆ ಅದನ್ನು ಒಪ್ಪಿಕೊಳ್ಳುವುದಿಲ್ಲ. ಮಾಡಿಲ್ಲ ಎಂದೇ ಸಾಧಿಸುತ್ತಾಳೆ. ಹೊಡೆದೆವು, ಬೈದೆವು, ಉಪವಾಸ ಹಾಕಿದೆವು. ಬಲು ಮೊಂಡಿ; ಬದಲಾಗಿಲ್ಲ. ನೂರು, ಇನ್ನೂರು, ಮುನ್ನೂರು ರೂಪಾಯಿಗಳನ್ನು ಹಾರಿಸುತ್ತಾಳೆ. ಹೀಗಾದರೆ ಮುಂದೇನು ಗತಿ ?'' ವೀಣಾಳ ತಾಯಿ ದೂರಿದಳು.

''ನಾನು ಹೋಗುವ ಸ್ಕೂಲಿಗೆ ಬೇರೆ ಹುಡುಗಿಯರೆಲ್ಲ ಕಾರಿನಲ್ಲಿ ಬರುತ್ತಾರೆ. ಫೈವ್‌ಸ್ಟಾರ್ ಚಾಕೊಲೇಟ್ ತರುತ್ತಾರೆ. ಎಂಟು ನೂರು ರೂಪಾಯಿ ಬೆಲೆಯ ಶೂ ಹಾಕಿಕೊಳ್ಳುತ್ತಾರೆ. ನನಗೂ ತೆಗೆದುಕೊಡಿ ಎಂದರೆ, ಅಪ್ಪ ಅಮ್ಮ ಇಲ್ಲ ಎನ್ನುತ್ತಾರೆ. ನನಗೆ ಆ ಸ್ಕೂಲಿನಲ್ಲಿ ಎಷ್ಟು ಅವಮಾನವಾಗುತ್ತೆ ಗೊತ್ತಾ ಅಂಕಲ್ ! ಆ ಸ್ಕೂಲಿಗೆ ಹೋಗುವುದಿಲ್ಲ ಎಂದರೆ ಬೈಯ್ಯುತ್ತಾರೆ. ಅದಕ್ಕೇ ಖರ್ಚಿಗೆ ಬೇಕಾದಾಗ ಮನೆಯಲ್ಲಿರುವ ಹಣ ತೆಗೆದುಕೊಳ್ಳುತ್ತೇನೆ. ನನ್ನ ಕಳ್ಳಿ ಎಂದು ಹೊಡೆಯುತ್ತಾರೆ. ಇದು ಸರೀನಾ ?'' ಎಂದು ವೀಣಾ ಕೇಳಿದಾಗ, ತಂದೆ ತಾಯಿ ನಿರುತ್ತರರಾದರು.

### ವಂಚಿತೆ

ಕಳೆದ ಮೂರು ನಾಲ್ಕು ತಿಂಗಳಿಂದ ರಮಾ ಮಂಕಾಗಿರುವುದನ್ನು ಕಂಡ ಹೊಸ ಕ್ಲಾಸ್ ಟೀಚರ್ ಕುಮುದಳು, ರಮಾಳನ್ನು ಕರೆದು ಏನು ಕಷ್ಟ ಸಮಸ್ಯೆ ಎಂದು ವಿಚಾರಿಸಿದಳು. 'ಟೀಚರ್, ನಾನು ಅನಾಥೆ. ನನ್ನ ಸಾಕು ತಂದೆ ತಾಯಿ ನನಗೆ ಬಹಳ ಕಷ್ಟ, ಕಿರುಕುಳ ಕೊಡುತ್ತಾರೆ' ಎಂದು ರಮಾ ಕಣ್ಣೀರು ಹಾಕಿದಳು. ಅನುಕಂಪದಿಂದ ಟೀಚರ್ ಅವಳಿಗೆ ಸಾಕಷ್ಟು ರಿಯಾಯಿತಿಗಳನ್ನು ಕೊಟ್ಟಳು. ಕೆಲವು ತಿಂಗಳುಗಳ ನಂತರ, ರಮಾ ಸುಳ್ಳು ಹೇಳಿದ್ದಾಳೆ, ಅವಳ ತಂದೆ ತಾಯಿಗಳು ಸತ್ತಿಲ್ಲ, ಅವರ ಬಳಿಯಲ್ಲೇ ಇವಳು ಇರುವುದು ಎಂದು ತಿಳಿದ ಕುಮುದಳಿಗೆ ಅಸಾಧ್ಯ ಕೋಪ ಬಂತು. ''ಏನೇ ನಿನಗೆ ನಾಚಿಕೆಯಾಗುವುದಿಲ್ಲವೇ ? ಬದುಕಿರುವ ಅಪ್ಪ ಅಮ್ಮನನ್ನು ಸತ್ತಿದ್ದಾರೆ ಎಂದೆಯಲ್ಲ ಇದು ಸರೀನಾ'' ಎಂದು ಕೇಳಿದಾಗ ರಮಾ ಸ್ವಲ್ಪವೂ ವಿಚಲಿತಳಾಗದೇ ಹೇಳಿದಳು. ''ಮೇಡಂ, ನಾನು ಸುಳ್ಳನ್ನೇನೂ ಹೇಳಿಲ್ಲ. ಅವರು ನನ್ನ ಹೆತ್ತ ತಂದೆ ತಾಯಿ ಇರಬಹುದು. ಆದರೆ ಒಂದು ದಿನವಾದರೂ ಪ್ರೀತಿ ವಿಶ್ವಾಸ ತೋರಿಸಿಲ್ಲ. ಅವರ ಪ್ರೀತಿ ಎಲ್ಲಾ ನನ್ನ ಅಣ್ಣ ಮತ್ತು ಕೊನೇ ತಮ್ಮನಿಗೇ ಮೀಸಲಾಗಿದೆ. ನಾನು ಹೆಣ್ಣು ಎಂದು ತಿರಸ್ಕರಿಸುತ್ತಾರೆ. ಎಷ್ಟು ಒಳ್ಳೆಯ ಮಾರ್ಕ್ಸ್ ತೆಗೆದರೂ ಹೊಗಳುವುದಿಲ್ಲ. ನಿನಗೆ ಶಾಲೆ ಏಕೆ, ಮನೆಕೆಲಸ ಮಾಡು, ಬಟ್ಟೆ ಒಗೆ, ಅಡುಗೆ ಮಾಡುವುದನ್ನು ಕಲಿತುಕೋ ಎನ್ನುತ್ತಾರೆ. ಆದರೆ ಫಸ್ಟ್ ಕ್ಲಾಸ್ ಮಾರ್ಕ್ಸ್ ತೆಗೆಯದಿದ್ದರೆ, ಕೋಲಿನಿಂದ ಹೊಡೆಯುತ್ತಾರೆ. ಅವರು ಬೇಗ ಸಾಯಲಿ ಎಂಬುದೇ ನನ್ನ ಆಸೆ,'' ರಮಾ ಬುಸುಗುಟ್ಟಿದಳು.

★ ★ ★

'ಫಸ್ಟ್ ರ್‍ಯಾಂಕ್ ಬರುತ್ತಿದ್ದವನು ಈಗ ಐದನೇ ರ್‍ಯಾಂಕ್ ಪಡೆದಿದ್ದಾನೆ. ಸರಿಯಾಗಿ ಓದುವುದಿಲ್ಲ. ಯಾವಾಗಲೂ ಆಟ, ಟಿವಿ. ಹೇಳಿದ ಮಾತು ಕೇಳುವುದಿಲ್ಲ. ಟ್ಯೂಶನ್‌ಗೆ ಹೋಗು ಎಂದರೆ ಅಳುತ್ತಾ ಕೂರುತ್ತಾನೆ. ಗದರಿಸಿದರೆ ಕೆಟ್ಟ ಮಾತುಗಳಲ್ಲಿ ಬಯ್ಯುತ್ತಾನೆ. ಇವನನ್ನು ಹೇಗೆ ದಾರಿಗೆ ತರುವುದು ಗೊತ್ತಾಗುತ್ತಿಲ್ಲ. ಹೋಂವರ್ಕ್ ಬರೆಯುವುದಿಲ್ಲ. ತಂಗಿಗೆ ತೀಟೆ ಮಾಡಿ ಅಳಿಸುತ್ತಾನೆ....' ಮಗನ ಬಗ್ಗೆ ತಾಯಿಯ ದೂರು ಮುಂದುವರೆಯುತ್ತಲೇ ಇತ್ತು.

''ನಿಮ್ಮ ಮಗನ ವಯಸ್ಸೆಷ್ಟು, ಎಷ್ಟನೇ ಕ್ಲಾಸು ಓದುತ್ತಿದ್ದಾನಮ್ಮ'' ಎಂದೆ.

''ಆರು ವರ್ಷ ಡಾಕ್ಟ್ರೇ, ನ್ಯೂ ಆಕ್ಸ್‌ಫರ್ಡ್ ಇಂಗ್ಲಿಷ್ ಸ್ಕೂಲಿನಲ್ಲಿ ಫಸ್ಟ್ ಸ್ಟಾಂಡರ್ಡ್‌ನಲ್ಲಿ ಓದುತ್ತಿದ್ದಾನೆ'' ಎಂದಳು ಕೃಷ್ಣವೇಣಿ ! ಆತನ ಟ್ಯೂಷನ್ ಬೆಳಿಗ್ಗೆ ಏಳಕ್ಕೇ ಶುರುವಾಗುತ್ತಿತ್ತು. ಹೋಂವರ್ಕ್ ಮುಗಿಯಲು ರಾತ್ರಿ 10 ಗಂಟೆಯಾಗುತ್ತಿತ್ತು. ಹತ್ತು ನಿಮಿಷ ಬಿಡುವಿಲ್ಲದಂತೆ ಆತ ಕಲಿಯುವ ಕೆಲಸ ಮಾಡಬೇಕಾಗಿತ್ತು.

ಆತ್ಮಹತ್ಯೆಗೆ ಪ್ರಯತ್ನ ಮಾಡಿ, ಗಂಭೀರ ಸ್ಥಿತಿಯಲ್ಲಿ ಆಸ್ಪತ್ರೆಯ ತುರ್ತು ವಿಭಾಗದಲ್ಲಿ ಚಿಕಿತ್ಸೆ ಪಡೆದ ರಾಜೇಶ, ಚೇತರಿಸಿಕೊಂಡ ಮೇಲೂ ಮಂಕಾಗಿದ್ದ. ಊಟ ತಿಂಡಿಯಲ್ಲಿ ಆಸಕ್ತಿಯಿಲ್ಲ. ಮನೆಯವರ ಜೊತೆಯಲ್ಲಾಗಲೀ ಸ್ನೇಹಿತರ ಜೊತೆಯಲ್ಲಾಗಲೀ ಮಾತನಾಡಲು ನಿರಾಕರಿಸುತ್ತಿದ್ದ. ತನ್ನ ವೈಯಕ್ತಿಕ ಅಲಂಕಾರ, ಬೇಕು ಬೇಡಗಳ ಬಗ್ಗೆ ನಿರ್ಲಕ್ಷ್ಯ ತಾಳಿದ್ದ. ಏಳನೇ ತರಗತಿ ಅಂತಿಮ ಪರೀಕ್ಷೆಯಲ್ಲಿ ಬೇರೆಲ್ಲಾ ವಿಷಯಗಳಲ್ಲಿ ಎಪ್ಪತ್ತು ಎಂಬತ್ತು ಅಂಕಗಳನ್ನು ಪಡೆದಿದ್ದರೂ, ಅವನ ನೆಚ್ಚಿನ ವಿಷಯ ಗಣಿತದಲ್ಲಿ ಐವತ್ತೇ ಮಾರ್ಕ್ಸ್ ಬಂದಿದ್ದು ಅವನ ಆತ್ಮಹತ್ಯಾ ಪ್ರಯತ್ನಕ್ಕೆ ಕಾರಣವಾಗಿತ್ತು. 'ಗಣಿತದಲ್ಲಿ ನೂರಕ್ಕೆ ನೂರು ತೆಗೆದರೇನೇ ನನ್ನ ಮಗ ಎಂದು ನಿನ್ನನ್ನು ಒಪ್ಪಿಕೊಳ್ಳುತ್ತೇನೆ. ನಾನು ಹೈಸ್ಕೂಲ್ ಕಾಲೇಜುಗಳಲ್ಲಿ ಗಣಿತದಲ್ಲಿ ಯಾವಾಗಲೂ ನೂರಕ್ಕೆ ನೂರು ತೆಗೆಯುತ್ತಿದ್ದೆ' ಎಂದು ಆತನ ತಂದೆ ಹೇಳುತ್ತಿದ್ದುದು, ಹಾಗೆಯೇ ಆರನೇ ತರಗತಿಯವರೆಗೆ ಗಣಿತದಲ್ಲಿ ತೊಂಬತ್ತು ಅಂಕಗಳಿಗಿಂತ ಹೆಚ್ಚಿಗೇ ತೆಗೆಯುತ್ತಿದ್ದು, ಈ ಸಲ ವಿಫಲನಾಗಿದ್ದಕ್ಕೆ ಅವನಿಗೆ ಖೇದವಾಗಿತ್ತು.

### ಅಂಜಿಕೆ

ಪರೀಕ್ಷೆ ಬರುತ್ತಿದ್ದಂತೆ ಇವನಿಗೆ ಜ್ವರ, ವಾಂತಿ, ಭೇದಿ ಕಾಣಿಸಿಕೊಳ್ಳುತ್ತದೆ. ಎಸ್ಸೆಸ್ಸೆಲ್ಸಿ ಪರೀಕ್ಷೆ ಬರುತ್ತಿದೆ. ಈಗಲೂ ಹಾಗೇ ಆದರೆ ಏನು ಗತಿ. ಹೋದ ಸಲ ಪರೀಕ್ಷೆ ನಾಳೆ ಇದೆ. ಇಂದು ವಿಪರೀತ ಜ್ವರ. ರಕ್ತಪರೀಕ್ಷೆ ಮಾಡಿದಾಗ ಟೈಫಾಯಿಡ್ ಜ್ವರ ಎಂದಾಯ್ತು. ಎಲ್ಲಾ ಕ್ಲಾಸ್‌ಟೆಸ್ಟ್‌ಗಳಲ್ಲಿ ಇವನು ಕ್ಲಾಸಿಗೇ ಫಸ್ಟ್ ಬಂದಿದ್ದರಿಂದ ಅದರ ಆಧಾರದ ಮೇಲೆ ಇವನಿಗೆ ಪ್ರಮೋಷನ್ ಕೊಟ್ಟರು. ಎಸ್ಸೆಸ್ಸೆಲ್ಸಿಯಲ್ಲಿ ಆ ಸೌಲಭ್ಯ ಎಲ್ಲಿ ಇರಬೇಕು. ಪರೀಕ್ಷೆ ದೆವ್ವ ಭೂತವಲ್ಲ ಧೈರ್ಯವಾಗಿರು ಎಂದು ಹೇಳಿದರೆ, ಕೇಳುವುದಿಲ್ಲ. ಕಡಿಮೆ ಮಾರ್ಕ್ಸ್ ಬಂದರೆ ಅವಮಾನವಲ್ಲವೇ ಎನ್ನುತ್ತಾನೆ. ನೀವೇ ಅವನಿಗೆ ತಿಳುವಳಿಕೆ ಹೇಳಬೇಕು. ನಾವು ಅವನ ಮೇಲೆ ಯಾವ ಒತ್ತಡವನ್ನೂ ಹಾಕಿಲ್ಲ. ಆದರೆ ನಮ್ಮ ಮಾವನವರು ಅಂದರೆ ಇವನ ತಂದೆಯ ತಂದೆ ಇವನನ್ನು ಕಂಡರೆ ಸಾಕು ರೇಗಿಸುತ್ತಿರುತ್ತಾರೆ. ಅವರ ಇಬ್ಬರು ಮೊಮ್ಮಕ್ಕಳೂ ಎಸ್ಸೆಸ್ಸೆಲ್ಸಿಯಲ್ಲಿ ರ್‍ಯಾಂಕ್ ಬಂದವರು. ನೀನೂ ರ್‍ಯಾಂಕ್ ಬಂದರೆ ನೀನು ನನ್ನ ನಿಜವಾದ ಮೊಮ್ಮಗ. ನಿನಗೆ ಅದು ಸಾಧ್ಯವಿಲ್ಲ ಬಿಡು. ನಿನ್ನಲ್ಲಿ ಕಷ್ಟ ಪಡುವ ಗುಣವಿಲ್ಲ ಎನ್ನುತ್ತಿರುತ್ತಾರೆ. ಹಾಗೆನ್ನಬೇಡಿ ಎಂದು ಹಿರಿಯರಾದ ಅವರಿಗೆ ಹೇಗೆ ಹೇಳುವುದು ಎಂದು ಪೇಚಾಡಿಕೊಂಡರು ಸುಧೀಂದ್ರನ ತಾಯಿ.

### ನಿಮಗೆ ಗೊತ್ತೆ ?

* ಜನಸಂಖ್ಯೆಯ ಶೇಕಡಾ ಮೂರರಷ್ಟು ಮಕ್ಕಳಿಗೆ ಐಕ್ಯೂ 70ಕ್ಕಿಂತ ಕಡಿಮೆ ಇದ್ದು, ಅವರು ಬುದ್ಧಿಮಾಂದ್ಯರಾಗಿರುತ್ತಾರೆ. ಶೇ. 14ರಷ್ಟು ಮಂದಿಗೆ ಐಕ್ಯೂ 70ರಿಂದ 84 ಇರುತ್ತದೆ. ಆನುವಂಶಿಕವಾಗಿಯೋ, ಗರ್ಭಧಾರಣೆ ಅವಧಿಯಲ್ಲೋ, ಹೆರಿಗೆಯಾಗುವಾಗಲೋ, ಹುಟ್ಟಿದ ನಂತರ ಮೊದಲ ಐದು ವರ್ಷಗಳ ಅವಧಿಯಲ್ಲೋ, ಹತ್ತಾರು ಕಾರಣಗಳಿಂದ [illegible] ಕಲಿಯುವ, ಕಲಿತದ್ದನ್ನು ನೆನಪಿನಲ್ಲಿಟ್ಟುಕೊಳ್ಳುವ, ಕಲಿತದ್ದನ್ನು [illegible] ಸರಾಗವಾಗಿ ಹೇಳುವ ಸಾಮರ್ಥ್ಯ ಕಡಿಮೆ [illegible]

* ಜನಸಂಖ್ಯೆಯ ಶೇ. 12ರಷ್ಟು ಮಂದಿಗೆ ಓದುವ, ಬರೆಯುವ ಮತ್ತು ಲೆಕ್ಕ ಮಾಡುವ ಸಾಮರ್ಥ್ಯ ಕಡಿಮೆ ಇರುತ್ತದೆ. ಅವರಿಗೆ ಅಕ್ಷರಗಳನ್ನು ಗುರುತಿಸುವುದು ಕಷ್ಟ. ವೇಗವಾಗಿ. ಅಂದವಾಗಿ ಬರೆಯುವುದು ಕಷ್ಟ. ಕೂಡು, ಕಳೆ, ಗುಣಾಕಾರ, ಭಾಗಾಕಾರ ಇತ್ಯಾದಿ ಗಣಿತದ ಸೂಕ್ಷ್ಮತೆಗಳು ಅರ್ಥವಾಗುವುದಿಲ್ಲ. ಎಡ ಬಲ, ಹಿಂದೆ ಮುಂದೆ, ಮೇಲೆ ಕೆಳಗೆ ಇತ್ಯಾದಿ ಸ್ಥಾನೀಯ ಮಾಹಿತಿ ತಿಳಿಯುವುದಿಲ್ಲ. 'ಡಿಸ್‌ಲೆಕ್ಸಿಯ' ಎಂದು ಕರೆಯಲ್ಪಡುವ ಈ ಸ್ಥಿತಿ ಪ್ರತಿಭಾವಂತ ಮಕ್ಕಳಲ್ಲೂ ಇರುತ್ತದೆ. ಸಹಜವಾಗಿ ಇವರು ಇತರರಂತೆ ಓದಲಾರರು, ಬರೆಯಲಾರರು, ಬರವಣಿಗೆಯ ಮೂಲಕ ಮಾಡುವ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲಾರರು.
* ವಿಜ್ಞಾನ, ತಂತ್ರಜ್ಞಾನ, ಬಹುಭಾಷಾ ಸಾಮರ್ಥ್ಯ, ಗಣಿತ ಇವೆಲ್ಲ ಎಡ ಮಿದುಳಿನ ಸಾಮರ್ಥ್ಯಗಳು. ಭಾವನೆ, ಸಂಗೀತ, ನೃತ್ಯ, ಚಿತ್ರಕಲೆ , ಸೌಂದರ್ಯ ಪ್ರಜ್ಞೆಗಳೆಲ್ಲ ಬಲ ಮಿದುಳಿನ ಸಾಮರ್ಥ್ಯಗಳು. ಸಾಕಷ್ಟು ಮಕ್ಕಳಲ್ಲಿ ಎಡಮಿದುಳು ಸಮರ್ಪಕವಾಗಿ ಬೆಳೆದಿರುವುದಿಲ್ಲ. ಅವರಿಗೆ ಸಹಜವಾಗಿ, ಬೇರೊಂದು ಭಾಷಾ ಮಾಧ್ಯಮ (ಉದಾ: ಇಂಗ್ಲಿಷ್) ವಿಜ್ಞಾನ ಮತ್ತು ಗಣಿತ ಕಷ್ಟವಾಗುತ್ತದೆ. ಆದರೆ ಅವರಿಗೆ ಲಲಿತ ಕಲೆಗಳನ್ನು ಕಲಿಯುವುದು ಸುಲಭ. ದುರಾದೃಷ್ಟವೆಂದರೆ, ತಂದೆ-ತಾಯಿಗಳಾಗಲಿ, ಸಮಾಜವಾಗಲಿ ಲಲಿತಕಲೆಗಳಿಗೆ ಮಾನ್ಯತೆ, ಸ್ಥಾನಮಾನ ಕೊಡುವುದಿಲ್ಲ. ಇಂಗ್ಲಿಷ್ ಮಾತಾಡುವುದು, ವಿಜ್ಞಾನ, ಗಣಿತದಲ್ಲಿ ಹೆಚ್ಚು ಮಾರ್ಕ್ಸ್ ತೆಗೆಯುವುದು, ವೈದ್ಯಕೀಯ, ಇಂಜನಿಯರಿಂಗ್ ಕೋರ್ಸ್‌ಗೆ ಸೇರುವುದು ಇವಕ್ಕೇ ಮಾನ್ಯತೆ.
* ಶೇ. 50ರಷ್ಟು ವಿದ್ಯಾರ್ಥಿಗಳು ನಕಾರಾತ್ಮಕ ಭಾವನೆಗಳಿಂದ ಬಳಲುತ್ತಾರೆ. ಕೀಳರಿಮೆ, ಆತ್ಮವಿಶ್ವಾಸ - ಸ್ವಾಭಿಮಾನದ ಕೊರತೆ, ಅತಿಕೋಪ, ಬೇಸರ, ದುಃಖ, ಭಯ, ಆತಂಕ, ನಾಚಿಕೆಗಳಿಂದಾಗಿ, ತಮ್ಮ ಸಹಜ ನೈಸರ್ಗಿಕ ಬುದ್ಧಿ ಸಾಮರ್ಥ್ಯಗಳನ್ನು ಪ್ರದರ್ಶಿಸಲಾರರು.
* ಶೇ. 40ರಷ್ಟು ಮಕ್ಕಳು ಪೌಷ್ಟಿಕಾಂಶಗಳ ಕೊರತೆ, ಅನೀಮಿಯಾ, ಕಿವಿ ಸೋಂಕು, ಹಲ್ಲು ಹುಳುಕು, ದೃಷ್ಟಿ ದೋಷ, ಹೊಟ್ಟೆಯಲ್ಲಿ ಜಂತು. ಪದೇ ಪದೇ ರೋಗಾಣುಗಳ ಸೋಂಕಿನಿಂದ ಬಳಲಿ, ಕಲಿಯುವುದರಲ್ಲಿ ಹಿಂದೆ ಬೀಳುತ್ತಾರೆ.
* ಸಾಕಷ್ಟು ಸಂಖ್ಯೆಯ ಮಕ್ಕಳು (ನಿಖರವಾದ ಸಂಖ್ಯೆ ಏನೆಂದು ನಮ್ಮ ದೇಶದಲ್ಲಿ ಅಧ್ಯಯನಗಳು ನಡೆದಿಲ್ಲ) ಮನೆಯವರಿಂದ, ಪರಿಚಿತ, ಅಪರಿಚಿತರಿಂದ ಲೈಂಗಿಕ ಅತ್ಯಾಚಾರ ಶೋಷಣೆಗೆ ಒಳಗಾಗುತ್ತಾರೆ. ಅದರ ಬಗ್ಗೆ ಹೇಳಲು ದೂರಲು ಅವರಿಗೆ ಬಾಯಿಲ್ಲ, ಧೈರ್ಯವೂ ಇರುವುದಿಲ್ಲ.

ಈ ಎಲ್ಲಾ ಕಾರಣಗಳಿಂದ ಕನಿಷ್ಠ ಶೇ. 20ರಷ್ಟು ಮಕ್ಕಳು ವಿವಿಧ ಮಾನಸಿಕ ರೋಗಗಳಿಂದ ಬಳಲುತ್ತಾರೆ. ಈ

> ಮಕ್ಕಳನ್ನು ಪಂದ್ಯದ ಕುದುರೆಗಳಂತೆ ಬೆಳೆಸಬೇಕೆಂಬ ಹಂಬಲದಿಂದ ತಾಯಿ-ತಂದೆಯರು ಅವರ ವ್ಯಕ್ತಿತ್ವಕ್ಕೆ ಊನ ಉಂಟುಮಾಡುತ್ತಿದ್ದಾರೆ. 'ಮಕ್ಕಳ ದಿನಾಚರಣೆ' ವರ್ಷಕ್ಕೊಮ್ಮೆ; ಆದರೆ ದಿನಾಲೂ ಮಕ್ಕಳಿಗೆ ಬೇನೆಯುಂಟಾಗುವಷ್ಟು ಶಿಕ್ಷೆ.

ಮಾನಸಿಕ ಅಸ್ವಸ್ಥತೆಗಳು ಮಕ್ಕಳಲ್ಲಿ ಕೆಳಕಾಣುವ ನಡೆವಳಿಕೆ ತೊಂದರೆಗಳನ್ನುಂಟುಮಾಡಬಲ್ಲವು.

1. ಅತಿಯಾದ ಮಂಕುತನ, ನಿಷ್ಕ್ರಿಯತೆ.
2. ಅತಿಯಾದ ತೀಟೆ, ಚಟುವಟಿಕೆ.
3. ಶಾಲೆಗೆ ಹೋಗಲು, ಕಲಿಯಲು ನಿರಾಸಕ್ತಿ ಶಾಲೆಗೆ ಚಕ್ಕರ್ ಹೊಡೆಯುವುದು.
4. ಸಿಟ್ಟು, ಕೋಪ, ಹಠ, ಅವಿಧೇಯತನ, ಪ್ರತಿಭಟನೆ ಇತ್ಯಾದಿ.
5. ಸುಳ್ಳು ಹೇಳುವುದು, ಕಳ್ಳತನ, ಹಿಂಸಾಚಾರದಲ್ಲಿ ತೊಡಗುವುದು.
6. ವಿಪರೀತ ಆತಂಕ ಭಯಪಡುವುದು. ಸ್ಪರ್ಧೆಯಲ್ಲಿ ಭಾಗವಹಿಸಲು ಹಿಂಜರಿಯುವುದು. ಸ್ಪರ್ಧೆ, ಪರೀಕ್ಷೆಗಳಲ್ಲಿ ವಿಫಲನಾಗುವುದು.
7. ಆಹಾರ ಸೇವನೆಯಲ್ಲಿ ವ್ಯತ್ಯಾಸ, ತಿನ್ನಬೇಕಾದ್ದನ್ನು ತಿನ್ನಲು ನಿರಾಕರಿಸುವುದು. ತಿನ್ನಬಾರದ ವಸ್ತುಗಳನ್ನು (ಮಣ್ಣು, ಕಾಗದ, ಸೀಮೆಸುಣ್ಣ , ಇದ್ದಿಲು, ಗಾರೆ, ಹಸಿ ಅಕ್ಕಿ, ಕಾಳುಗಳು ಇತ್ಯಾದಿ) ತಿನ್ನುವುದು.
8. ನಿದ್ರಾ ತೊಂದರೆಗಳು: ನಿದ್ರೆಯಲ್ಲಿ ಮಾತನಾಡುವುದು, ಕಿರಿಚಿಕೊಳ್ಳುವುದು, ಹಲ್ಲು ಕಡಿಯುವುದು, ನಿದ್ರೆಯಲ್ಲಿ ಹಾಸಿಗೆಯಲ್ಲಿ ಮೂತ್ರ ಮಾಡಿಕೊಳ್ಳುವುದು.
9. ತಲೆ ನೋವು, ಹಲ್ಲು ನೋವು, ಹೊಟ್ಟೆ ನೋವು ಇತ್ಯಾದಿ ಅಸ್ಪಷ್ಟ ಶಾರೀರಿಕ ನೋವುಗಳಿಂದ ನರಳುವುದು.

ಈ ಅನೇಕ ನಡೆವಳಿಕೆಗಳು ಪಾಲಕ-ಪೋಷಕ ಮತ್ತು ಶಿಕ್ಷಕರನ್ನು ಕೆರಳಿಸುತ್ತವೆ. ಈ ಮಕ್ಕಳನ್ನು ಸೋಮಾರಿ, ಕೆಟ್ಟವರು, ಕೆಲಸಕ್ಕೆ ಬಾರದವರು, ಮೂರ್ಖರು ಎಂದು ಜರೆಯುವಂತೆ ಮಾಡುತ್ತವೆ. ಬೆದರಿಕೆಯಿಂದ ಶಿಕ್ಷೆಯಿಂದ ಈ ಮಕ್ಕಳು ಇನ್ನಷ್ಟು ಸಮಸ್ಯೆಯಾಗುತ್ತಾರೆ. ಅವರ ಬದುಕು ಭವಿಷ್ಯವು ಹಳಿ ತಪ್ಪುತ್ತದೆ. ಇದನ್ನು ತಪ್ಪಿಸಬೇಕು.

### ಹನಿಗವನ

**ಕ(ಕಿ)ವಿ**

ಜೀವನದಲ್ಲಿ
ನಾ ಆಗಬಾರದಾಗಿತ್ತು
ಕವಿ;
ಆಗಿರುವುದಕ್ಕೆ
ನನ್ನಿಂದ ಕೆಲವರಿಗೆ
ಕೇಳದಂತಾಗಿದೆ
ಕಿವಿ.

*- ಪಾಂಡವಪುರ ಮಂಜುನಾಥ್*

**ಹಿಂಸೆಯಿಂದ ಮಕ್ಕಳನ್ನು ಪಾರುಮಾಡಿ**

1. ನಿಮ್ಮ ಮಕ್ಕಳ ಬುದ್ಧಿ ಸಾಮರ್ಥ್ಯ, ಆಸೆ, ಅಭಿರುಚಿಗಳನ್ನು ಸೂಕ್ಷ್ಮವಾಗಿ ಗಮನಿಸಿ. ಅವರು ಎಡ ಮಿದುಳು ಚುರುಕಾಗಿರುವ ವ್ಯಕ್ತಿಗಳೇ ಅಥವಾ ಬಲಮಿದುಳು ಚುರುಕಾಗಿರುವವರೇ ನಿಮಗೆ ತಿಳಿಯುತ್ತದೆ. ಅವರಿಗೆ ಡಿಸ್‌ಲೆಕ್ಸಿಯಾದಂತಹ ವಿಶೇಷ ಕಲಿಕೆ ಸಮಸ್ಯೆಗಳಿವೆಯೇ ಎಂಬುದನ್ನು ಗುರುತಿಸಿ. ಅವರ ವೇಗದಲ್ಲೇ ಅವರು ಕಲಿಯಲು ಬಿಡಿ.
2. ಕಲಿಕೆ, ಪರೀಕ್ಷಾ ನಿರ್ವಹಣೆ, ಮಾರ್ಕ್ಸ್, ರ್‍ಯಾಂಕ್ ಬಗ್ಗೆ ಅತಿಯಾದ ಆಮಿಷ, ಒತ್ತಡವನ್ನು ಹಾಕಬೇಡಿ. ಅವರ ಸಹಜ ನಿರ್ವಹಣೆಯನ್ನು ಗಮನಿಸಿ. ಅದನ್ನು ಸ್ವಲ್ಪ ಸ್ವಲ್ಪವಾಗಿ ಉತ್ತಮ ಪಡಿಸಿಕೊಳ್ಳಲು ಪ್ರೋತ್ಸಾಹಿಸಿ. ನಿಮ್ಮ ಮಗುವಿನ ಜೊತೆ ಇನ್ನೊಂದು ಮಗುವನ್ನು ಹೋಲಿಸಬೇಡಿ. ಸಹಪಾಠಿಗಳು, ಸೋದರ ಸೋದರಿಯರೊಂದಿಗೆ ಸಹಕರಿಸಿ ಬದುಕಲು ಕಲಿಸಿ.
3. ಮಕ್ಕಳ ನಡವಳಿಕೆಯನ್ನು ತಿದ್ದಲು, ಬದಲಿಸಲು ಶಿಕ್ಷೆಯನ್ನು ಬಳಸಬೇಡಿ. ಶಿಕ್ಷೆ ಕೊಡಬೇಕಾಗಿ ಬಂದಾಗ, ದೇಹದಂಡನೆ ಮಾಡಬೇಡಿ. ಇತರರ ಮುಂದೆ ಹೀನಾಯವಾಗಿ ಶಿಕ್ಷೆ ಕೊಡಬೇಡಿ.
4. ನಿಮ್ಮ ಮಕ್ಕಳಿಗೆ, ನಿಮ್ಮ ಮಾತೃಭಾಷೆಯಲ್ಲೇ ಶಿಕ್ಷಣ ಕೊಡಿಸಿ. ಹತ್ತನೇ ತರಗತಿಯ ನಂತರ, ಅಗತ್ಯ ಬಿದ್ದರೆ, ಸಾಮರ್ಥ್ಯವಿದ್ದರೆ, ಹಲವು ಭಾಷೆಗಳನ್ನು ಕಲಿಸಿ. ವಿಜ್ಞಾನವೋ, ಕಲೆಯೋ, ವಾಣಿಜ್ಯವೋ ಅವರೇ ಆಯ್ಕೆ ಮಾಡಲಿ.
5. ಎಲ್ಲ ಮಕ್ಕಳೂ ಡಾಕ್ಟರ್ ಇಂಜಿನಿಯರ್ ಆಗೇ ಬದುಕಬೇಕಿಲ್ಲ, ಹಾಗೆ ಬದುಕಲೂ ಸಾಧ್ಯವಿಲ್ಲ, ವಿವಿಧ ಉದ್ಯೋಗ, ವಿವಿಧ ಕಲಾಪ್ರಕಾರಗಳ ಬಗ್ಗೆ ನಿಮ್ಮ ಮಕ್ಕಳಿಗೆ ಪರಿಚಯಿಸಿ. ಅವುಗಳಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳಲಿ.
6. ಮಕ್ಕಳೊಂದಿಗೆ ಪ್ರತಿದಿನ ಸ್ವಲ್ಪ ಹೊತ್ತು ಮಾತನಾಡಿ, ಆಟವಾಡಿ. ಅವರ ಕಷ್ಟ ಸುಖಗಳನ್ನು ಕೇಳಿ. ಅವರಿಗೆ ವಾಸ್ತವಿಕತೆಯ ಅರಿವು ಮಾಡಿಕೊಡಿ.
7. ಆರೋಗ್ಯಕರ ಹವ್ಯಾಸ, ಸೃಜನಶೀಲ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ನೆರವಾಗಿ. ಅವರ ಸಣ್ಣಪುಟ್ಟ ಸಾಧನೆಗಳನ್ನು ಗುರುತಿಸಿ ಶ್ಲಾಘಿಸಿ.

**ಡಾ|| ಸಿ. ಆರ್. ಚಂದ್ರಶೇಖರ್**
ಟೈಪ್-೫, ಬ್ಲಾಕ್ ೨, ಕ್ವಾರ್ಟರ್ಸ್ ನಂ. ೧೫, ನಿಮ್ಹಾನ್ಸ್ ಕ್ವಾರ್ಟರ್ಸ್
ಬೆಂಗಳೂರು- ೫೬೦ ೦೨೯

# ಬಾಲಕಾರ್ಮಿಕರ ಬವಣೆಗೆ ಕೊನೆ ಎಂದು?

ಮುರಳೀಧರ್

ಹೊಲ ಗದ್ದೆಗಳಲ್ಲಿ, ಗುಡಿ ಕೈಗಾರಿಕೆಗಳಲ್ಲಿ, ಕುಶಲ ಕೆಲಸ ಉದ್ದಿಮೆಗಳಲ್ಲಿ, ಮಗ್ಗಗಳಲ್ಲಿ, ಮನೆ-ಮನೆಗಳಲ್ಲಿ, ಗ್ಯಾರೇಜುಗಳಲ್ಲಿ, ಹೋಟೆಲ್‌ಗಳಲ್ಲಿ, ಶಿವಕಾಶಿಯ ಪಟಾಕಿ ಉದ್ದಿಮೆಗಳಲ್ಲಿ, ಬೆಂಕಿಕಡ್ಡಿ, ಅಗರಬತ್ತಿ, ಬೀಡಿ ಉದ್ದಿಮೆಗಳಲ್ಲಿ, ನಿರ್ಮಾಣ ಕೆಲಸಗಳಲ್ಲಿ, ಫ್ಯಾಕ್ಟರಿಗಳಲ್ಲಿ ತಮ್ಮ ಅಸ್ತಿತ್ವವನ್ನು ಮರೆತು ಕೆಲಸ ಮಾಡುವ ನಾಲ್ಕರಿಂದ ಹದಿನಾಲ್ಕು ವರ್ಷ ವಯಸ್ಸಿನ ದುಡಿಯುವ ಮಕ್ಕಳ ವರ್ತಮಾನ ದರಿದ್ರ, ಹಾಗೂ ಭವಿಷ್ಯ ಶೂನ್ಯ. ಬಾಲ್ಯದಲ್ಲೇ ಬಾಲ್ಯಾವಸ್ಥೆ ಕಳೆದುಕೊಂಡ ನತದೃಷ್ಟರು ಇವರು. ಬಾಲ್ಯದಲ್ಲೇ ವಯಸ್ಕರಾದ ಈ ಮಕ್ಕಳ ಅವಸ್ಥೆ ನಮ್ಮ ಸಮಾಜದ ಕ್ರೌರ್ಯಕ್ಕೆ, ಅಸಮಾನತೆಗೆ, ಅವ್ಯವಸ್ಥೆಗೆ ಹಿಡಿದ ಕನ್ನಡಿ. ನಮ್ಮೆಲ್ಲರ ಆತ್ಮಸಾಕ್ಷಿಗೆ ಸವಾಲಾಗಿ ಕಾಡ ಬೇಕಾದ ಪ್ರಶ್ನೆಗಳೆಂದರೆ, ಈ ಮುಗ್ಧ ಮಕ್ಕಳ ಶೋಷಣೆ, ಅವರನ್ನು ಬಾಲ್ಯಾವಸ್ಥೆಯಿಂದ ವಂಚಿಸಿರುವುದು, ಅವರ ಹಕ್ಕುಗಳ ವಂಚನೆಯಲ್ಲವೆ ? ಈ ಮಕ್ಕಳು ದೇಶವನ್ನು ಪ್ರೀತಿಸಬೇಕೆಂದು ನಾವು ನಿರೀಕ್ಷಿಸಬಹುದೆ ? ಈ ಮಕ್ಕಳಿಗೆ ಮಕ್ಕಳಾಗಿ ಬಾಳುವ ಅವಕಾಶ ಕಲ್ಪಿಸಿ ಕೊಡುವುದು ಸಮಾಜದ ಜವಾಬ್ದಾರಿಯಲ್ಲವೆ ? ಬಾಲಕಾರ್ಮಿಕರ ಸಮಸ್ಯೆ ಬೆಳೆಯುತ್ತಿರುವುದು ಮತ್ತು ಅದರೊಂದಿಗೆ ಹುಟ್ಟುತ್ತಿರುವ ಹೊಸ ಹೊಸ ಸಮಸ್ಯೆಗಳು ಸಮಾಜದ ವ್ಯವಸ್ಥೆಯ ವಿಫಲತೆ ಹಾಗೂ ಅರ್ಥಹೀನ ಅಧಃಪತನದ ಸಂಕೇತವಲ್ಲವೆ ? ಬಾಲಕಾರ್ಮಿಕರ ಶೋಷಣೆ ಮಾನವ ಹಕ್ಕುಗಳ ಉಲ್ಲಂಘನೆ ಎಂಬುದಂತು ಪ್ರಶ್ನಾತೀತ.

### ಸಮಸ್ಯೆಯ ಅಗಾಧತೆ ಮತ್ತು ಗಂಭೀರತೆ

ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆಯ ಅಂದಾಜಿನ ಪ್ರಕಾರ ಪ್ರಪಂಚದಾದ್ಯಂತ ಐದು ವರ್ಷದಿಂದ ಹದಿನಾಲ್ಕು ವರ್ಷದೊಳಗಿರುವ ದುಡಿಯುವ ಮಕ್ಕಳ ಸಂಖ್ಯೆ ಸುಮಾರು ಇಪ್ಪತ್ತೈದು ಕೋಟಿ. ಇದರಲ್ಲಿ ಸುಮಾರು ಹನ್ನೆರಡು ಕೋಟಿ ಮಕ್ಕಳು ಪೂರ್ಣಾವಧಿ ಕೆಲಸಗಳಲ್ಲಿ ತೊಡಗಿದ್ದಾರೆ. ಸುಮಾರು ಎಂಟು ಕೋಟಿಗೂ ಹೆಚ್ಚು ಮಕ್ಕಳು ಅಪಾಯಕಾರಿ ಕೆಲಸಗಳಲ್ಲಿ ನೂಕಲ್ಪಟ್ಟಿದ್ದಾರೆ. ದಕ್ಷಿಣ ಏಷ್ಯಾ ಖಂಡ ಬಾಲ ಕಾರ್ಮಿಕರ ಶೋಷಣೆಯ ಒಂದು ದೊಡ್ಡ ಬೀಡಾಗಿದೆ.

ಅತಿದೊಡ್ಡ ಸಂಖ್ಯೆಯ ಬಾಲಕಾರ್ಮಿಕರನ್ನು ಹೊಂದಿರುವ ದೇಶವೆಂಬ ಅಪಕೀರ್ತಿ ಭಾರತಕ್ಕೆ ಸಲ್ಲುತ್ತದೆ. ನಿರ್ದಿಷ್ಟವಾದ ಸಂಖ್ಯೆ ಉಪಲಬ್ಧವಿಲ್ಲದಿದ್ದರೂ, ಸರಕಾರದ ಅಂದಾಜಿನ ಪ್ರಕಾರ ಐದರಿಂದ ಹದಿನಾಲ್ಕು ವರ್ಷದೊಳಗಿರುವ ದುಡಿಯುವ ಮಕ್ಕಳ ಸಂಖ್ಯೆ ಸುಮಾರು ಎರಡು ಕೋಟಿಯಿರಬಹುದು. ಇದರಲ್ಲಿ ಸುಮಾರು ೯೦ರಷ್ಟು ಬಾಲಕಾರ್ಮಿಕರು ಗ್ರಾಮೀಣ ಪ್ರದೇಶಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಬೇಸಾಯ, ಕೃಷಿಕೂಲಿ, ಗೃಹಕೈಗಾರಿಕೆ, ಕುಶಲ-ಕೆಲಸ ಇತ್ಯಾದಿಗಳಲ್ಲಿ ಬಾಲಕಾರ್ಮಿಕರ ಅಳವಡಿಕೆ ಹೆಚ್ಚಿನ ಸಂಖ್ಯೆಯಲ್ಲಿದೆ. ನಗರ-ಪಟ್ಟಣ ಪ್ರದೇಶಗಳಲ್ಲಿ ಬಾಲಕಾರ್ಮಿಕರು ಬೀಡಿ,



ಅಗರಬತ್ತಿ, ಪಟಾಕಿ, ಬೆಂಕಿಕಡ್ಡಿ ಇತ್ಯಾದಿ ಉದ್ದಿಮೆಗಳಲ್ಲಿ ಮಗ್ಗಗಳಲ್ಲಿ, ಹೋಟೆಲ್‌ಗಳಲ್ಲಿ ಕೆಲಸ ಮಾಡುವುದು ಸಾಮಾನ್ಯ ದೃಶ್ಯ.

ಆಟ-ಪಾಠಗಳಲ್ಲಿ ತಲ್ಲೀನರಾಗಬೇಕಾಗಿದ್ದ ಈ ಮಕ್ಕಳನ್ನು ಶ್ರಮಜೀವಿಗಳನ್ನಾಗಿಸುವ ಕಾರಣಗಳೇನು ? ಈ ಪದ್ಧತಿಯ ಉಗಮ ಹಾಗೂ ನಿರಂತರತೆಗೆ ಕಾರಣ ಬಡತನ, ಅನಕ್ಷರತೆ, ಅಶಕ್ತ ಕಾನೂನು, ನಿಷ್ಕ್ರಿಯ ಹಾಗೂ ಲಂಚಕೋರ ಅಧಿಕಾರಶಾಹಿ. ಈ ಪದ್ಧತಿಗೆ ಸಮಾಜದ ಸಮ್ಮತಿ ಇದ್ದಂತಿದೆ ಹಾಗೂ ರಾಜಕೀಯ ಸಂಕಲ್ಪದ ಅಭಾವವಿದೆ. ಬಾಲಕಾರ್ಮಿಕರ ಸಮಸ್ಯೆ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಸಮಸ್ಯೆ ಎಂಬುದು ನಿರ್ವಿವಾದ. ಅಂದರೆ ಈ ಸಮಸ್ಯೆಯ ನಿವಾರಣೆ ಬೇರೆಲ್ಲ ಸಮಸ್ಯೆಗಳ ನಿವಾರಣೆಯ ಜೊತೆ ಜೋಡಿಸಲ್ಪಟ್ಟಿದೆ.

> ಬಾಲಕರನ್ನು ಕಾರ್ಮಿಕರನ್ನಾಗಿಸಿಕೊಳ್ಳುವುದು ಅಪರಾಧವೆಂದು ಘೋಷಿಸಿ ಅದನ್ನು ಉಲ್ಲಂಘಿಸಿದವರಿಗೆ ಶಿಕ್ಷೆ ವಿಧಿಸುವಂತಾದರೆ ನಮ್ಮ ಸಂವಿಧಾನದಲ್ಲಿ ಹೇಳಿರುವಂತೆ ಬಾಲಕರು ದುಡಿಮೆಯ ನಿರ್ಬಂಧಕ್ಕೆ ಸಿಲುಕುವುದನ್ನು ತಪ್ಪಿಸಬಹುದೆಂಬ ಭಾವನೆ ಕೆಲವರಲ್ಲಿದೆ. ದೇಶದ ಆರ್ಥಿಕ ನೀತಿಗಳನ್ನು ಸಮಗ್ರವಾಗಿ ಪರಿಶೀಲಿಸದೆ ಇಂತಹ ಸರಳ ವಿಧಾನಗಳನ್ನು ಎತ್ತಿಹಿಡಿಯುವುದು ಬಾಲಿಶವಾದ್ದು, ಅವ್ಯಾವಹಾರಿಕವಾದ್ದು. ನೈತಿಕತೆ ಮತ್ತು ಸಂವಿಧಾನದ ಆಶಯ ಒಂದೇ ಗುರಿಯನ್ನು ಹೊಂದಿವೆ. ಆದರೆ ಅದು ಕಾರ್ಯಗತವಾಗಲು ಪೂರ್ವಭಾವಿಯಾಗಿ ಮಾಡಬೇಕಾದ್ದು ಕೇವಲ ಕಾನೂನಿನ ಪರಿಧಿಗೆ ಸೇರುವಂಥದಲ್ಲ. ಅದು ಸಾಮಾಜಿಕ-ಆರ್ಥಿಕ ಆಯಾಮಗಳನ್ನು ಹೊಂದಿದೆ.

### ಬಡತನ-ನಿರಕ್ಷರತೆ : ಮೂಲ ಕಾರಣ

ಮಕ್ಕಳು ದುಡಿಯುವ ಅಗತ್ಯ ಕುಟುಂಬದ ಬಡತನದಿಂದ ಹುಟ್ಟಿಬರುತ್ತದೆ. ಕುಟುಂಬದ ಆದಾಯ ಬಡತನ ರೇಖೆಗಿಂತ ಕೆಳಗಿರುವ ಸಂದರ್ಭದಲ್ಲಿ ಮಕ್ಕಳು ಕೃಷಿ ಕಾರ್ಮಿಕರಾಗಿ, ಜಮೀನ್ದಾರರ ಮನೆಗಳಲ್ಲಿ ಜೀತದಾಳುಗಳಾಗಿ ಕೆಲಸ ಮಾಡುವಂತಹ ಪರಿಸ್ಥಿತಿಯು ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬಂದರೆ, ನಗರ-ಪಟ್ಟಣ ಪ್ರದೇಶಗಳಲ್ಲಿ ಕುಟುಂಬಗಳ ಪರಿಸ್ಥಿತಿ ಇನ್ನೂ ಹೀನಾಯವಾಗಿರುವುದು ಕಂಡುಬರುತ್ತದೆ. ಬಡತನದ ತೀಕ್ಷ್ಣತೆಯಿಂದಾಗಿ ತಮ್ಮ ಮಕ್ಕಳನ್ನು ಮಾರುವ ಸಂದರ್ಭಗಳೂ ಹೇರಳ. ಸುಮಾರು ೪೦ ಕೋಟಿಗೂ ಹೆಚ್ಚು ಜನರು ಬಡತನದ ರೇಖೆಯ ಕೆಳಗಿದ್ದಾರೆಂದರೆ, ಬಾಲಕಾರ್ಮಿಕ ಸಮಸ್ಯೆಯ ತೀವ್ರತೆಯ ಅರಿವಾದೀತು. ಬಡತನದ ನಿರ್ಮೂಲನವೆಂದರೆ ಜನತೆಗೆ ಉದ್ಯೋಗ, ಅವರ ಜೀವನಮಟ್ಟದ ಸುಧಾರಣೆ. ಇವು ಬಾಲಕಾರ್ಮಿಕರ ಸಮಸ್ಯೆಯ ನಿವಾರಣೆಯ ದಿಕ್ಕಿನಲ್ಲಿ ಬಹು ಮುಖ್ಯ ಅಂಶವಾಗುತ್ತದೆ. ಅದೇ ರೀತಿಯಲ್ಲಿ ಅನಕ್ಷರತೆಯು ಈ ಸಮಸ್ಯೆಯ ನಿರಂತರತೆಗೆ ಕಾರಣವಾಗಿದೆ. ಅನಕ್ಷರಸ್ಥ ತಂದೆ-ತಾಯಿಯರು, ಕುಟುಂಬದ ಸದಸ್ಯರು ಮಗುವಿನ ವಿದ್ಯಾಭ್ಯಾಸದ ಬಗ್ಗೆ ದಿವ್ಯ ನಿರ್ಲಕ್ಷ್ಯವನ್ನು ಹೊಂದಿರುವುದನ್ನು ಕಾಣಬಹುದು. ನಮ್ಮ ಶಿಕ್ಷಣ ವ್ಯವಸ್ಥೆ ಕೂಡ ಈ ಬಗ್ಗೆ ಗಮನ ಹರಿಸಲು ವಿಫಲವಾಗಿದೆ. ಹೀಗಾಗಿ ಮಕ್ಕಳು ಶಾಲೆಗೆ ಹೋಗುವ ಅವಕಾಶದಿಂದ ವಂಚಿತರಾಗಿದ್ದಾರೆ.

### ಸತ್ವಹೀನ ಕಾನೂನು - ಸ್ವಾರ್ಥ ಅಧಿಕಾರಶಾಹಿ

ಇನ್ನು ಕಾನೂನುಗಳ ಬಗ್ಗೆ ಹೇಳುವುದಾದಲ್ಲಿ, ನಮ್ಮ ಸಂವಿಧಾನವು ಹದಿನಾಲ್ಕು ವರ್ಷ ವಯಸ್ಸಿನೊಳಗಿರುವ ಮಕ್ಕಳನ್ನು ಯಾವುದೇ ಕಾರ್ಖಾನೆ, ಗಣಿ ಹಾಗೂ ಅಪಾಯಕಾರಿ ಕೆಲಸಗಳಲ್ಲಿ ನೇಮಕ ಮಾಡಬಾರದೆಂದು ಮತ್ತು ಈ ವಯಸ್ಸಿನೊಳಗಿನ ಎಲ್ಲ ಮಕ್ಕಳಿಗೂ ಉಚಿತ ಹಾಗೂ ಕಡ್ಡಾಯ ಶಿಕ್ಷಣ ನೀಡಬೇಕೆಂದು [illegible] ಫ್ಯಾಕ್ಟರಿ ಕಾಯಿದೆಯ ಪ್ರಕಾರ ೧೪ ವರ್ಷದೊಳಗಿನ ಮಕ್ಕಳ ನೇಮಕಾತಿಯನ್ನು ನಿಷೇಧಿಸಲಾಗಿದೆ. ೧೯೮೬ರಲ್ಲಿ ಬಂದಂತಹ "ಬಾಲಕಾರ್ಮಿಕ (ರದ್ದತಿ ಮತ್ತು ನಿಯಂತ್ರಣ) ಕಾಯಿದೆ, ೧೪ ವರ್ಷದೊಳಗಿನ ಮಕ್ಕಳನ್ನು ಕೆಲವು ಅಪಾಯಕಾರಿ ಕೆಲಸಗಳಿಗೆ ತೊಡಗಿಸುವುದನ್ನು [illegible]

ಕೊಟ್ಟಿದೆ. ಆದರೆ ಈ ಎಲ್ಲ ಕಾನೂನುಗಳು ಅನ್ವಯಿಸುವುದು ಕೇವಲ ಶೇಕಡ ೧೫ರಷ್ಟು ಬಾಲಕಾರ್ಮಿಕರಿಗೆ ಮಾತ್ರ. ಗ್ರಾಮೀಣ ಪ್ರದೇಶಗಳಲ್ಲಿರುವ ದುಡಿಯುವ ಮಕ್ಕಳು ಯಾವುದೇ ಕಾನೂನಿನ ವ್ಯಾಪ್ತಿಯಲ್ಲಿ ಬರುವುದಿಲ್ಲ. ಎಲ್ಲ ಬಾಲಕಾರ್ಮಿಕರನ್ನು ಒಳಗೊಳ್ಳುವ ಯಾವುದೇ ಸಮಗ್ರ ಕಾನೂನು ಈ ದೇಶದಲ್ಲಿಲ್ಲ. ಈಗಿರುವ ಕಾನೂನುಗಳೂ ಕೇವಲ ಅಧಿಕಾರಶಾಹಿಗೆ ದುಡ್ಡು ಮಾಡಲು ಇನ್ನೊಂದು ದಾರಿ ಮಾಡಿ ಕೊಟ್ಟಂತಾಗಿದೆ.

**ಸಮಾಜದ ಸಮ್ಮತಿ**

ಉಚ್ಚ-ನೀಚ ಎಂದು ವಿಂಗಡಿತವಾಗಿರುವ ನಮ್ಮ ಸಮಾಜದಲ್ಲಿ ಬಾಲಕಾರ್ಮಿಕ ಪದ್ಧತಿ ಅನಾದಿಕಾಲದಿಂದ ಹರಿದುಬಂದಿದೆ. ಕುಲುಮೆಗಳಲ್ಲಿ, ಮಗ್ಗಗಳಲ್ಲಿ, ಹೊಲ-ಗದ್ದೆಗಳಲ್ಲಿ, ಕುಶಲ ಕೆಲಸಗಳಲ್ಲಿ, ಮನೆ ಕೆಲಸಗಳಲ್ಲಿ, ಗುಡಿ ಕೈಗಾರಿಕೆಗಳಲ್ಲಿ, ಮಕ್ಕಳನ್ನು ದುಡಿಸಿಕೊಳ್ಳುವುದು ವ್ಯಾಪಕವಾಗಿ ಚಾಲ್ತಿಯಲ್ಲಿದ್ದು, ಇದಕ್ಕೆ ಒಂದು ರೀತಿಯ ಸಾಮಾಜಿಕ ಒಪ್ಪಿಗೆ ಸಿಕ್ಕಿದೆ. ನಮ್ಮ ಮನೆಗಳಲ್ಲಿ ಹೊರಗಿನ ಸಣ್ಣಮಕ್ಕಳು ಪಾತ್ರೆ ತಿಕ್ಕುವುದು, ಕಸ ಗುಡಿಸುವುದು, ಬಟ್ಟೆ ಒಗೆಯುವುದು, ಇತ್ಯಾದಿ ಕೆಲಸಗಳನ್ನು ಮಾಡುವುದು ಮತ್ತು ಅದೇ ಸಮಯದಲ್ಲಿ ನಮ್ಮ ಮಕ್ಕಳು ಟೀವಿ ಮುಂದೆ ಕುಳಿತು ಆನಂದದಿಂದಿದ್ದರೆ, ಈ ಅಸಮಾನತೆಯ ಬಗ್ಗೆ ನಮಗೆ ನಾಚಿಕೆ ಕೂಡ ಆಗದಷ್ಟು ಈ ಪದ್ಧತಿಯನ್ನು ಒಪ್ಪಿಕೊಂಡಿದ್ದೇವೆ. ಕೆಳಜಾತಿಯವರೆನ್ನುವ ಹಣೆಪಟ್ಟಿ ಧರಿಸಿದ ಮಕ್ಕಳು ದುಡಿಯುವುದು ಸಮಾಜದ ಕಳಂಕವಲ್ಲ ಎಂಬ ಅಭಿಪ್ರಾಯ ಹಿಂದಿನ ಕಾಲದಲ್ಲಿ ವ್ಯಾಪಕವಾಗಿದ್ದ ಕಾರಣದಿಂದಲೆ, ಪರಿಶಿಷ್ಟ ಜಾತಿ ಮತ್ತು ಬುಡಕಟ್ಟಿಗೆ ಸೇರಿದ ಬಾಲಕಾರ್ಮಿಕರ ಸಂಖ್ಯೆ ಅತಿ ಹೆಚ್ಚು.

**ಸಮಗ್ರ ಪರಿಹಾರ – ಮುಂದಿನ ಹಾದಿ**

ಬಾಲಕಾರ್ಮಿಕರಿಗೆ ಬೇಕಾಗಿರುವುದು ವೈಯಕ್ತಿಕ ಅನುಕಂಪವಲ್ಲ. ಈ ಶೋಷಣೆಯ ಪದ್ಧತಿಯನ್ನು ತೊಡೆದುಹಾಕಲು ಒಂದು ಸಾಮಾಜಿಕ ಆಂದೋಲನ ಮತ್ತು ಇವರ ಯೋಗಕ್ಷೇಮಕ್ಕಾಗಿ ದುಡಿಯುವ ಒಂದು ಸಮಾಜ ವ್ಯವಸ್ಥೆ ನಮಗೆ ಬೇಕು. ಈ ಸಮಸ್ಯೆ ಅಸಮಾನ ಸಮಾಜ ಹುಟ್ಟುಹಾಕಿರುವ ಅನೇಕ ಸಮಸ್ಯೆಗಳಲ್ಲೊಂದು. ಹಾಗೂ ಇದಕ್ಕೆ ಪರಿಹಾರ ಕೂಡ ಪ್ರತ್ಯೇಕವಾಗಿ ಕಂಡುಕೊಳ್ಳಲು ಸಾಧ್ಯವಿಲ್ಲ. ಎಲ್ಲಿಯವರೆಗೆ ಹದಿನಾಲ್ಕು ವರ್ಷದೊಳಗಿನ ಮಕ್ಕಳಿಗೆ ಕಡ್ಡಾಯ ಶಿಕ್ಷಣ ವ್ಯವಸ್ಥೆ ಜಾರಿಗೊಳಿಸುವುದಿಲ್ಲವೋ ಅಲ್ಲಿಯವರೆಗೆ ಬಾಲಕಾರ್ಮಿಕ ಪದ್ಧತಿಯನ್ನು ತೊಡೆದುಹಾಕಲು ಸಾಧ್ಯವಿಲ್ಲ ಎಂದು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ ಅಭಿಪ್ರಾಯಪಟ್ಟಿದೆ. ಸಮಗ್ರ ಪರಿಹಾರವನ್ನು ಸೂಚಿಸುವಲ್ಲಿ ಹಲವಾರು ಪ್ರಮುಖ ಸಂಸ್ಥೆಗಳು ಮುಂದೆಬಂದಿವೆ. ಪ್ರಮುಖವಾದ ಕಾರ್ಯಕ್ರಮಗಳೆಂದರೆ,

- ಮಕ್ಕಳು ಮಕ್ಕಳಾಗಿ ಬದುಕುವ ಹಕ್ಕನ್ನು ಅವರಿಗೆ ದೊರಕಿಸುವುದು.
- ಬಡತನ ನಿರ್ಮೂಲನಕ್ಕೆ ವಿಶೇಷ ಆರ್ಥಿಕ ಕಾರ್ಯಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಕಾರ್ಯಗತ ಮಾಡುವುದು.
- ಸಮಗ್ರ ಭೂ ಸುಧಾರಣಾ-ಗ್ರಾಮೀಣ ಅಭಿವೃದ್ಧಿ ಹಾಗೂ ಕೃಷಿಯ ಆಧುನಿಕತೆ.
- ೧೪ ವರ್ಷದೊಳಗಿನ ಎಲ್ಲ ಮಕ್ಕಳಿಗೂ ಉಚಿತ ಹಾಗೂ ಕಡ್ಡಾಯ ಶಿಕ್ಷಣ. ಎಲ್ಲ ಹಳ್ಳಿಗಳಲ್ಲೂ ಪ್ರಾಥಮಿಕ ಶಾಲೆ.
- ಸಮುದಾಯದ ಬೆಳವಣಿಗೆ - ವಯಸ್ಕರ ಶಿಕ್ಷಣ.
- ಬಾಲಕಾರ್ಮಿಕರ ಬಗ್ಗೆ ಸಮಗ್ರ ಸಶಕ್ತ ಕಾನೂನು ಮತ್ತು ಅನುಷ್ಠಾನ.

ಸಮಸಮಾಜದ ಪರಿಕಲ್ಪನೆ, ಶೋಷಣೆಯ ವಿರುದ್ಧ ಹೋರಾಡುವ ಮನೋಭಾವ, ಮಾನವ ಹಕ್ಕುಗಳನ್ನು ಗೌರವಿಸುವ ಸಂಸ್ಕೃತಿ ಮತ್ತು ರಾಜಕೀಯ ಸಂಕಲ್ಪವಿದ್ದಲ್ಲಿ ಬಾಲಕಾರ್ಮಿಕ ಪದ್ಧತಿಯನ್ನು ಅಂತ್ಯಗೊಳಿಸಲು ಸಾಧ್ಯ.

**ಮುರಳೀಧರ್**
ವಕೀಲರು, ಎ.ಐ.ಟಿ.ಯು.ಸಿ. ಕಾನೂನು ಘಟಕ, ವಿನಾಯಕ ಬಿಲ್ಡಿಂಗ್
ಸಂಪಿಗೆ ರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩.

# ಬಾರ್ಬರಾ ಮ್ಯಾಕ್‌ಕ್ಲಿಂಟಾಕ್

ನೊಬೆಲ್ ಪ್ರಶಸ್ತಿ ವಿಜೇತೆ

ವಿಜ್ಞಾನ ರಂಗದಲ್ಲಿ ಮಹಿಳೆ ಇಂದಿಗೂ ಕೂಡ ಅಲ್ಪಸಂಖ್ಯಾತಳು. ಮಹಿಳೆಯರಿಗೆ ವಿಜ್ಞಾನ ರಂಗದಲ್ಲಿ ಪ್ರವೇಶ ನಿಷೇಧಿಸಿದ ಚಾರಿತ್ರಿಕ ಹಿನ್ನೆಲೆಯಲ್ಲಿ, ಮಹಿಳೆಗೆ ವಿಜ್ಞಾನ ರಂಗ ಪರಕೀಯವಾಗಿ ಕಂಡದ್ದು ಆಚ್ಚರಿಯಲ್ಲ. ವಿಜ್ಞಾನ ರಂಗದಲ್ಲಿ ಅನುಕರಿಸಲು ಮಾದರಿಗಳು ಕಾಣದಿದ್ದ ಕಾರಣವಾಗಿ, ತನ್ನ ಸಾಮರ್ಥ್ಯವನ್ನೇ ಅನುಮಾನಿಸಿದಳು. ಈ ಎಲ್ಲ ಹಿನ್ನೆಲೆಯಲ್ಲಿ ಮಹಿಳಾ ವಿಜ್ಞಾನಿಗಳ ಜೀವನ ಚರಿತ್ರೆಗಳನ್ನು ಸಂಗ್ರಹಿಸಿ, ಪ್ರಕಟಿಸಿ, ವಿಜ್ಞಾನ ಚರಿತ್ರೆಯಲ್ಲಿ ತಪ್ಪು ಒಪ್ಪುಗಳನ್ನು, ಬಿಟ್ಟು ಹೋದ ಪುಟಗಳನ್ನು ಬೊಟ್ಟು ಮಾಡಿ ತೋರಿಸುವ ಕೆಲಸ ಬಹಳಷ್ಟು ನಡೆಯಬೇಕಿದೆ. ಪುರುಷ ಪ್ರಧಾನ ಸಮಾಜ ದಾಖಲಿಸದೆ ಮರೆತ, ವಿಜ್ಞಾನಕ್ಕೆ ಮಹಿಳೆಯರಿತ್ತ ಕೊಡುಗೆಯನ್ನು ಎತ್ತಿ ತೋರಿಸುವ ಕೆಲಸಗಳೂ ನಡೆಯಬೇಕಿದೆ. 1983ರಲ್ಲಿಯೇ ಪ್ರಕಟವಾಗಿ, ಇದೀಗ ಹದಿನೈದನೇ ಮುದ್ರಣವನ್ನು ಕಂಡಿರುವ ಎವೆಲಿನ್ ಫಾಕ್ಸ್ ಕೆಲ್ಲರ್ ಅವರ 'ಎ ಫೀಲಿಂಗ್ ಫಾರ್ ದಿ ಆರ್ಗಾನಿಸ್ಮ್' ಇಂಥಾ ಒಂದು ಅಪರೂಪದ ಪ್ರಯತ್ನ. ವಿಶಿಷ್ಟ ಬಗೆಯ ವೈಜ್ಞಾನಿಕ ವಿಧಾನವನ್ನು ಪ್ರತಿಪಾದಿಸಿದ, ನೊಬೆಲ್ ಪಾರಿತೋಷಕ ಪಡೆದ ಬಾರ್ಬರಾ ಮ್ಯಾಕ್‌ಕ್ಲಿಂಟಾಕ್ ಅವರ ಜೀವನ ಚರಿತ್ರೆಯನ್ನು ದಾಖಲಿಸಿರುವ ಮಹತ್ವದ ಪುಸ್ತಕ ಇದಾಗಿದೆ.

ನೇಮಿಚಂದ್ರ

1983ರಲ್ಲಿ ತನ್ನ 81ನೇ ವಯಸ್ಸಿನಲ್ಲಿ ವೈದ್ಯರಂಗದ ನೊಬೆಲ್ ಪಾರಿತೋಷಿಕ ಪಡೆದ ವಿಜ್ಞಾನಿ, ಬಾರ್ಬರಾ ಮ್ಯಾಕ್ ಕ್ಲಿಂಟಾಕ್. ಈಕೆ ಅಮೇರಿಕಾದ ಪ್ರಸಿದ್ಧ ಸಸ್ಯಜೀವಶಾಸ್ತ್ರಜ್ಞೆ. ಬಾರ್ಬರಾ ಏಕಾಂಗಿಯಾಗಿ, ದಶಕ ದಶಕಗಳ ಕಾಲ ಸತತವಾಗಿ ಸಂಶೋಧನೆ ನಡೆಸಿದ್ದಳು. ಪುರುಷ ಪ್ರಧಾನ ಸಮಾಜದ ಪೂರ್ವಾಗ್ರಹಗಳೆದುರು, ವಿಜ್ಞಾನ ಜಗತ್ತಿನ ನಿರಾಕರಣೆ ಯೆದುರೂ ಬಿಡದಂತೆ ಸಂಶೋಧನೆ ಮುಂದುವರೆಸಿದ್ದಳು. ಆಕೆಯ ಬದುಕಿನ ಅದ್ಭುತ ವಿವರಗಳನ್ನು ಈ ಪುಸ್ತಕ ನೀಡುತ್ತದೆ. ಬಹಳಷ್ಟು ವೈಜ್ಞಾನಿಕ ವಿವರಣೆಗಳನ್ನೊಳಗೊಂಡ ಈ ಪುಸ್ತಕ 'ಜನಪ್ರಿಯ' ಶೈಲಿಯಲ್ಲಿ 'ಓದಿಸಿಕೊಳ್ಳುವ' ಪುಸ್ತಕದ ಗುಂಪಿಗೆ ಸೇರದಿದ್ದರೂ, ವಿಜ್ಞಾನ ಮತ್ತು ಮಹಿಳಾ ಅಧ್ಯಯನದ ಆಸಕ್ತರಿಗೆ ವಿಶೇಷ ಒಳನೋಟಗಳನ್ನು ನೀಡುವ ಪುಸ್ತಕ ಇದಾಗಿದೆ.

ಈ ಪುಸ್ತಕ ಓರ್ವ ಮಹಿಳಾ ವಿಜ್ಞಾನಿಯ ಬದುಕು ರೂಪುಗೊಂಡ ಕುತೂಹಲದ ವಿವರಗಳನ್ನು ತೆರೆದುಕೊಳ್ಳುತ್ತಾ ಹೋಗುತ್ತದೆ. ಜೂನ್ 16, 1902, ಗಂಡು ಮಗುವಿಗಾಗಿ ಕಾದಿದ್ದ ಕುಟುಂಬದಲ್ಲಿ, ಮೂರನೇ ಹೆಣ್ಣು ಮಗಳಾಗಿ ಬಾರ್ಬರಾ ಹುಟ್ಟುತ್ತಾಳೆ. ತಾಯಿ ತನ್ನ ಅಸಮಾಧಾನವನ್ನೇನೂ ಮಗಳಿಂದ ಮುಚ್ಚಿಡುವುದಿಲ್ಲ. ಚಿಕ್ಕ ವಯಸ್ಸಿನಿಂದಲೂ ಸ್ವತಂತ್ರ ಮನೋಭಾವದ ಮಗುವಾಗಿ ಬಾರ್ಬರಾ ಬೆಳೆದಳು. ಹೆಣ್ಣುಮಕ್ಕಳ ಉಡುಪು ಕಂಡ ಬಾರ್ಬರಾ, ತನಗೆ ಲಂಗ ಪೈಜಾಮ ಹೊಲೆಸುವಂತೆ ಒತ್ತಾಯಿಸಿದ್ದಳು. 'ಅದರಲ್ಲಿ ತಾನು ಹುಡುಗರಂತೆ ಓಡಬಲ್ಲೆ, ಮರ ಹತ್ತಬಲ್ಲೆ, ಬೇಸ್‌ಬಾಲ್ ಆಡಬಲ್ಲೆ' ಎಂಬುದು ಆಕೆಯ ವಾದ. ಆದರೆ ಗಂಡು ಹುಡುಗರೊಡನೆ ಬೇಸ್‌ಬಾಲ್ ಆಡಿದೊಡನೆ, ಗಂಡು ಹುಡುಗರು ಆಕೆಯನ್ನು ತಮ್ಮಲ್ಲೊಬ್ಬಳೆಂದು ಒಪ್ಪಿಕೊಳ್ಳಲು ಸಿದ್ಧವಿರಲಿಲ್ಲ. ಒಮ್ಮೆ ಆಕೆಯ ತಂಡ ಹುಡುಗಿಯನ್ನು ತಮ್ಮೊಡನೆ ಸೇರಿಸಿಕೊಳ್ಳಲು ನಿರಾಕರಿಸಿಬಿಟ್ಟಿತು. ಅದೃಷ್ಟಕ್ಕೆ ವಿರೋಧಿ ತಂಡ ಬಾರ್ಬರಾಳನ್ನು ಸ್ವಾಗತಿಸಿತು. ಅವರ ಜೊತೆ ಹೋಗಿ ಆಡಿದವಳೆ, ತನ್ನ ತಂಡವನ್ನು ಪೂರ್ತಿ ಚಚ್ಚಿಹಾಕಿ ವಿರೋಧಿ ತಂಡಕ್ಕೆ ಗೆಲುವು ತಂದುಕೊಟ್ಟಳು'. ಇದೀಗ ಅವಳ ತಂಡ ಬಾರ್ಬರಾಳನ್ನು 'ಪರಮ ದ್ರೋಹಿ' ಎಂದು ದೂರಿತು. ಸುತ್ತಲಿನ ಸಮಾಜ ಹೆಣ್ಣಿಗೆ ಕಡೆದಿಟ್ಟ ಅಚ್ಚಿನಲ್ಲಿ ಕೂರದಾದ ಬಾರ್ಬರಾಗೆ, ಇದು 'ಗೆಲುವಿಲ್ಲದ' ಆಟ ಎಂದು ಬಾಲ್ಯದಲ್ಲಿಯೇ ಅರಿವಾಗಿತ್ತು.

ಶಾಲೆಯ ಓದು ಮುಗಿಸಿದ ಬಾರ್ಬರಾ ಹೆಚ್ಚಿನ ವಿದ್ಯಾಭ್ಯಾಸವನ್ನು ಬಯಸಿದಳು. ಉನ್ನತ ವ್ಯಾಸಂಗ ತನ್ನ ಮಗಳ ವ್ಯಕ್ತಿತ್ವವನ್ನು ವಿಚಿತ್ರವಾಗಿಸಿ ವಿವಾಹಕ್ಕೆ ಅಡಚಣೆ ಉಂಟು ಮಾಡುವುದೆಂದು ಆತಂಕಗೊಂಡ ತಾಯಿ, ಬಾರ್ಬರಾ ಕಾಲೇಜಿಗೆ ಹೋಗುವುದನ್ನು ಬಲವಾಗಿ ವಿರೋಧಿಸಿದಳು. ಆದರೆ ತಂದೆಯ ಬೆಂಬಲದಿಂದ ಬಾರ್ಬರಾ ಕಾರ್ನೆಲ್ ವಿಶ್ವವಿದ್ಯಾಲಯದ ಕೃಷಿ ಕಾಲೇಜನ್ನು ಸೇರಿದಳು. 1923ರಲ್ಲಿ




ಬಾರ್ಬರಾ ಬಿ.ಎಸ್ಸಿ. ಪದವಿ ಪಡೆದಳು. ಹೆಣ್ಣಾಗಿ ಬಾರ್ಬರಾಳಿಗೆ ಸಂಶೋಧನಾ ಕೆಲಸ ದೊರೆಯುವುದು ಅಷ್ಟು ಸುಲಭವಿರಲಿಲ್ಲ. ಬಹಳಷ್ಟು ಕಾಲೇಜುಗಳು, ವಿಶ್ವವಿದ್ಯಾಲಯಗಳು ಮಹಿಳೆಯರಿಗೆ ಕೆಲಸ ನೀಡುತ್ತಿರಲಿಲ್ಲ. ಆದರೆ 'ಜೆನೆಟಿಕ್ಸ್' ತೆರೆದ ವಿಶಾಲ ರಂಗವಾಗಿತ್ತು. ಬಾರ್ಬರಾ ಪದವೀಧರಳಾದ ಈ ಹೊತ್ತು 'ವಂಶವಾಹಿ' (gene) ಎಂಬ ಪದವೇನೋ ಸೃಷ್ಟಿಯಾಗಿತ್ತು. ಆದರೆ ಹಾಗಂದರೇನು ಎಂದು ಯಾರಿಗೂ ನಿಖರವಾಗಿ ತಿಳಿದಿರಲಿಲ್ಲ. ಅದೊಂದು ಅಮೂರ್ತ ವಿಚಾರವಾಗಿ, ಪೀಳಿಗೆಯಿಂದ ಪೀಳಿಗೆಗೆ ಅನುವಂಶಿಕ ಗುಣಗಳು ಹರಿದು ಬರುವ ವಿವಾದಾತ್ಮಕ ಸಿದ್ಧಾಂತವಾಗಿತ್ತು.

### ಜೆನೆಟಿಕ್ಸ್‌ನಲ್ಲಿ ಸಂಶೋಧನೆ

ಕಾರ್ನೆಲ್‌ನಲ್ಲಿ ಜೆನೆಟಿಕ್ ತಜ್ಞರು ಮೆಕ್ಕೆಜೋಳದ ಮೇಲೆ ಸಂಶೋಧನೆ ನಡೆಸಿದ್ದರು. ಆದರೆ ಅವರಿಗೆ ಯಾವ ವರ್ಣತಂತು (chromosome) ಯಾವ ಅನುವಂಶಿಕ ಗುಣವನ್ನು ಕೊಂಡೊಯ್ಯುತ್ತಿದೆ ಎಂದು ಗುರುತಿಸಲು ತಿಳಿದಿರಲಿಲ್ಲ. ಕಾರ್ನೆಲ್‌ನ 'ಸಸ್ಯ ಪ್ರಜನನ' (plant breeder) ವಿಭಾಗ ಹೆಂಗಸರಿಗೆ ಪ್ರವೇಶ ನಿರಾಕರಿಸಿದ ಕಾರಣ, ಬಾರ್ಬರಾ ಬಾಟನಿ ವಿಭಾಗದಿಂದ ತನ್ನ ಕೆಲಸ ಆರಂಭಿಸಿದಳು. ಬಾರ್ಬರಾ ಸಂಶೋಧನೆಯ ಹೊಸ ವ್ಯವಸ್ಥೆಯೊಂದನ್ನು ಕಂಡುಹಿಡಿದಳು. ಒಂದು ಹೊಸ ಬಣ್ಣವೇರಿಕೆ (staining) ತಂತ್ರವನ್ನು ಬಳಸಿ, ಬಾರ್ಬರಾ ಮೆಕ್ಕೆಜೋಳದ ಹತ್ತು ವರ್ಣತಂತುಗಳನ್ನು ಸೂಕ್ಷ್ಮ ದರ್ಶಕದ ಅಡಿಯಲ್ಲಿ ಗುರುತಿಸಬಹುದೆಂದು ಕಂಡುಹಿಡಿದಳು. ಅಲ್ಲಿಂದ ಮುಂದೆ ಸಾಗಿ, ಒಂದೊಂದು ವರ್ಣತಂತುವೂ ಒಂದಿಷ್ಟು ಕಣ್ಣಿಗೆ ಕಾಣುವ ಮೆಕ್ಕೆಜೋಳದ ಅನುವಂಶಿಕ ಗುಣ ವಿಶೇಷಗಳಿಗೆ ಕಾರಣ ಎಂದು ಗುರುತಿಸಿದಳು. 1927ರಲ್ಲಿ ಬಾರ್ಬರಾ ಪಿಎಚ್.ಡಿ. ಪದವಿಯನ್ನು ಪಡೆದಳು. ಮುಂದಿನ ಕೆಲವೇ ವರ್ಷಗಳಲ್ಲಿ ಆಕೆ ಮೆಕ್ಕೆಜೋಳದ ವರ್ಣತಂತುಗಳನ್ನು ಕುರಿತು ಒಂಭತ್ತು ವೈಜ್ಞಾನಿಕ ಪ್ರಬಂಧಗಳನ್ನು ಪ್ರಕಟಿಸಿದಳು. ಈ ಒಂದೊಂದೂ ಜೆನೆಟಿಕ್ಸ್ ರಂಗದ ಮೈಲಿಗಲ್ಲುಗಳಾಗಿದ್ದುವು.

1920ರ ದಶಕದಲ್ಲಿ ವರ್ಣತಂತುಗಳು ಅನುವಂಶಿಕ ಮಾಹಿತಿಯನ್ನು ಕೊಂಡೊಯ್ಯುತ್ತವೆ ಮತ್ತು ಪರಸ್ಪರ ವಿನಿಮಯ ಮಾಡಿಕೊಂಡು, ಭೌತಿಕ ಗುಣಲಕ್ಷಣಗಳ ಹೊಸ ಸಂಯೋಜನೆಯನ್ನು ಉತ್ಪನ್ನ ಮಾಡುತ್ತವೆ ಎಂಬ ಬಗ್ಗೆ ಸಾಂದರ್ಭಿಕ ಚಿಹ್ನೆಗಳಿದ್ದರೂ, ನೇರ ಪುರಾವೆಗಳಿರಲಿಲ್ಲ. ಇದೀಗ ಬಾರ್ಬರಾ ತನ್ನ ಪ್ರಯೋಗಗಳಿಂದ ವರ್ಣತಂತುಗಳಲ್ಲಿ ಭೌತಿಕ ಗುಣಲಕ್ಷಣಗಳಿಗೆ ಕಾರಣವಾದ ವಂಶವಾಹಿಗಳಿವೆ ಎಂದು ಸಾಬೀತು ಮಾಡಿದಳು. ವರ್ಣತಂತುವಿನ ವಿವಿಧ ಭಾಗಗಳ ವಿನಿಮಯ, ಅದ್ಭುತದ ಹೊಸ ಹೊಸ ಭಿನ್ನ ವಿಭಿನ್ನ ತಳಿಗಳನ್ನು ಸೃಷ್ಟಿಸಬಲ್ಲುದು ಎಂಬುದಕ್ಕೆ ಮೊಟ್ಟ ಮೊದಲಿಗೆ ಭೌತಿಕ ಪುರಾವೆಗಳನ್ನು ಬಾರ್ಬರಾ ಒದಗಿಸಿದ್ದಳು. ಆಗಸ್ಟ್ 1931ರಲ್ಲಿ ಬಾರ್ಬರಾಳ ವೈಜ್ಞಾನಿಕ ಪ್ರಬಂಧ ಪ್ರಕಟವಾಯಿತು. [illegible] ಜೆನೆಟಿಕ್ಸ್‌ಗೆ ಈ ಪ್ರಬಂಧ ಮೂಲಾಧಾರವಾಯಿತು.

### ಒಳ ಅರಿವು

'ಎ ಫೀಲಿಂಗ್ ಫಾರ್ ದಿ ಆರ್ಗಾನಿಸ್ಮ್' ಬಾರ್ಬರಾಳ ಸಂಶೋಧನಾ ಬದುಕಿನ ಬಹಳಷ್ಟು ಒಳನೋಟಗಳನ್ನು ನೀಡುತ್ತದೆ. ಈ ಪುಸ್ತಕದಲ್ಲಿ ಲೇಖಕಿ, ಓರ್ವ ಮಹಿಳಾ ವಿಜ್ಞಾನಿಯ 'ಒಳ ಅರಿವು' (intuition) ಕೆಲಸ ಮಾಡುವ ಬಗೆಯನ್ನು [illegible]

ಸೂಕ್ಷ್ಮದರ್ಶಕದಲ್ಲಿ ಇಣುಕಿ ನೋಡಿ ಬಾರ್ಬರಾ, ವರ್ಣತಂತುಗಳ ಅತಿ ಸೂಕ್ಷ್ಮ ವ್ಯತ್ಯಾಸವನ್ನೂ ಗುರುತಿಸಿ, ಅವುಗಳು 'ಕಾಣಿಸು'ವ ಭೌತಿಕ ಗುಣ ವಿಶೇಷಗಳನ್ನು ಬಹಳಷ್ಟು ನಿಖರವಾಗಿ ಊಹಿಸುತ್ತಿದ್ದಳು. ಒಂದು ಸೂಕ್ಷ್ಮದರ್ಶಕದಿಂದ ಬಾರ್ಬರಾ ಇಷ್ಟೆಲ್ಲ ಹೇಗೆ ತಿಳಿಯುವಳು ಎಂಬುದು ಎಲ್ಲರಿಗೂ ಆಶ್ಚರ್ಯ ಹುಟ್ಟಿಸುತ್ತಿತ್ತು. 'ನಾನು ಅಷ್ಟು ತೀವ್ರತೆಯಿಂದ ಸೂಕ್ಷ್ಮದರ್ಶಕದಲ್ಲಿ ಇಣುಕಿ ನೋಡುವಾಗ ನಾನು ನಿಜಕ್ಕೂ ಅಲ್ಲಿ ಜೀವಕೋಶದಾಳಕ್ಕೆ ಇಳಿದು ಸುತ್ತಲೂ ನೋಡುತ್ತಿರುತ್ತೇನೆ. ನೋಡ ನೋಡುತ್ತಾ ಪ್ರತಿಯೊಂದೂ ದೊಡ್ಡದಾಗಿ ಸ್ಪಷ್ಟವಾಗಿ ಕಾಣುತ್ತದೆ. ಅದು ಪ್ರಜ್ಞಾಪೂರ್ವಕ ಕ್ರಿಯೆಯಲ್ಲ, ಆ ಗಮನಿಸುವ ತೀವ್ರತೆಯಲ್ಲಿ ಪ್ರತಿಯೊಂದೂ ಹಿಗ್ಗಿ ಕಾಣುತ್ತದೆ, ಇತರರ ಕಣ್ಣಿಗೆ ಕಾಣದ್ದೆಲ್ಲವೂ ನನಗೆ ಸ್ಪಷ್ಟವಾಗುತ್ತದೆ' ಎಂದಿದ್ದಳು. ವಿಪರೀತ ಮೊತ್ತದ ಮಾಹಿತಿಯನ್ನು ತಟ್ಟನೆ ಕ್ರೋಡೀಕರಿಸಿ ಸಮಗ್ರವಾಗಿ ನೋಡಿ, ಸಮಸ್ಯೆಯ ಪರಿಹಾರವನ್ನು ಕಾಣಬಹುದು ಎಂದು ನಂಬಿದ್ದಳು. ತಮ್ಮ ತೀವ್ರ ಆಸಕ್ತಿಯ ಮತ್ತು ಅನುಭವದ ರಂಗದಲ್ಲಿ ದುಡಿಯುತ್ತಿದ್ದಂತೆ ಆ ವಿಷಯದ ಬಗ್ಗೆ ಒಂದು ಬಗೆಯ ಸಂವೇದನೆ ಮೂಡಿಬರುತ್ತದೆ ಎಂದು ಹೇಳುತ್ತಿದ್ದಳು. 'ನಮ್ಮ ಮಿದುಳು ಕಂಪ್ಯೂಟರಿನಂತೆ ಕೆಲಸ ಮಾಡುತ್ತದೆ. ಅತ್ಯಧಿಕ ಮಾಹಿತಿಯನ್ನು ಅಪ್ರಜ್ಞಾಪೂರ್ವಕವಾಗಿಯೇ ಸಂಸ್ಕರಿಸಿ, ಕ್ರೋಡೀಕರಿಸಬಲ್ಲದು, ಒಂದು ಸಮಗ್ರ ಚಿತ್ರವನ್ನು ನೀಡಬಲ್ಲದು. ನನಗೆ ಪ್ರತಿಯೊಂದು ಗಿಡವೂ ಅರ್ಥವಾಗುತ್ತದೆ. ನನಗೇ ಗೊತ್ತಿಲ್ಲದಂತೆ ಈ ಪ್ರಕ್ರಿಯೆ ನಡೆಯುತ್ತದೆ' ಎಂದಿದ್ದಳು. ಇಂಥಾ ಅಗಾಧ ಶಕ್ತಿಗೆ, ಸಂವೇದನೆಗೆ ಲೇಖಕಿ, ಕಾರಣಗಳನ್ನು ಹುಡುಕುವ ಪ್ರಯತ್ನ ಮಾಡಿದ್ದಾರೆ. ವಿಜ್ಞಾನಿಗಳು ಹುದ್ದೆಯಲ್ಲಿ ಸ್ವಲ್ಪ ಮೇಲೇರಿದಂತೆ ದಿನ ಪ್ರತಿದಿನದ ಕೆಲಸಗಳನ್ನೆಲ್ಲ ತಮ್ಮ ಕೆಳಗೆ ಕೆಲಸ ಮಾಡುವವರಿಗೆ ವರ್ಗಾಯಿಸುತ್ತಿದ್ದರು. ಆದರೆ ಬಾರ್ಬರಾ ಎಷ್ಟೇ ಬೇಸರದ ಯಾಂತ್ರಿಕ ಕೆಲಸಗಳನ್ನೂ ಸ್ವತಃ ಮಾಡ ಬಯಸುತ್ತಿದ್ದಳು. ಈ ಎಲ್ಲದರಿಂದ ಬಾರ್ಬರಾ ಕಂಡದ್ದು, ತಿಳಿದುಕೊಂಡದ್ದು, ಅನುಭವ ಪಡೆದದ್ದು ಅಗಾಧವಿತ್ತು. ಇವೆಲ್ಲವು ಬಾರ್ಬರಾಗೆ ಒಂದು ಬಗೆಯ 'ಫೀಲಿಂಗ್ ಫಾರ್ ದಿ ಆರ್ಗಾನಿಸ್ಮ್' ನೀಡಿದವು, ಎನ್ನುತ್ತಾರೆ ಲೇಖಕಿ.

### ಭಲಕ್ಕೆ ದೊರೆತ ಮನ್ನಣೆ

ಪುಸ್ತಕದುದ್ದಕ್ಕೂ ಮಹಿಳೆಯಾಗಿ ಈ ವಿಜ್ಞಾನಿ ಎದುರಿಸುವ ಲಿಂಗತಾರತಮ್ಯದ ವಿವರಗಳನ್ನು ನಿರ್ಭಾವುಕವಾಗಿ ಯಥಾವತ್ತಾಗಿ ದಾಖಲಿಸುವ ಪ್ರಯತ್ನವಿದೆ. ಆಕೆಯ ಪ್ರಚಂಡ ಸಂಶೋಧನೆಗಳನ್ನು ಕಂಡ ಕಾರ್ನೆಲ್ ವಿಶ್ವವಿದ್ಯಾಲಯದಲ್ಲಿ ಕೂಡಾ ಮಹಿಳೆಗೆ ಕಾಯಂ ಸ್ಥಾನವನ್ನು ನೀಡುವುದಕ್ಕೆ ವಿರೋಧವಿತ್ತು. ಅತ್ಯಂತ ಪ್ರತಿಭಾವಂತ ವಿಜ್ಞಾನಿಗೆ ಮಹಿಳೆ ಎಂಬ ಒಂದೇ ಕಾರಣದಿಂದ ಕೆಲಸ ದೊರೆಯುವಂತಿರಲಿಲ್ಲ. ಬಾರ್ಬರಾ ಅನೇಕಾನೇಕ ವಿಶ್ವವಿದ್ಯಾಲಯಗಳಲ್ಲಿ ಸಣ್ಣ ಅವಧಿಯ ಫೆಲೋಷಿಪ್ ಪಡೆದು ತನ್ನ ಸಂಶೋಧನೆಯನ್ನು ಮುಂದುವರೆಸಿದಳು.

ಇದೀಗ 'ಕೋಲ್ಡ್ ಸ್ಪ್ರಿಂಗ್ ಹಾರ್ಬರ್' [illegible]

ರಂಗದ ಮುಂಚೂಣಿಯ ಸಂಶೋಧನೆಯೆಂದು ಗುರುತಿಸಲ್ಪಟ್ಟು ಆಕೆಯನ್ನು 'ಜೆನೆಟಿಕ್ಸ್ ಸೊಸೈಟಿ'ಯ ಅಧ್ಯಕ್ಷಳನ್ನಾಗಿ ಆರಿಸಿದರು. ಅದೇ ವರ್ಷ ರಾಷ್ಟ್ರೀಯ ವಿಜ್ಞಾನ ಅಕಾಡೆಮಿಗೆ ಸದಸ್ಯಳಾಗಿ ಆರಿಸಲಾಯಿತು. 'ಯಹೂದಿಗಳಿಗೆ, ನೀಗ್ರೋಗಳಿಗೆ, ಮಹಿಳೆಯರಿಗೆ ತಾರತಮ್ಯದ ರೀತಿನೀತಿಗಳನ್ನು ಅನುಭವಿಸಿ ಅಭ್ಯಾಸವಾಗಿದೆ. ಹಾಗೆಂದೇ ಅವರು ಸುತ್ತಲ ಸಮಾಜದಿಂದ ಹೆಚ್ಚಿನದೇನನ್ನೂ ನಿರೀಕ್ಷಿಸುವುದಿಲ್ಲ. ಸಮಾಜದ ಇಂಥಾ ಅರ್ಥಹೀನ, ತರ್ಕಹೀನ ತಡೆಗಳು, ಅಡ್ಡಗೋಡೆಗಳು ಕುಸಿದು ಬಿದ್ದಾಗ ನನಗೆ ಸಮಾಧಾನವಾಗುತ್ತದೆ' ಎಂದು ಬಾರ್ಬರಾ ನುಡಿದಳು.

### ವಂಶವಾಹಿಗಳ ಕುರಿತು

1944-45ರ ಸಮಯ. ವಿಜ್ಞಾನಿಗಳಿನ್ನೂ ವಂಶವಾಹಿಗಳಲ್ಲಿ ಡಿ.ಎನ್.ಎ. ಎಂಬುದೊಂದಿದೆ ಎಂದು ಕಂಡುಹಿಡಿಯುವ ಎಷ್ಟೋ ವರ್ಷಗಳ ಮೊದಲೇ, ಬಾರ್ಬರಾ 'ವಂಶವಾಹಿಗಳು ಹೇಗೆ ನಿಯಂತ್ರಿಸಲ್ಪಟ್ಟಿವೆ ?' ಎಂದು ಪ್ರಶ್ನಿಸಿಕೊಂಡಳು. ತಾಯಿ ಗಿಡದ ವರ್ಣತಂತುಗಳನ್ನು, ಈಗ ಹುಟ್ಟಿದ ಸಸಿಗಳ



ವರ್ಣತಂತುವನ್ನು ಸೂಕ್ಷ್ಮದರ್ಶಕದಲ್ಲಿ ಗಮನಿಸಿ ಹೋಲಿಸಿದಾಗ, ವರ್ಣತಂತುವಿನ ಕೆಲವು ಭಾಗಗಳು ತಮ್ಮ ಸ್ಥಾನವನ್ನು ಬದಲಾಯಿಸಿರುವುದು ಕಂಡುಬಂದಿತು. ಆರು ವರ್ಷಗಳ ಕಠಿಣ ಪರಿಶ್ರಮ, ಪ್ರಯೋಗ ಮತ್ತು ಸಂಶೋಧನೆಯ ನಂತರ ಬಾರ್ಬರಾ, 'ವಂಶವಾಹಿಗಳಿಗೆ ವರ್ಣತಂತುಗಳ ಮೇಲೆ ಸ್ಥಿರವಾದ ಸ್ಥಾನವಿರಬೇಕಿಲ್ಲ' ಎಂದು ಸಾಬೀತು ಮಾಡಿದಳು.

ಬಾರ್ಬರಾ ಬರೀ ವಂಶವಾಹಿಗಳಷ್ಟೇ ಅಸ್ಥಿರವಲ್ಲ, ಅವುಗಳ ವಿಕೃತಿ (mutation) ಕೂಡಾ ಅಸ್ಥಿರ ಎಂದು ಸಾಬೀತು ಮಾಡಿ ತೋರಿಸಿದಳು. ವಿಜ್ಞಾನಿಗಳು ವಿಕೃತಿಗೊಂಡ ವಂಶವಾಹಿ ಸತ್ತಂತೆಯೇ ಲೆಕ್ಕ, ಮತ್ತೆ ಅದನ್ನು ಪುನಃ ಚುರುಕುಗೊಳಿಸುವಂತಿಲ್ಲ ಎಂದು ಭಾವಿಸಿದ್ದರು. ಬಾರ್ಬರಾ ವಾತಾವರಣದ ಬದಲಾವಣೆಗಳು ವಿಕೃತಿಯನ್ನು ವ್ಯತಿರಿಕ್ತಗೊಳಿಸಬಲ್ಲದು ಎಂದು ತೋರಿಸಿದಳು. ಅಲ್ಲಿಯವರೆಗೂ ಸ್ಥಿರವೆಂದು, ಅಚಲವೆಂದು ಭಾವಿಸಿದ್ದ ವಂಶವಾಹಿಗಳು, ಬಾರ್ಬರಾಳ ಪ್ರಯೋಗಗಳಿಂದ ಚಲಿಸುವ ಚಿತ್ರಗಳಾದವು. ಬಾರ್ಬರಾ ತನ್ನ ಕಾಲಕ್ಕಿಂತಾ ಇಪ್ಪತ್ತು ವರ್ಷ ಮುಂದೋಡಿದ್ದಳು. ಇಂದು ಬಾರ್ಬರಾಳ ಈ ಅನ್ವೇಷಣೆಯನ್ನು 'ವಂಶವಾಹಿ ವರ್ಗಾವಣೆ' (genetic transposition) ಎಂದು ಕರೆಯುತ್ತಾರೆ. ವರ್ಣತಂತುವಿನಲ್ಲಿ ಚಲಿಸಬಲ್ಲ ಭಾಗಗಳನ್ನು 'ಜಂಪಿಂಗ್ ಜೀನ್ಸ್', ಅಂದರೆ 'ಜಿಗಿವ ವಂಶವಾಹಿ'ಗಳು ಎಂದು ಕರೆಯುತ್ತಾರೆ.

### ಜಂಪಿಂಗ್ ಜೀನ್ಸ್

'ಜಂಪಿಂಗ್ ಜೀನ್ಸ್' ಈಕೆಯ ಮಹಾನ್ ಅನ್ವೇಷಣೆಯಾಗಿತ್ತು. ವರ್ಣತಂತುಗಳು ಸ್ಥಿರವಾಗಿಲ್ಲ, ವಂಶವಾಹಿ (genetic) ವಸ್ತುಗಳು ಊಹಿಸಲಾರದಂತೆ ಪೀಳಿಗೆಯಿಂದ ಪೀಳಿಗೆಗೆ ಸ್ಥಳಾಂತರಿಸುವುವೆಂದು ಕಂಡುಹಿಡಿದ ಸಂಶೋಧನೆ. ವರ್ಣತಂತುವಿನ ಉದ್ದಕ್ಕೂ ಒಂದು ತುದಿಯಿಂದ ಇನ್ನೊಂದು ತುದಿಗೆ ಚಲಿಸಬಲ್ಲ 'ಸ್ವಿಚ್'ಗಳಂತೆ ಕಾರ್ಯ ನಿರ್ವಹಿಸುವ ಜೆನೆಟಿಕ್ ಘಟಕಾಂಶಗಳಿಂದ ಮೆಕ್ಕೆಜೋಳದ ಕಾಳಿನ ಬಣ್ಣದಂಥಾ ಗುಣಗಳನ್ನು ಬೇಕೆಂದಾಗ ಬರಿಸಬಹುದು ಎಂದು ಈಕೆ ತೋರಿಸಿದ್ದಳು. 1951ರಲ್ಲಿ ಇದು ನಿಜಕ್ಕೂ ಕೇವಲ ಕಟ್ಟುಕತೆಯಾಗಿ ಕಾಣಿಸಿ, ಬಾರ್ಬರಾಳನ್ನು, ಆಕೆಯ ಸಂಶೋಧನೆಯನ್ನು ಮುಂದಿನ ವರ್ಷ ವರ್ಷಗಳ ಕಾಲ ಲೆಕ್ಕಿಸದೆ ಉಪೇಕ್ಷಿಸಿದರು. 1940ರಲ್ಲಿಯೇ ಆರಂಭವಾದ ಬಾರ್ಬರಾಳ ಅಧ್ಯಯನ ಬಹಳ ಕಾಲ ಯಾರ ಗಮನಕ್ಕೂ ಬಾರದೆ ಉಳಿದುದಲ್ಲದೆ, ಆಕೆಯನ್ನು ಹುಚ್ಚಿ, ಭ್ರಮಾಧೀನೆ, ಎನ್ನುವ ಮಟ್ಟಿಗೂ ಹೋದವರಿದ್ದರು. ಡಿ.ಎನ್.ಎ. ರಚನೆಯನ್ನು ಕಂಡುಹಿಡಿದ ಸಂಶೋಧನೆ ಈಕೆಯ ವಿಚಾರಗಳಿಗೆ ಸಾಕಷ್ಟು ಬೆಂಬಲ ನೀಡಿದ್ದರೂ, ಜನರ ಪ್ರತಿಕ್ರಿಯೆ ಪೂರ್ವಾಗ್ರಹದಿಂದ ಕೂಡಿತ್ತು. ಬಾರ್ಬರಾ ತನ್ನ ಸಂಶೋಧನೆಯನ್ನು ಏಕಾಂಗಿಯಾಗಿ ನಡೆಸಿದ್ದಳು. ಆಕೆಯ ಸಮಕಾಲೀನ ವಿಜ್ಞಾನಿಗಳಿನ್ನೂ ಆಕೆಯ ಸಂಶೋಧನೆಯ ಮಹತ್ವವನ್ನು ಅರಿತಿರಲಿಲ್ಲ. ಆದರೆ 1960ರ ದಶಕದಲ್ಲಿಯ 'ಅಣು ಜೀವವಿಜ್ಞಾನ' (molecular biology) ಹಾಗೂ 'ಜೆನೆಟಿಕ್ ಇಂಜಿನಿಯರಿಂಗ್' ರಂಗಗಳ ಅಭಿವೃದ್ಧಿಗಳು ಕಡೆಗೂ ಬಾರ್ಬರಾಳ ಸಂಶೋಧನೆಯ ಮಹತ್ವವನ್ನು ಅರಿಯುವಂತೆ ಮಾಡಿದವು. 'ಜಂಪಿಂಗ್ ಜೀನ್ಸ್', ಜಿಗಿವ ವಂಶವಾಹಿಗಳನ್ನು ಎಲ್ಲೆಲ್ಲಿಯೂ ಗುರುತಿಸಿದರು. ಅವು ಮನುಷ್ಯರಲ್ಲಿಯೂ ಕಂಡುಬಂದವು. ಹುಟ್ಟಿನಿಂದ ಬಂದ ಅನೇಕ ನ್ಯೂನತೆಗಳಿಗೆ, ಹಾಗೂ ಬಹುಶಃ ಕ್ಯಾನ್ಸರ್‌ಗೂ ಈ ಜಿಗಿವ ವಂಶವಾಹಿಗಳ ಹಿನ್ನೆಲೆ ಇದೆ.

ಕಡೆಗೂ 1970ರ ದಶಕದಂಚಿಗೆ ಆಕೆಯ 'ಜಂಪಿಂಗ್ ಜೀನ್ಸ್' ಸಂಶೋಧನೆಯ ಮಹತ್ವ ವಿಜ್ಞಾನ ಜಗತ್ತಿಗೆ ಅರ್ಥವಾಗಿತ್ತು. 1983ರಲ್ಲಿ 81ನೇ ವಯಸ್ಸಿನಲ್ಲಿ ವೈದ್ಯರಂಗದ ನೊಬೆಲ್ ಪಾರಿತೋಷಿಕ ಈಕೆಗೆ ದೊರೆಯಿತು. ವೈದ್ಯರಂಗದಲ್ಲಿ ಯಾರೊಡನೆಯೂ ಹಂಚಿಕೊಳ್ಳದೆ ನೊಬೆಲ್ ಪ್ರಶಸ್ತಿ ಪಡೆದ ಮೊಟ್ಟ ಮೊದಲ ಮಹಿಳೆ ಈಕೆ. ಬಾರ್ಬರಾಳ ಸಂಶೋಧನೆ ವಂಶವಾಹಿಗಳ ರಚನೆ ಮತ್ತು ಕಾರ್ಯವಿಧಾನವನ್ನು ಅರ್ಥ ಮಾಡಿಕೊಳ್ಳುವತ್ತ ಇಟ್ಟ ಮಹತ್ತರ ಹೆಜ್ಜೆಯಾಗಿತ್ತು. ನೊಬೆಲ್ ಕಮಿಟಿ ಬಾರ್ಬರಾಳ ಈ ಸಂಶೋಧನೆಯನ್ನು 'ಜೀವಶಾಸ್ತ್ರ ರಂಗದ ಅತಿ ದೊಡ್ಡ ಆವಿಷ್ಕಾರ'ವೆಂದು ಗುರುತಿಸಿತು.

(೫೬ನೇ ಪುಟ ನೋಡಿ)

# ಸತ್ಯಶುದ್ಧ ಕೃಷಿ ಕಾಯಕವೇ ಕೈಲಾಸ

ಎಸ್. ಎಸ್. ಕಟ್ಟಿಗಿಹಳ್ಳಿಮಠ

ಎಂಭತ್ತೆರಡು ತುಂಬಿದ್ದರೂ ಪ್ರತಿದಿನ ಕರ್ತವ್ಯವೆಂಬಂತೆ ವಿವಿಧ ತೋಟ, ಗದ್ದೆಗಳಿಗೆ ಭೇಟಿಕೊಟ್ಟು, ಬೆಳೆ ಬೆಳೆಯುವ ವಿಧಾನಗಳ ಬಗ್ಗೆ ಸೂಚನೆ ನೀಡಿ, ಖುದ್ದಾಗಿ ಕೆಲಸಗಳನ್ನು ಪರಿಶೀಲಿಸಿ, ಇಳುವರಿಯನ್ನು ಹೆಚ್ಚಿಸುತ್ತಲೇ ಶುದ್ಧ ವೈಜ್ಞಾನಿಕ ತಂತ್ರಗಳನ್ನು ಅಳವಡಿಸುವ ಶ್ರೀ ಎಸ್. ಎಸ್. ಕಟಗಿಹಳ್ಳಿಮಠ ಅವರು ಕೃಷಿ ವಿಶ್ವವಿದ್ಯಾನಿಲಯದ ನಿವೃತ್ತ ಕೃಷಿ ವಿಜ್ಞಾನಿ, ಸಂಶೋಧಕ, ಲೇಖಕ ಹಾಗೂ ಕ್ಷೇತ್ರ ಪರಿವೀಕ್ಷಕ. ಭಾರತದಲ್ಲಿ ನಿರುದ್ಯೋಗ ಎಂಬುದಕ್ಕೆ ಅರ್ಥವಿಲ್ಲ ಎನ್ನುವ ಈ ಕೃಷಿಋಷಿ ನಮ್ಮ ಕೃಷಿ ಯೋಜನೆಗಳು ಅವ್ಯವಸ್ಥಿತವಾಗಿರುವುದನ್ನು ಅತ್ಯಂತ ಖೇದದಿಂದ ಗಮನಿಸುತ್ತಾರೆ. ಅವರ ಶ್ರೀಮಂತ ಕಾಯಕವನ್ನು ಪುರಸ್ಕರಿಸಲು ಅನೇಕ ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳು ಅವರಿಗೆ ಪ್ರಶಸ್ತಿಗಳನ್ನು ನೀಡಿವೆ, ಸನ್ಮಾನಿಸಿವೆ. ಪ್ರತಿ ತಿಂಗಳೂ 'ಹೊಸತು' ಪತ್ರಿಕೆಯ ಉತ್ತು-ಬಿತ್ತು-ಬೆಳೆ ವಿಭಾಗದಲ್ಲಿ ತಮ್ಮ ಅಗಾಧ ಅನುಭವ ಮತ್ತು ವೈಜ್ಞಾನಿಕ ಕೃಷಿಪದ್ಧತಿಯ ತಿಳಿವಳಿಕೆಯನ್ನು ಅವರು ಹಂಚಿಕೊಳ್ಳುತ್ತಾರೆ. ಅವರಿಗೆ ಶ್ರೀ ಲಕ್ಷ್ಮಣ್ ಸಹಕಾರ ನೀಡುತ್ತಿದ್ದಾರೆ. ಮೊದಲ ಲೇಖನದಲ್ಲಿ ಕೃಷಿಯ ಪರಂಪರೆಯನ್ನು ಕುರಿತು ವಿವೇಚಿಸಿದ್ದಾರೆ.

'ದುಡಿತವೇ ದುಡ್ಡಿನ ತಾಯಿ' ಎಂಬ ಗಾದೆ ಬಹಳ ಕಡೆ ಪ್ರಚಲಿತವಾಗಿದೆ. ಇದು ಬಹಳ ಅರ್ಥಗರ್ಭಿತವಾದ ಮಾತು. ಅದಕ್ಕೇ ಗಾದೆಯ ಮಾತು ವೇದಕ್ಕಿಂತ ಶ್ರೇಷ್ಠವೆಂಬ ನಾಣ್ಣುಡಿ ರೂಢಿಯಲ್ಲಿರುವುದು. ದುಡಿತ ಅಂದರೆ ಕಾಯಕ, ಕೆಲಸ ಮಾಡುವುದು, ಸತತ ಉದ್ಯೋಗ; ಆದರೆ ಆ ದುಡಿತ ಶುದ್ಧವಾಗಿರಬೇಕು.

ಈ ಜಗತ್ತಿನಲ್ಲಿ ಹುಟ್ಟಿ ಬಂದ ಪ್ರತಿಯೊಬ್ಬನ ಹೆಬ್ಬಯಕೆಯೂ ನಾಲ್ಕು ಪುರುಷಾರ್ಥಗಳನ್ನು ಪೂರೈಸಿಕೊಳ್ಳುವುದು. ಇವುಗಳನ್ನು ಸುಲಭವಾಗಿ ಸಾಧಿಸಬೇಕಾದರೆ ಸತ್ಯ ಶುದ್ಧ ಕೃಷಿ ಕಾಯಕವಷ್ಟೇ ಸುಲಭ ದಾರಿ ಎಂದು ಹೇಳಬಹುದು. ನಮ್ಮ ಭಾರತ ಖಂಡದಲ್ಲಿ ನಿಸರ್ಗ ದೇವತೆಯು ಹೇರಳವಾದ ಸಂಪನ್ಮೂಲಗಳನ್ನು ಕೊಟ್ಟಿರುತ್ತಾಳೆ. ಜಲ, ನೆಲ, ವಜ್ರ, ಬೆಳ್ಳಿ, ಬಂಗಾರ ಹಾಗೂ ಕಬ್ಬಿಣ ಮುಂತಾದ ಎಲ್ಲಾ ತರಹದ ಖನಿಜಗಳು, ಅನೇಕ ಜಾತಿಯ ಸಸ್ಯಗಳು, ಅನೇಕ ಜಾತಿಯ ಪ್ರಾಣಿಗಳು, ನಮ್ಮಲ್ಲಿವೆ.

ಈ ಸಂಪನ್ಮೂಲಗಳಲ್ಲಿ ಮಾನವ ಸಂಪನ್ಮೂಲವೂ ಒಂದು. ನಮ್ಮ ಸುಮಾರು ನೂರು ಕೋಟಿ ಜನಸಂಖ್ಯೆಯಲ್ಲಿ ಸದೃಢ ಆರೋಗ್ಯಕರ ಧ್ಯೇಯವನ್ನು ಹೊಂದಿ ಸತತ ಉದ್ಯೋಗ ಮಾಡುವಂಥ ವಯಸ್ಸಿನವರು ಐವತ್ತು ಕೋಟಿಯಾದರೂ ಇರಬಹುದು.

ಪ್ರಾಣವನ್ನೇ ಬಲಿದಾನವನ್ನಾಗಿ ಕೊಡಲು ಹಿಂಜರಿಯದೆ ಹೋರಾಡಿ ನಮ್ಮ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ನಮ್ಮ ಜನರು ಒಳ್ಳೆಯ ಮುಖಂಡರನ್ನು ಹೊಂದಿದರೆ ಸತ್ಯ ಶುದ್ಧ ಕಾಯಕ ಯೋಗಿಗಳಾಗಿ ಸತತ ಉದ್ಯೋಗವನ್ನು ಮಾಡಿ ಭಾರತದಲ್ಲಿ ಬಂಗಾರದ ಹೊಳೆಯನ್ನು ಹರಿಸಬಲ್ಲರು. ಆದುದರಿಂದ ಈಗ ನಮ್ಮ ಮುಖಂಡರು ಜನರನ್ನು ಅತ್ತಿತ್ತ ಎಳೆಯದೆ ಅವರನ್ನು ಸತತ ಉದ್ಯೋಗಿಗಳನ್ನಾಗಿ ಮಾಡಿ ಸತ್ಯ ಶುದ್ಧ ಕಾಯಕದಲ್ಲಿ ನಿರತರಾಗಲು ಅವಕಾಶ ಕಲ್ಪಿಸಬೇಕು.

'ರೈತನು ಅನ್ನದಾತನು', 'ಕೃಷಿತೋ ನಾಸ್ತಿ ದುರ್ಭಿಕ್ಷಂ'. ಒಕ್ಕಲಿಗನು ಒಕ್ಕಿದರೆ ಜನವೆಲ್ಲಾ ಬದುಕುವುದು; ಒಕ್ಕದಿರೆ ಜಗವೆಲ್ಲ ಬಿಕ್ಕುವುದು, ಎಂಬ ನಾಣ್ಣುಡಿಗಳು ರೂಢಿಯಲ್ಲಿವೆ. ಇಷ್ಟಿದ್ದರೂ ಕೃಷಿಕನ ಪರಿಸ್ಥಿತಿ ಸುಧಾರಿಸಿಲ್ಲ. ಇದೊಂದು ದ್ವಂದ್ವ. ನಮ್ಮ ದೇಶದಲ್ಲಿ ಪಂಚವಾರ್ಷಿಕ ಯೋಜನೆಗಳು ಪ್ರಾರಂಭವಾದಾಗಿನಿಂದಲೂ ಕೃಷಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡಲಿಲ್ಲ. ನಮ್ಮ ದೇಶದ ಕೃಷಿ ನೀತಿಯೇ ತಪ್ಪಾಗಿದೆ ಎಂದು ಹೇಳಬಹುದು. ಇನ್ನು ಮುಂದೆಯಾದರೂ ಕೃಷಿಗೆ ನಮ್ಮ ಯೋಜನೆಗಳಲ್ಲಿ ಪ್ರಥಮ ಆದ್ಯತೆಯನ್ನು ಕೊಡುವುದು ಉತ್ತಮ. ಇನ್ನು ಮುಂದೆ ನಮ್ಮ ನಾಡಿನಲ್ಲಿ ಕೃಷಿ ಉದ್ಯಮವೇ ಇಂಜಿನ್ನು ಆಗಬೇಕು. ಬಾಕಿ ಉದ್ಯಮಗಳು ಅದರ ಹಿಂದಿನ ಬೋಗಿಗಳಾಗಬಹುದು, ಅಷ್ಟೇ.

ಕೃಷಿಯ ಬಗ್ಗೆ ಎಷ್ಟೇ ಹೇಳಿದರೂ ಕಡಿಮೆಯೇ. ಈಗ ಸುಮಾರು ೧೨೦ ವರ್ಷಗಳ ಹಿಂದೆ ಒಬ್ಬ ಮಹಾವಿಜ್ಞಾನಿ, ಮಹಾಯೋಗಿ, ಘನಮಠದಾರ್ಯ ಎಂಬುವರು 'ಕೃಷಿ ಜ್ಞಾನ ಪ್ರದೀಪಿಕೆ' ಎಂಬ ಹೊತ್ತಿಗೆಯನ್ನು ಬರೆದಿರುವರು. ಅದರಲ್ಲಿ ಕೃಷಿಯ ಎಲ್ಲ ಮೂಲಭೂತ ತತ್ವಗಳನ್ನು ಸರಳ ಮತ್ತು ವಸ್ತುನಿಷ್ಠವಾಗಿ ಬರೆದಿದ್ದಾರೆ. ಅದರಲ್ಲಿ ಸಾಮಾನ್ಯ ಜನರಿಗೂ ಅರ್ಥವಾಗುವ ಶಬ್ದಗಳಿವೆ. ಸಾಮಾನ್ಯ ಜನರಿಗೂ ಸರಳವಾಗಿ ಅರ್ಥವಾಗುವಂತಿದೆ ಗ್ರಂಥ ಇದು.



ಅವರು ತಮ್ಮ ಹೊತ್ತಿಗೆಯಲ್ಲಿ ಮೊದಲಿಗೆ ಉದಾಹರಣೆಯಾಗಿ ಒಂದು ಕಥೆಯನ್ನು ಹೇಳಿದ್ದಾರೆ:

ಒಂದು ಊರಲ್ಲಿ ಒಬ್ಬ ಕೃಷಿಕನಿದ್ದನು. ಅವನು ಸತ್ಯ ಶುದ್ಧ ಕೃಷಿ ಕಾಯಕ ಯೋಗಿ. ತನ್ನ ದೇಹದಾರ್ಢ್ಯವನ್ನು ಸರಿಯಾಗಿ ಬೆಳೆಸಿಕೊಂಡವನು. ಅದರಂತೆ ತನ್ನ ಹರೆಯದ ಒಬ್ಬ ಮಗಳನ್ನು ಮತ್ತು ಒಬ್ಬ ಮಗನನ್ನು ಆರೋಗ್ಯಕರವಾದ ದೇಹದಾರ್ಢ್ಯವುಳ್ಳವರನ್ನಾಗಿ ಮಾಡಿದ್ದನು. ಅವನು ಉಳುಮೆಗಾಗಿ ಎರಡೇ ಎರಡು ಎತ್ತುಗಳನ್ನು ಸಾಕಿದ್ದನು.

ಆದರೆ ಆ ಎತ್ತುಗಳನ್ನು ಬಹಳ ಚೆನ್ನಾಗಿ ಆರೈಕೆ ಮಾಡಿ ಬೆಳೆಸಿ ಬಲವುಳ್ಳವನ್ನಾಗಿ ಮಾಡಿದ್ದನು. ತನ್ನ ಕೃಷಿಗೆ ಬೇಕಾದ ಬೀಜ, ಗೊಬ್ಬರ ಮತ್ತು ಕೃಷಿ ಸಲಕರಣೆ (ಗಳೆಸಾಮಾನು)ಗಳನ್ನು ಯಾವಾಗಲೂ ಸುಸ್ಥಿತಿಯಲ್ಲಿರುವಂತೆ ತಯಾರು ಮಾಡಿಕೊಂಡು ಇಟ್ಟಿರುತ್ತಿದ್ದನು. ಮತ್ತು ತನ್ನ ಹೊಲದಲ್ಲಿ ತಾನು ತನ್ನ ಮಕ್ಕಳೊಂದಿಗೆ ಸತತುದ್ಯೋಗ ಮಾಡಿ ಬೆವರು ಸುರಿಸಿ ದುಡಿದು ಗರಿಕೆ, ತುಂಗೆ ಮುಂತಾದ ಒಂದೂ ಕಸ ಕಡ್ಡಿ ಇಲ್ಲದಂತೆ ಮಾಡಿ ಸ್ವಚ್ಛವಾಗಿಡುತ್ತಿದ್ದನು.

ಹೊಲವನ್ನು ತನ್ನ ಬಲಿಷ್ಠವಾದ ಎತ್ತುಗಳಿಂದ ಉಳುಮೆ ಮಾಡಿ ಹರಗಿ ಜಮೀನನ್ನು ಒಳ್ಳೆಯ ಸುಸ್ಥಿತಿಯಲ್ಲಿಡುತ್ತಿದ್ದನು. ಚೆನ್ನಾಗಿ ಸಾವಯವ ಗೊಬ್ಬರಗಳಾದ ಕೊಟ್ಟಿಗೆ ಗೊಬ್ಬರ (ಸಗಣಿಗೊಬ್ಬರ) ಕೊಡುವುದು, ಹೊಲದಲ್ಲಿ ಪೀಕು ಇಲ್ಲದಾಗ ಕುರಿಗಳನ್ನು ನಿಲ್ಲಿಸುವುದು, ಇವು ಅವರ ರೂಢಿ.

ಹೊಲದಲ್ಲಿ ಸೆಣಬು ಮುಂತಾದ ಹಸಿರೆಲೆ ಗೊಬ್ಬರದ ಬೆಳೆಯನ್ನು ಬೆಳೆದು ತನ್ನ ಜಮೀನನ್ನು ಮುಗ್ಗು ಹೊಡೆಯುತ್ತಿದ್ದನು. ಬೋರ್ವಿ ಹಿಂಡಿ, ಹೊಂಗೆ ಹಿಂಡಿ, ಕಡಲೆಕಾಯಿ ಹಿಂಡಿ, ಕುಸಬಿ ಹಿಂಡಿ ಮುಂತಾದವುಗಳನ್ನು ಗೊಬ್ಬರದ ಜೊತೆಯಲ್ಲಿ ಉಪಯೋಗಿಸುತ್ತಿದ್ದನು.

ತನ್ನ ಜಮೀನನ್ನು ಒಳ್ಳೆಯ ಮಟ್ಟವಾಗಿ ಮಾಡಿಕೊಂಡಿದ್ದನು. ಇದರಿಂದ ಮಳೆ ಬಿದ್ದಾಗ ಒಂದು ಹನಿ ನೀರೂ ಹೊರಹೋಗುತ್ತಿರಲಿಲ್ಲ, ಕೆಸರು ಮಾಡುತ್ತಿರಲಿಲ್ಲ; ತನ್ನ ಹೊಲದಲ್ಲಿಯ ಮಣ್ಣಿನ ಕಣವೂ ಕೂಡ ಹೊರಗೆ ಹೋಗದಂತೆ ಸಂರಕ್ಷಿಸುತ್ತಿದ್ದನು.

ಮಳೆಯ ಆಶ್ರಯದಲ್ಲಿ ಬೆಳೆಯುವ [illegible]

[illegible]

# ನೇಗಿಲಯೋಗಿ – ಕೈಲಾಸ ಮೂರ್ತಿ

ಎ. ಶ್ರೀನಿವಾಸ ಮೂರ್ತಿ

''ಶೂನ್ಯ ಕೃಷಿ'' ಎಂದು ಕರೆಯಲಾಗುವ 'ಹೊಸ' ಪದ್ಧತಿ ನಿಜಕ್ಕೂ ಅತ್ಯಂತ ಪ್ರಾಚೀನವಾದುದು. ಅದನ್ನು ಅನುಷ್ಠಾನಕ್ಕೆ ತಂದಿರುವವರೊಬ್ಬರ ಪರಿಚಯ ಅವರ ಪದ್ಧತಿಯ ಪರಿಚಯವೂ ಆಗುತ್ತದೆ.

ಆಧುನಿಕ ಯಾಂತ್ರಿಕ-ತಂತ್ರಜ್ಞಾನವನ್ನು ನಮಗೆ ವಿದೇಶೀಯರು ಹೇಳಿಕೊಡಬೇಕಾಗುತ್ತದೆ ಎಂಬ ವಾದದಲ್ಲಿ ಸ್ವಲ್ಪ ತಿರುಳಿದೆ. ಆದರೆ ಬೇಸಾಯ ಪದ್ಧತಿಯನ್ನು ನಾವು ವಿದೇಶೀ ಪರಿಣಿತರಿಂದ ಕಲಿಯಬೇಕಾಗಿಲ್ಲ ಎಂದರೆ ಅದು ಉತ್ಪ್ರೇಕ್ಷೆಯೂ ಅಲ್ಲ, ಒಣ ಜಂಭವೂ ಅಲ್ಲ. ಏಕೆಂದರೆ ನಮ್ಮದು ಪ್ರಾಚೀನ ಕೃಷಿ ಪ್ರಧಾನವಾದ ದೇಶ. ಬಹುಶಃ ಕೃಷಿಯನ್ನು ಚೀನೀಯರೂ ಭಾರತೀಯರೂ ಸೇರಿ ಬಳಕೆಗೆ ತಂದದ್ದು ಎನ್ನಬಹುದು. ಯೂರೋಪಿನ ಅಲೆಮಾರಿ ಜನಾಂಗಕ್ಕೆ ಕೃಷಿ ಎಂಬುದು ಗೊತ್ತಿಲ್ಲದ ಸಮಯದಲ್ಲಿ ಇಲ್ಲಿ ನದೀ ತಟಗಳಲ್ಲಿ ನೆಲೆನಿಂತ ನಾಗರೀಕತೆ ಇತ್ತೆಂಬುದು ಚಾರಿತ್ರಿಕ ಸತ್ಯ.

ಈ ಸತ್ಯವನ್ನು ಇಂದು ಸಿದ್ಧಪಡಿಸಿ ಅನುಸರಿಸಿ ತೋರಿಸುತ್ತಿರುವ ಕೆಲವು ಉತ್ಸಾಹೀ ತರುಣರಲ್ಲಿ ಒಬ್ಬರು ಕೊಳ್ಳೇಗಾಲದ ಬಳಿ ದೊಡ್ಡಂದನವಾಡಿ ಎಂಬ ಗ್ರಾಮದಲ್ಲಿ ಕೃಷಿ ಮಾಡುತ್ತಿರುವ ಎಂ. ಕೆ. ಕೈಲಾಸ ಮೂರ್ತಿ.

ಇವರದ್ದು ಕೃಷಿಕರ ಕುಟುಂಬ. ವೃತ್ತಿಯಿಂದ ಪದವೀಧರ, ಬ್ಯಾಂಕ್ ಅಧಿಕಾರಿ. ಪ್ರವೃತ್ತಿಯಿಂದ ಸಾವಯವ ಕೃಷಿಕ, ಪ್ರಯೋಗಶೀಲ ನಿಸರ್ಗಪ್ರೇಮಿ, ಉತ್ಸಾಹೀ ರೈತರೆಂದರೆ ಅತಿಶಯೋಕ್ತಿಯಲ್ಲ.

ಇವರು ತಮ್ಮ ತೋಟದಲ್ಲಿ ಚಮತ್ಕಾರವೆನ್ನಬಹುದಾದ ಕಾಯಕದಲ್ಲಿ ನಿರತರಾಗಿದ್ದಾರೆ. ಇವರ ಕೃಷಿ ವಿಧಾನವನ್ನು ನೋಡಿಯೇ ಆನಂದಿಸಬೇಕು. ನೇಗಿಲ ಬಳಸದ ನೇಗಿಲಯೋಗಿ ಎನ್ನಬಹುದು.

ಸುಮಾರು ೬ ಎಕರೆ ಜಮೀನಿನಲ್ಲಿ ಕೈಲಾಸ ಮೂರ್ತಿ ನಾನಾ ಬಗೆಯ ಬೆಳೆ ತೆಗೆಯುತ್ತಿದ್ದಾರೆ: ಬಾಳೆ, ತೆಂಗು, ಮಾವು, ಅಡಿಕೆ, ಬತ್ತ, ಪಾಪಾಯ, ನುಗ್ಗೆ, ಇತ್ಯಾದಿ. ವೈವಿಧ್ಯತೆಯೇ ಇವರ ಸಿದ್ಧಾಂತದ ಮೂಲಾಧಾರ.



ಶೂನ್ಯ ಕೃಷಿಯಲ್ಲಿ ಭತ್ತ ( ಮೊದಲವರ್ಷ) : ನೀರು ಕಟ್ಟದೆ ಬೆಳೆದ ಭತ್ತ

ತೋಟದಲ್ಲಿ ಕೃಷಿಗೆ ಬಳಸುತ್ತಿರುವುದು ಕೇವಲ ಎರಡು ಮಚ್ಚು, ಒಂದು ಹಾರೆ, ಒಂದು ಗುದ್ದಲಿ, ನಾಲ್ಕು ಜೊತೆ 'ಗಂ' ಬೂಟುಗಳು, ಇಷ್ಟೆ.

ಭೂಮಿಯ ಫಲವತ್ತತೆ ಸತ್ವಪೂರ್ಣವಾಗಿದೆ. ಕೈಯಿಂದಲೇ ಮಣ್ಣನ್ನು ಎತ್ತಬಹುದು, ಅಷ್ಟು ಮೃದು. ಈ ಮಣ್ಣಿನಲ್ಲಿ ಎರೆ ಹುಳುವೂ ಸೇರಿದಂತೆ ಹತ್ತು ಹಲವಾರು ಸೂಕ್ಷ್ಮ ಜೀವಿಗಳನ್ನು ಕಾಣಬಹುದು. ತೋಟದಲ್ಲಿ 'ಕಳೆ' ಸಮೃದ್ಧವಾಗಿದೆ.

''ಕಳೆ ಕೀಳುವುದಿಲ್ಲವೇ'' ಎಂಬ ಪ್ರಶ್ನೆಗೆ ಕೈಲಾಸ ಮೂರ್ತಿಯವರ ಸ್ಪಷ್ಟ ಉತ್ತರ: 'ಪ್ರಾಣಿ ಸಂಕುಲದಲ್ಲಿ ಹೇಗೆ ಒಂದನ್ನೊಂದು ಅವಲಂಬಿಸಿಕೊಂಡು, ಪರಸ್ಪರ ಪೂರಕವಾಗಿ ಬದುಕು ನಡೆಯುತ್ತದೆಯೋ ಹಾಗೆ ಸಸ್ಯ ಸಂಕುಲದಲ್ಲೂ ಇದೆ. ಆ ನೈಸರ್ಗಿಕ ನಿಯಮವನ್ನೇ ನೀವು ನನ್ನ ತೋಟದಲ್ಲಿ ಕಾಣಬಹುದು. ಬೇಡದ ಗಿಡವನ್ನು ಇನ್ನೊಂದು ಗಿಡವೇ ತೆಗೆಯುತ್ತದೆ.'

ಕೆಲವು ತಿಂಗಳ ಹಿಂದೆ ಇವರ ತೋಟದಲ್ಲಿ ಬಸವನ ಹುಳುವಿನ ಕಾಟವಿತ್ತು. ಮೂರ್ತಿ ಧೃತಿಗೆಡಲಿಲ್ಲ. ಕೀಟನಾಶಕಗಳನ್ನು ಬಳಸಬಾರದೆಂಬ ದೃಢನಿರ್ಧಾರ ಅವರದು. ನೋಡನೋಡುತ್ತಿದ್ದಂತೆ ಒಂದು ಬಗೆಯ ಕೆಂಪು ಇರುವೆಗಳು ಸೈನಿಕರಂತೆ ಬಸವನ ಹುಳುಗಳ ಮೇಲೆ ದಾಳಿ ಮಾಡಿ ತೋಟ ರಕ್ಷಿಸಿದುವಂತೆ. ಸಾವಿರಾರು ಬಸವನ ಹುಳುಗಳ ಚಿಪ್ಪುಗಳು ತೋಟದಲ್ಲಿ ಸಾವಯವ ಗೊಬ್ಬರವಾಗಿ ಮಣ್ಣಿನಲ್ಲಿ ಬೆರೆತಿದ್ದವು. ಈ ನಿಯಂತ್ರಣ ನಿಸರ್ಗವೇ ಮಾಡಿದೆ ಎಂದು ಅವರ ಅಂಬೋಣ.

ಈ ತೋಟದಲ್ಲಿ ಇವರು ಯಾವ ಬಗೆಯ ಕೃತಕ ಗೊಬ್ಬರವನ್ನೂ ಹತ್ತು ವರ್ಷಗಳಿಂದ ಬಳಸಿಲ್ಲ. ಕ್ರಿಮಿನಾಶಕಗಳು ಕೀಟನಾಶಕಗಳು ಇವರ ತೋಟದ ಬಳಿ ಸುಳಿದಿಲ್ಲ. ಸೂಕ್ಷ್ಮವಾಗಿ ಗಮನಿಸಿದಲ್ಲಿ ಇವರು ತೋಟದಲ್ಲಿ ಕೃಷಿ ಮಾಡುತ್ತಿರುವುದು ಸಾವಿರಾರು ಸೂಕ್ಷ್ಮ ಜೀವಿಗಳಿಂದಲೇ ಎನ್ನಬಹುದು. ಈ ಎಲ್ಲಾ ಕೀಟ, ಕ್ರಿಮಿ, ಸೂಕ್ಷ್ಮ ಜೀವಿಗಳಿಗೆ ಬದುಕಲು ಅವಕಾಶ ಕೊಟ್ಟು ಈ ಮಣ್ಣನ್ನು ಈ ದೀನಜೀವಿಗಳೇ ಫಲವತ್ತಾಗಿಸುವಂತೆ ಮಾಡಿದ್ದಾರೆ ಕೈಲಾಸಮೂರ್ತಿಯವರು. ತೋಟದಲ್ಲಿ ಹಾವುಗಳು ಹರಿದಾಡುತ್ತಿರುವುದನ್ನು ನೋಡಬಹುದು. ವೈವಿಧ್ಯಮಯವಾದ ಫಸಲು ಸೊಂಪಾಗಿ ಬೆಳೆದಿದೆ.

ಹಾವಿನಿಂದ ಇಲಿಗಳ ನಿಯಂತ್ರಣ; ಕೀಟಗಳ ನಿಯಂತ್ರಣ ಪಕ್ಷಿ, ಜೇಡಗಳಿಂದಾಗುತ್ತಿದೆ. ಈ ತೋಟದಲ್ಲಿ ನಾನಾ ಬಗೆಯ ವಿವಿಧ ಜಾತಿಯ, ಗಾತ್ರದ ಜೇಡಗಳನ್ನು ನೋಡಬಹುದು. ಈ ಎಲ್ಲ ಜೀವಿಗಳಿಗೆ ಇವರು ಒಂದು ರೀತಿಯಲ್ಲಿ ರಕ್ಷಕರಾಗಿದ್ದಾರೆ. ಸಹಬಾಳ್ವೆ-ಹೋರಾಟ ಈ ಜೀವಿಗಳ ಮಧ್ಯೆ ಇದೆ. ಇವರು ಯಾವ ಜೀವಿಯನ್ನೂ ಕೊಲ್ಲುವುದಿಲ್ಲ. ಎಲ್ಲ ಕೆಲಸವೂ ನಿಸರ್ಗದ್ದೇ, ಅದರ ನಿಯಮಕ್ಕನುಸಾರ. ಯಾವ ಪ್ರಾಣಿಯೂ ಇವರ ತೋಟಕ್ಕೆ ಹಾನಿ ಮಾಡಿಲ್ಲ, ಮಾಡುತ್ತಿಲ್ಲ.

ಶೂನ್ಯ ಕೃಷಿಯಲ್ಲಿ ಹಿಪ್ಪನೇರಳೆ, ನುಗ್ಗೆ, ಅಡಿಕೆ. (ಶ್ರೀಮತಿಯೊಂದಿಗೆ)



ಈ ಕೃಷಿ ಪದ್ಧತಿಯನ್ನೇ ನಾನು ಪ್ರಸಿದ್ಧ ಜಪಾನೀ ತಜ್ಞ ಫುಕೋವುಕಾರದಿಂದ ಪ್ರೇರಿತನಾಗಿ ಅನುಸರಿಸುತ್ತಿದ್ದೇನೆ, ಎನ್ನುತ್ತಾರೆ ಮೂರ್ತಿ. ಪೂರ್ವಿಕರ ಅನುಭವ, ಅಧ್ಯಯನ, ನನ್ನ ಪರಾಮರ್ಶೆ ನನಗೆ ಸಹಾಯಕವಾಗಿವೆ ಎನ್ನುತ್ತಾರೆ.

ಬಾಲ್ಯದಲ್ಲಿ ಉಬ್ಬಸ ರೋಗದಿಂದ ನರಳುತ್ತಿದ್ದು, ವ್ಯಾಯಾಮ ಮಾಡಿದರೆ ಉಬ್ಬಸ ನಿಯಂತ್ರಣದಲ್ಲಿರುತ್ತದೆ ಎಂಬ ವೈದ್ಯರೊಬ್ಬರ ಸಲಹೆಯಂತೆ ಇವರು ವ್ಯಾಯಾಮಕ್ಕಾಗಿ ಕೃಷಿಕರಾದರಂತೆ. ಈಗ ಪ್ರಯೋಗಶೀಲ ಕೃಷಿಕ. ಈ ಕೃಷಿಯಲ್ಲಿ ಬಂಡವಾಳ ಸೊನ್ನೆ. ಇಳುವರಿ ಅಧಿಕ. ಲಾಭದಾಯಕ ಕೂಡ. ಲಾಭ, ನೆಲದ ರಕ್ಷಣೆ.

ಹಳೆಯ ಕಟ್ಟಡದ ಕೊರಕಲಿನಲ್ಲಿ ಅರಳೀ ಸಸಿ ನಾವೆಲ್ಲ ನೋಡಿಲ್ಲವೇ. ಇದನ್ನು ನೆಟ್ಟವರಾರು ? ಮಳೆ ಬಿದ್ದೊಡನೆ ನೆಲದಿಂದ ಸಾವಿರಾರು ಸಸ್ಯಗಳು ಉದ್ಭವಿಸುವುದಕ್ಕೆ ಯಾರು ನಿಯಾಮಕ, ಎನ್ನುತ್ತಾರೆ ಮೂರ್ತಿ.

ನಿಸರ್ಗದೊಡನೆ ಹಸ್ತಕ್ಷೇಪ ಮಾಡದೆ ಯಾವ

(೫೬ನೇ ಪುಟ ನೋಡಿ)

# ಸಿಯಾಟಲ್‌ನಲ್ಲಿ ಭಾರತದ ಕಾರ್ಯಸೂಚಿ

ವೈ. ಜಿ. ಮುರಳೀಧರ

ಈ ವರ್ಷ ನವೆಂಬರ್ 30ರಿಂದ ಡಿಸೆಂಬರ್ 3ರವರೆಗೆ ಅಮೆರಿಕದ ಸಿಯಾಟಲ್‌ನಲ್ಲಿ ವಿಶ್ವವ್ಯಾಪಾರ ಸಂಘಟನೆಯ ಸಚಿವ ಮಟ್ಟದ ಅಧಿವೇಶನ ನಡೆಯಲಿದೆ. ಭಾರತವೂ ಸೇರಿದಂತೆ ಅಭಿವೃದ್ಧಿಶೀಲ ದೇಶಗಳಿಗೆ ಈ ಅಧಿವೇಶನದ ಕಾರ್ಯಕಲಾಪಗಳು, ಹಾಗೂ ಚರ್ಚೆಗೆ ಬರಲಿರುವ ವಿಷಯಗಳು ಮಹತ್ವದ್ದಾಗಿವೆ.

ವಿಶ್ವ ವ್ಯಾಪಾರ ಸಂಘಟನೆಯಲ್ಲಿ ಈಗ 135 ಸದಸ್ಯ ದೇಶಗಳಿದ್ದು, ಸಿಯಾಟಲ್ ಅಧಿವೇಶನದ ನಂತರ ಅದು 150ಕ್ಕೆ ಏರಬಹುದು. ಈ ಸಂಘಟನೆಯಲ್ಲಿ ಅಭಿವೃದ್ಧಿಶೀಲ ದೇಶಗಳ ಸಂಖ್ಯೆ ಹೆಚ್ಚಾಗಿದ್ದರೂ ಭಿನ್ನಾಭಿಪ್ರಾಯಗಳಿಂದಾಗಿ ಅವು ಶಕ್ತಿಯುತವಾಗಿಲ್ಲ. ಕೆಲ ದೇಶಗಳು ಅಭಿವೃದ್ಧಿ ಹೊಂದಿರುವ ದೇಶಗಳೊಡನೆ ಸ್ನೇಹದಿಂದಿರುವುದೇ ತಮಗೆ ಒಳ್ಳೆಯದೆಂದು ನಂಬಿವೆ. ಹೀಗಾಗಿ ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಒಂದು ಶಕ್ತಿಯುತ ಲಾಬಿ ಇಲ್ಲವಾಗಿದೆ. ಅಭಿವೃದ್ಧಿಶೀಲ ದೇಶಗಳೆಲ್ಲ ಒಂದಾಗಬೇಕೆಂಬ ಭಾರತದ ಸೂಚನೆ ಇನ್ನೂ ಫಲಕಾರಿಯಾಗಿಲ್ಲ.

ಸಿಯಾಟಲ್‌ನಲ್ಲಿ ನಡೆಯುವ ಅಧಿವೇಶನ ನಾಲ್ಕು ಕಾರಣಗಳಿಂದ ಅಭಿವೃದ್ಧಿಶೀಲ ದೇಶಗಳಿಗೆ ಮುಖ್ಯವಾಗಿದೆ. ಉರುಗ್ವೆಯಲ್ಲಿ ಮಾಡಿಕೊಂಡ ಒಪ್ಪಂದಗಳಲ್ಲಿ ಅಡಗಿರುವ ಲೋಪದೋಷಗಳು, ಪಕ್ಷಪಾತ, ಅನ್ಯಾಯ ಇತ್ಯಾದಿಗಳನ್ನು ಸರಿಪಡಿಸಲು ಸಿಯಾಟಲ್ ಅಧಿವೇಶನ ಒಂದು ಅವಕಾಶವಾಗಿದೆ. ಅಭಿವೃದ್ಧಿ ಹೊಂದುತ್ತಿರುವ ದೇಶಗಳು ಇದನ್ನು ಉಪಯೋಗಿಸಿಕೊಳ್ಳಬೇಕು.

ಎರಡನೆಯದಾಗಿ, ಈಗ ಮಾಡಿಕೊಂಡಿರುವ ಒಪ್ಪಂದಗಳಿಂದ ಉಂಟಾಗಬೇಕಿದ್ದ ಬದಲಾವಣೆ, ಬರಬೇಕಾಗಿದ್ದ ಫಲಿತಾಂಶಗಳ ಬಗ್ಗೆ ಚರ್ಚೆ ಅಗತ್ಯವಾಗಿದೆ. ಕಾರಣ, ಬಲಿಷ್ಠ ರಾಷ್ಟ್ರಗಳು ಕೆಲವು ಒಪ್ಪಂದಗಳನ್ನು ಸಂಪೂರ್ಣವಾಗಿ ಜಾರಿಗೊಳಿಸದೆ ಇರುವುದರಿಂದ, ಅಭಿವೃದ್ಧಿ ಹೊಂದುತ್ತಿರುವ ದೇಶಗಳು ಹಾಗೂ ಅತೀ ಬಡ ದೇಶಗಳು, ತಮಗೆ ದೊರೆಯಬೇಕಿದ್ದ ಫಲಗಳಿಂದ ವಂಚಿತವಾಗಿವೆ. ಮುಖ್ಯವಾಗಿ ಕೃಷಿ, ವಸ್ತ್ರ ಇತ್ಯಾದಿಗಳ ವಿಷಯದಲ್ಲಿ ದೇಶಗಳಿಗೆ ಬರಬೇಕಿದ್ದ ಲಾಭ ಬಂದಿಲ್ಲ.

ವಿಶ್ವ ವ್ಯಾಪಾರ ಸಂಘಟನೆಯು ಉರುಗ್ವೆಯಲ್ಲಿ ಮಾಡಿದ ಕೆಲವು ಒಪ್ಪಂದಗಳು ಇನ್ನೂ ಜಾರಿಗೊಳ್ಳದೆ, ಅಭಿವೃದ್ಧಿಶೀಲ ದೇಶಗಳಿಗೆ ತೊಂದರೆ ಆಗಿದೆ. ಜೊತೆಗೆ ಬಲಿಷ್ಠ ರಾಷ್ಟ್ರಗಳು ಸಿಯಾಟಲ್ ಅಧಿವೇಶನದಲ್ಲಿ ಕೆಲವು ಹೊಸ ವಿಷಯಗಳನ್ನು ಚರ್ಚೆಗೆ ಒಳಪಡಿಸಲು ಹವಣಿಸುತ್ತಿವೆ. ಇದುವರೆಗೂ ಒಳಪಡದ ಉದ್ಯೋಗ, ಕಾರ್ಮಿಕರು, ಸ್ಪರ್ಧಾ ನಿಯಮ, ಇ-ಕಾಮರ್ಸ್ ಇತ್ಯಾದಿಗಳನ್ನು ಒಳಪಡಿಸಬೇಕೆಂಬ ಒತ್ತಾಯ ಹೆಚ್ಚಿದೆ.

ಈ ಹಿನ್ನೆಲೆಯಲ್ಲಿ ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಪೈಕಿ ಹೆಚ್ಚು ಶಕ್ತಿಶಾಲಿಯಾಗಿರುವ ಭಾರತ ಸಿಯಾಟಲ್ ಅಧಿವೇಶನಕ್ಕೆ ಹೋಗುವ ಮುನ್ನ ಬಹಳ ಎಚ್ಚರಿಕೆಯಿಂದ, ಗಂಭೀರವಾಗಿ ತನ್ನ ಸಿದ್ಧತೆ ನಡೆಸಬೇಕಾಗಿದೆ.

### ಕೃಷಿ ಸಂಬಂಧಿತ ವಿಷಯ ಮುಖ್ಯ

ಭಾರತ ಮತ್ತು ಇತರ ಅಭಿವೃದ್ಧಿಶೀಲ ದೇಶಗಳು ಕೃಷಿಗೆ ಸಂಬಂಧಪಟ್ಟ ವಿಷಯವನ್ನು ಸಿಯಾಟಲ್ ಅಧಿವೇಶನದಲ್ಲಿ ಕೈಗೆತ್ತಿಕೊಳ್ಳಬೇಕು. ವಿಶ್ವವ್ಯಾಪಾರ ಸಂಘಟನೆ ಅಸ್ತಿತ್ವಕ್ಕೆ ಬರುವವರೆಗೂ ಕೃಷಿ ಅದರ ವಿಷಯವಾಗಿರಲಿಲ್ಲ. ಕೃಷಿ ಗ್ಯಾಟ್‌ನಲ್ಲಿರಲಿಲ್ಲ. ಆನಂತರ ಕೃಷಿಗೆ ಸಂಬಂಧಿಸಿದ ಒಪ್ಪಂದ ಮಾಡಿಕೊಳ್ಳಲಾಯಿತು. ಈ ಒಪ್ಪಂದ 1999ರ ಅಂತ್ಯದಲ್ಲಿ ವಿಮರ್ಶೆಗೆ ಬರಲಿದೆ.

ಭಾರತವು ಕೃಷಿ ಪ್ರಧಾನವಾದ ದೇಶವಾಗಿರುವುದರಿಂದ, ಈ ಬಗ್ಗೆ ಎಚ್ಚರ ಅಗತ್ಯ. ದೇಶದ ಶೇ. 75 ಜನಸಂಖ್ಯೆ ಕೃಷಿಯನ್ನು ಅವಲಂಬಿಸಿದೆ. ಒಂದು ಸಮೀಕ್ಷೆಯ ಪ್ರಕಾರ ಸುಮಾರು 10 ಕೋಟಿ ಕೃಷಿ ಕಾರ್ಮಿಕರಿದ್ದಾರೆ. ವಿದೇಶೀ ವಿನಿಮಯದಲ್ಲಿ ಕೃಷಿಯ ಪಾಲು ಸುಮಾರು ಶೇ. 18. ಇದನ್ನು ಗಮನಿಸಿದಾಗ ಕೃಷಿಗೆ ಸಂಬಂಧಪಟ್ಟ ಯಾವುದೇ ಒಪ್ಪಂದವೂ ದೇಶದ ಪ್ರಗತಿಯ ಮೇಲೆ ಪರಿಣಾಮ ಉಂಟುಮಾಡುವುದು ಖಚಿತ.

ಅಂತರರಾಷ್ಟ್ರೀಯ ಮಟ್ಟದಲ್ಲಿ ಕೃಷಿ ಸಂಬಂಧವಾದ ವ್ಯಾಪಾರದಲ್ಲಿ ಈಗ ತಲೆದೋರಿರುವ ಸಮಸ್ಯೆಗೆ ಕಾರಣ ಬಲಿಷ್ಠ ರಾಷ್ಟ್ರಗಳು ತಮ್ಮ ರೈತರಿಗೆ ನೀಡುತ್ತಿರುವ ಸಹಾಯಧನ. ಇದರ ಪರಿಣಾಮವೆಂದರೆ ಅಧಿಕ ಉತ್ಪಾದನೆ ಹಾಗೂ ಉತ್ಪಾದನೆಯನ್ನು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಕಡಿಮೆ ಬೆಲೆಗೆ ಮಾರಾಟ ಮಾಡುವುದು. ಅಭಿವೃದ್ಧಿಶೀಲ ದೇಶಗಳು ಈ ಬೆಲೆಗೆ ಮಾರಾಟ ಮಾಡಲಾಗದೆ ನಷ್ಟ ಅನುಭವಿಸುತ್ತಿವೆ. ಶ್ರೀಮಂತ ದೇಶಗಳು ತಮ್ಮ ಉತ್ಪನ್ನಗಳನ್ನು ತಂದು ಸುರಿಯುವುದನ್ನು ತಪ್ಪಿಸಬೇಕು.



**ಕೋಳಿ** : ಏಯ್... ಏನಿವತ್ತು ಕೂಗ್ಲೇ ಇಲ್ಲ! ಬೆಳಗಾದಂಗ್ ಕಾಣತ್ತೆ.

**ಹುಂಜ** : (ನಿದ್ದೆಯಲ್ಲಿ) ಹಾಳಾದ್ದು ಟೈಂಪೀಸು ಅಲಾರಮ್ಮೇ ಹೊಡೀಲಿಲ್ಲ... ನೀನಾದ್ರೂ ಎಬ್ಬಿಸ್ಬಾರ್ದಾಗಿತ್ತಾ ?

**ಕೋಳಿ** : ಅದ್ಕೇ ಫಾರಿನ್ನಿಂದು ಬ್ಯಾಡಾಂತ ಬಡ್ಕಂಡೆ, ಕೇಳಿದ್ಯಾ ನೀನು?

ಕೃಷಿಗೆ ಸಂಬಂಧಪಟ್ಟ ಒಪ್ಪಂದದಲ್ಲಿ ನಾಲ್ಕು ವಿಷಯಗಳನ್ನು ಸೇರಿಸಲಾಗಿದೆ. ಅವುಗಳೆಂದರೆ ದೇಶೀಯ ಸಬ್ಸಿಡಿ, ರಫ್ತು ಸಬ್ಸಿಡಿ, ಮಾರುಕಟ್ಟೆಗೆ ಅವಕಾಶ ಹಾಗೂ ಆಹಾರ ಧಾನ್ಯಗಳ ದಾಸ್ತಾನು. ವಿಶ್ವ ವ್ಯಾಪಾರ ಸಂಘಟನೆಯ ಎಲ್ಲ ಸದಸ್ಯ ದೇಶಗಳಿಗೂ ಕೃಷಿ ವ್ಯಾಪಾರದ ಲಾಭ ದೊರೆಯಬೇಕಾದರೆ ಬಲಿಷ್ಠ ರಾಷ್ಟ್ರಗಳು ನೀಡುತ್ತಿರುವ ಅಧಿಕ ಸಹಾಯಧನ ರದ್ದಾಗಬೇಕು. ಎರಡನೆಯದಾಗಿ ರಫ್ತು ಸಬ್ಸಿಡಿಯಲ್ಲಿ ಬದಲಾವಣೆ ಅಗತ್ಯ. ಈ ಸಹಾಯಧನ ಕಡಿಮೆ ಆಗಬೇಕು. ಇಷ್ಟಾಗಿಯೂ ಭಾರತ ಬಲಿಷ್ಠ ರಾಷ್ಟ್ರಗಳನ್ನು ಎದುರಿಸುವುದು ಕಷ್ಟವಾಗಬಹುದು. ಕೆಲವು ತಜ್ಞರ ಪ್ರಕಾರ ಕೃಷಿಗೆ ಸಂಬಂಧಪಟ್ಟ ಒಪ್ಪಂದವನ್ನು ಐದು ಅಥವಾ ಹತ್ತು ವರ್ಷಗಳಿಗೆ ವಿಸ್ತರಿಸುವುದು ಸೂಕ್ತ. ಸಿಯಾಟಲ್ ಅಧಿವೇಶನದಲ್ಲಿ ಭಾರತ ಇದಕ್ಕೆ ಪ್ರಯತ್ನಿಸಬೇಕು.

### ಎಚ್ಚರ ಅಗತ್ಯ

ಕಾರ್ಮಿಕರಿಗೆ ಸಂಬಂಧಿಸಿದಂತೆ ಕೆಲವು ವಿಷಯಗಳನ್ನು ವಿಶ್ವ ವ್ಯಾಪಾರ ಸಂಘಟನೆಯ ವ್ಯಾಪ್ತಿಗೆ ಒಳಪಡಿಸಬೇಕೆಂದು ಕೆಲವು ಬಲಿಷ್ಠ ರಾಷ್ಟ್ರಗಳು ಹಿಂದಿನಿಂದಲೂ ಒತ್ತಾಯ ಮಾಡುತ್ತಿವೆ. ಸಿಂಗಪೂರ್‌ನಲ್ಲಿ ನಡೆದ ಅಧಿವೇಶನದಲ್ಲಿ ಈ ಬಗ್ಗೆ ಚರ್ಚಿಸಲಾಗಿತ್ತು. ಆದರೆ, ಕಾರ್ಮಿಕರ ವಿಷಯವನ್ನು ವಿಶ್ವ ಕಾರ್ಮಿಕ ಸಂಸ್ಥೆಗೆ ವರ್ಗಾಯಿಸಿಕೊಡಬೇಕೆಂದೂ, ಆ ವಿಷಯವನ್ನು ವಿಶ್ವ ವ್ಯಾಪಾರ ಸಂಘಟನೆಯಿಂದ ಹೊರಗೆ ಇಡಬೇಕೆಂದೂ ನಿರ್ಧರಿಸಲಾಯಿತು. ಸಿಯಾಟಲ್ ಅಧಿವೇಶನದಲ್ಲಿ ಈ ವಿಷಯ ಮತ್ತೊಮ್ಮೆ ಚರ್ಚೆಗೆ ಒಳಪಡುವ ಸಂಭವವಿದೆ. ಈಗಾಗಲೇ ಅಮೆರಿಕ ಇದರ ಬಗ್ಗೆ ಒಂದು ಗೊತ್ತುವಳಿಯನ್ನು ಸಿದ್ಧಗೊಳಿಸಿದೆ. ಆದ್ದರಿಂದ ಎಚ್ಚರಿಕೆ ಅಗತ್ಯ.

ಯಾವುದೇ ಕಾರಣಕ್ಕೂ ಭಾರತ ಕಾರ್ಮಿಕರ ವಿಷಯವನ್ನು ವಿಶ್ವವ್ಯಾಪಾರ ಸಂಘಟನೆಯ ವ್ಯಾಪ್ತಿಗೆ ಒಳಪಡಿಸಲು ಒಪ್ಪಬಾರದು. ಇದಕ್ಕೆ ಕಾರಣ ಎರಡು : ಭಾರತವೂ ಸೇರಿದಂತೆ ಬಡ ದೇಶಗಳಲ್ಲಿ ಕಾರ್ಮಿಕರ ಸ್ಥಿತಿಗತಿಗಳು ಹಾಗೂ ಅವರ ಉದ್ಯೋಗ ಪರಿಸರ ಸಮರ್ಪಕವಾಗಿಲ್ಲ. ಮತ್ತು ಅಭಿವೃದ್ಧಿಶೀಲ ದೇಶಗಳಲ್ಲಿನ ಕಾರ್ಮಿಕ [illegible] ಭಾರತದ ಬಗ್ಗೆ [illegible]

ಸ್ಪರ್ಧಾ ನಿಯಮ : [illegible]

ನಿಯಮವನ್ನು ಅನುಷ್ಠಾನಗೊಳಿಸಲು ಯೋಜಿಸುತ್ತಿವೆ. ಉದಾ: ಯುರೋಪಿಯನ್ ಒಕ್ಕೂಟ ಹಾಗೂ ಅಮೇರಿಕ ಇದರ ಬಗ್ಗೆ ಕಾಳಜಿ ಹೊಂದಿವೆ. ಆದರೆ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಸ್ಥಿತಿಗತಿಯನ್ನು ಗಮನಿಸಿದಾಗ ಸ್ಪರ್ಧಾ ನಿಯಮಕ್ಕೆ ಇನ್ನೂ ಕಾಲ ಕೂಡಿಬಂದಿಲ್ಲವೆಂದು ತೋರುತ್ತದೆ.

ಭಾರತದಲ್ಲಿ ಇತ್ತೀಚೆಗೆ ಕಂಡುಬರುತ್ತಿರುವ ಸ್ವಾಧೀನ ಹಾಗೂ ವಿಲೀನಗಳ ಹಿನ್ನೆಲೆಯಲ್ಲಿ ಸ್ಪರ್ಧಾನಿಯಮದ ಅಗತ್ಯ ಕಂಡುಬರುತ್ತಿದೆ. ಉದಾಹರಣೆಗೆ, ಬ್ರೂಕ್‌ಬಾಂಡ್ ಮತ್ತು ಯೂನಿಲಿವರ್ ವಿಲೀನಗೊಂಡಿದೆ; ಗ್ಲಾಕ್ಸೊ ಕಂಪೆನಿಯನ್ನು ವೆಲ್‌ಕಮ್ ಸ್ವಾಧೀನಪಡಿಸಿಕೊಂಡಿವೆ. ಇದರಿಂದ ಪರಸ್ಪರ ಸ್ಪರ್ಧೆ ಮಾಯವಾಗಿ ಮತ್ತೊಮ್ಮೆ ಏಕಸ್ವಾಮ್ಯತೆ ಕಂಡುಬರುತ್ತಿದೆ. ಇದು ನಾಗರಿಕರಿಗೆ ಒಳ್ಳೆಯದೋ ಅಲ್ಲವೋ ಎಂಬುದನ್ನು ವಿಶ್ಲೇಷಿಸಬೇಕಾಗಿದೆ. ಇದು ಬಳಕೆದಾರರ ಹಿತವನ್ನು ಹೆಚ್ಚಿಸಲಿದೆಯೆ ಎಂಬುದನ್ನು ಸಹ ನೋಡಬೇಕಿದೆ.

**ಗ್ರಹಣ**

ದೂರದರ್ಶನದಲ್ಲಿ
ಸೂರ್ಯಗ್ರಹಣ
ದೂರದರ್ಶನಕ್ಕೂ
ಹಿಡಿದಿದೆ
*KEB ಗ್ರಹಣ*

**- ಟಿ. ನಾರಾಯಣ ಸ್ವಾಮಿ**

ಅಂತರರಾಷ್ಟ್ರೀಯ ಮಟ್ಟದಲ್ಲಿ ಸ್ಪರ್ಧಾ ನಿಯಮಕ್ಕೆ ಸಹಿ ಹಾಕುವ ಮುನ್ನ ರಾಷ್ಟ್ರಮಟ್ಟದಲ್ಲಿ ಖಚಿತವಾದ ನಿಯಮ ಅಗತ್ಯವಾಗಿದೆ. ಭಾರತದಲ್ಲಿ ಈಗಿರುವ ಏಕಸ್ವಾಮ್ಯ ನಿರ್ಬಂಧದ ವ್ಯಾಪಾರ ಕಾಯ್ದೆ ಕೆಲವು ದೋಷಗಳಿಂದ ಕೂಡಿದೆ. ವಿಲೀನ ಹಾಗೂ ಸ್ವಾಧೀನದ ಬಗ್ಗೆ ಈ ಕಾಯ್ದೆ ವಾಸ್ತವಿಕವಾಗಿಲ್ಲ; ಕೇವಲ ಅನುಚಿತ ವ್ಯವಹಾರದ ಬಗ್ಗೆ ಕೆಲವು ಕ್ರಮಗಳನ್ನು ಕೈಗೊಳ್ಳುವ ಅಧಿಕಾರ ಹೊಂದಿದೆ, ಅಷ್ಟೇ. ಇದನ್ನು ಪರಿಪಡಿಸಿ ನಂತರ ಒಂದು ಪ್ರತ್ಯೇಕ ಸ್ಪರ್ಧಾ ನಿಯಮವನ್ನು ರೂಪಿಸುವ ಅಗತ್ಯವಿದೆ. ಅಲ್ಲಿಯವರೆಗೆ ವಿಶ್ವ ವ್ಯಾಪಾರ ಸಂಘಟನೆಯಲ್ಲಿ ಇದರ ಬಗ್ಗೆ ಯಾವ ಕ್ರಮವನ್ನು ಕೈಗೊಳ್ಳುವುದೂ ಉಚಿತವಲ್ಲ.

ಸಿಯಾಟ್ಲ್ ಅಧಿವೇಶನದಲ್ಲಿನ ಕಾರ್ಯಸೂಚಿ ಇನ್ನೂ ಹಲವಾರು ವಿಷಯಗಳನ್ನು ಒಳಗೊಂಡಿದೆ. ಉದಾಹರಣೆಗೆ ಪೇಟೆಂಟ್ ಕಾಯ್ದೆ, ದೂರುಗಳ ಪರಿಹಾರ ವ್ಯವಸ್ಥೆ, ಇತ್ಯಾದಿ. ಭಾರತದ ಪ್ರತಿನಿಧಿಗಳು ಅತ್ಯಂತ ಗಂಭೀರವಾಗಿ ಇವನ್ನೆಲ್ಲಾ ವಿಮರ್ಶಿಸಿ ರಾಷ್ಟ್ರದ ಹಿತವನ್ನು ಕಾಯಬೇಕಾಗಿದೆ.

**ವೈ. ಜಿ. ಮುರಳೀಧರ**
೨೨೯, ೫ನೇ 'ಸಿ' ರಸ್ತೆ, ರೆಮ್ಕೋ ಬಡಾವಣೆ, ವಿಜಯನಗರ,
ಬೆಂಗಳೂರು - ೪೦

## ಸತ್ಯ ಶುದ್ಧ ಕೃಷಿ

*(೫೩ ನೇ ಪುಟದಿಂದ)*

ಉತ್ಪತ್ತಿಯು ಆ ಹಳ್ಳಿಯ ಇತರರದಕ್ಕಿಂತಲೂ ಬಹಳ ಹೆಚ್ಚು ಬರುತ್ತಿತ್ತು. ಎಂಟು ಎತ್ತು ಇಟ್ಟುಕೊಂಡು ಇವನ ನಾಲ್ಕು ಪಟ್ಟು ಜಮೀನಿಟ್ಟುಕೊಂಡು ಉಳುಮೆ ಮಾಡುತ್ತಿದ್ದ ರೈತ ಇವನಷ್ಟು ಕೃಷಿ ಉತ್ಪತ್ತಿ ತೆಗೆಯುತ್ತಿರಲಿಲ್ಲ. ಆದುದರಿಂದ ಆ ಊರ ದರಿದ್ರ ಜನರೆಲ್ಲ ಕೂಡಿ ಹೊಟ್ಟೆಕಿಚ್ಚು ಪಟ್ಟು ಇವನು ಮಾಟ, ಮಂತ್ರ ವಿದ್ಯೆಗಳಿಂದ ತಮ್ಮ ರಾಸುಗಳಲ್ಲದೆ ಕಾಳುಗಳನ್ನೆಲ್ಲ ಎಳೆದುಕೊಳ್ಳುತ್ತಿದ್ದಾನೆಂದು ನ್ಯಾಯಾಲಯಕ್ಕೆ ದೂರು ನೀಡಿದರು. ನ್ಯಾಯಾಲಯದಲ್ಲಿ ನ್ಯಾಯಾಧೀಶರು ಎಲ್ಲಾ ಸವಿಸ್ತಾರವಾದ ತನಿಖೆ ಮಾಡಿದರು. ಆ ತನಿಖೆಯಿಂದ ಊರಲ್ಲಿ ಬೇರೆ ಬೇರೆ ದೊಡ್ಡ ರೈತರು ಎಂಟು ಎತ್ತು ಇಟ್ಟುಕೊಂಡು ನಾಲ್ಕರಷ್ಟು ಹೊಲ ಉಳ್ಳವರು ದರಿದ್ರರಾಗಿದ್ದುದು ಅವರ ಅಪಕ್ವ ದುಡಿಮೆಯಿಂದಾಗಿ ಎಂದು ತಿಳಿಯಿತು. ಅಷ್ಟೇ ಅಲ್ಲ, ತಮ್ಮ ಎತ್ತುಗಳನ್ನು ಸರಿಯಾಗಿ ನೋಡಿಕೊಳ್ಳದುದರಿಂದ ಅವು ಬಲಹೀನವಾಗಿದ್ದವು.

ಹೊಲದಲ್ಲಿ ದುಡಿಯುವವರು ಅನಾರೋಗ್ಯದಿಂದ ಬಳಲಿದ್ದು ಸತತುದ್ಯೋಗ ಮಾಡಲು ಅನರ್ಹರೆಂದು ತಿಳಿದುಬಂತು. ಇದಲ್ಲದೆ ತಮ್ಮ ಹೊಲವನ್ನು ಸಮಮಟ್ಟದಲ್ಲಿ ಇಟ್ಟಿರಲಿಲ್ಲ. ಗೊಬ್ಬರವನ್ನು ಸರಿಯಾಗಿ ಹಾಕುತ್ತಿರಲಿಲ್ಲ. ಅವರ ಹೊಲಗಳಲ್ಲಿ ಕಸ ಕಡ್ಡಿಗಳು ಹೆಚ್ಚಾಗಿ ಬೆಳೆದುನಿಂತಿದ್ದವು. ಒಡ್ಡು ಹಾಕದೆ ಇದ್ದುದರಿಂದ ಮಳೆ ಬಿದ್ದಾಗ ನೀರು ಹರಿದು ಹೋಗಿ ಜಮೀನಿನಲ್ಲಿಯ ಫಲವತ್ತಾದ ಮಣ್ಣೆಲ್ಲವೂ ಬೇರೆ ಕಡೆಗೆ ಸ್ಥಳಾಂತರವಾಗುತ್ತಿತ್ತು. ಜಮೀನುಗಳು ಬಡವಾಗುತ್ತಿದ್ದವು. ಇದೆಲ್ಲವನ್ನೂ ತಿಳಿದುಕೊಂಡ ನ್ಯಾಯಾಧೀಶರು ಆ ಎರಡು ಎತ್ತುಗಳನ್ನು ಇಟ್ಟುಕೊಂಡು ಸತ್ಯ ಶುದ್ಧ ಕೃಷಿ ಕಾಯಕ ಯೋಗಿಯು ಯಾವ ಮಾಟ ಮಂತ್ರ ತಂತ್ರಗಳನ್ನಾಗಲಿ ಪ್ರಯೋಗಿಸಿ ಮೋಸ ಮಾಡಿಲ್ಲ ಎಂದು ಹೇಳಿದರು. ಸತತುದ್ಯೋಗದಿಂದ ಹೆಚ್ಚು ಕೃಷಿ ಉತ್ಪತ್ತಿ ತೆಗೆಯಲು ಸಾಧ್ಯವಾಗಿದೆ ಎಂದು ತೀರ್ಮಾನಕ್ಕೆ ಬಂದರು.

ಆ ನಿಷ್ಠಾವಂತ ಸತ್ಯ ಶುದ್ಧ ಕಾಯಕ ಕೃಷಿ ಯೋಗಿಯು ಎಲ್ಲರೂ ಬಯಸುವ ನಾಲ್ಕು ಪುರುಷಾರ್ಥಗಳನ್ನು ಅಂದರೆ ಧರ್ಮ, ಅರ್ಥ, ಕಾಮ, ಮೋಕ್ಷ ಇವುಗಳನ್ನು ಸಾಧಿಸಿದ್ದನು. ಎಲ್ಲ ಉದ್ಯೋಗದಲ್ಲಿಯೂ ಸತ್ಯ ಶುದ್ಧ ಕಾಯಕ ಹಾಗೂ ಸತತುದ್ಯೋಗ ಮಾಡಿದರೆ ವ್ಯಕ್ತಿ ಮತ್ತು ಸಮಷ್ಟಿಯ ಅಭಿವೃದ್ಧಿ ಕಟ್ಟಿಟ್ಟ ಬುತ್ತಿ.

**ಕಟ್ಟಿಗೆಹಳ್ಳಿ ಮಠ ಎಸ್. ಎಸ್.**, ನಂ. ೧೨೩, ೧೬ನೇ ಕ್ರಾಸ್, ೧ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೧೦

## ನೇಗಿಲಯೋಗಿ - ಕೈಲಾಸ ಮೂರ್ತಿ

*(೫೪ ನೇ ಪುಟದಿಂದ)*

ಜೀವಿಯನ್ನೂ ನಾಶಮಾಡದೆ ನಾವು ಬದುಕಬಹುದೆಂದು ಇವರ ವಾದ. ಸಹಬಾಳ್ವೆ (Symbiosis)ಯ ತತ್ವ ಮನುಷ್ಯ-ಮನುಷ್ಯರೊಡನೆ ಎಷ್ಟು ಅಗತ್ಯವೋ, ಅನಿವಾರ್ಯವೋ ಅಷ್ಟೇ ಗಿಡ-ಮರ- ಪಕ್ಷಿಗಳೊಡನೆ ಸಹ. ಅದೇ ತತ್ವ ಕೈಲಾಸಮೂರ್ತಿಯವರದು.

ಮೈಸೂರಿನಲ್ಲೊಂದು ಜೀವಧಾರಕ ಕೃಷಿ ಕೂಟ ಎಂಬ ಸಂಘಟನೆ ಇದೆ. ಇದರಲ್ಲಿ ಕೈಲಾಸಮೂರ್ತಿ ಸಕ್ರಿಯವಾಗಿ ಭಾಗವಹಿಸುತ್ತಾರೆ. ತಮ್ಮ ಅನುಭವ, ಜ್ಞಾನವನ್ನು ಇತರ ರೈತರೊಡನೆ ಹಂಚಿಕೊಳ್ಳುತ್ತಾರೆ.

ವರ್ಷಕ್ಕೆ ೯೫ ಸಾವಿರ ಟನ್ ರಾಸಾಯನಿಕಗಳನ್ನೇ ಬಳಸಿ ನಮ್ಮ ರೈತರು ಈಗಾಗಲೇ ತಮ್ಮ ನೆಲ-ಜಲ- ಹಣವನ್ನು ಹಾಳುಮಾಡಿಕೊಂಡಿದ್ದಾರೆ. ನಪುಂಸಕ ಬೀಜಗಳ ಉತ್ಪತ್ತಿ ಮಾಡುವ 'ಮಾನ್‌ಸಾಂಟೊ'ದಂಥ ಭೂತಗಳು ನಮ್ಮ ಕೃಷಿಯನ್ನೇ ಪೂರ್ಣವಾಗಿ ನಾಶಪಡಿಸುವ ಮುಂಚೆ ನಮ್ಮ ರೈತರು ಎಚ್ಚೆತ್ತು ನೈಸರ್ಗಿಕ, ಸ್ವಾಭಾವಿಕ ಕೃಷಿ ಪದ್ಧತಿಯನ್ನೇ [illegible] ತಮ್ಮನ್ನೂ ನಮ್ಮನ್ನೂ ರಕ್ಷಿಸಬೇಕು.

[illegible] ಮೂರ್ತಿ
[illegible] ಸಂಜಯನಗರ, ಬೆಂಗಳೂರು - ೫೬೦ ೦೯೪

*(೫೨ ನೇ ಪುಟದಿಂದ)*

**ನೊಬೆಲ್ ಪ್ರಶಸ್ತಿ**

ನೊಬೆಲ್ ಪ್ರಶಸ್ತಿ ಬಂದ ನಂತರವೂ ಬಾರ್ಬರಾ ತನ್ನ ಸಂಶೋಧನೆಯನ್ನು ಮುಂದುವರೆಸಿದಳು. ಏರುವಯಸ್ಸಿನಲ್ಲೂ ದಿನವೂ ಹನ್ನೆರಡು ಗಂಟೆ ಕೆಲಸ ಮಾಡುತ್ತಿದ್ದ ಬಾರ್ಬರಾ ಸೆಪ್ಟೆಂಬರ್ 2, 1992ರಂದು ತನ್ನ ತೊಂಭತ್ತನೇ ವಯಸ್ಸಿನಲ್ಲಿ ತೀರಿಕೊಂಡಳು.

ಈ ಶತಮಾನದ ಮೊದಲ ದಶಕದಲ್ಲಿ ಹುಟ್ಟಿ, ಕೊನೆಯ ದಶಕದಲ್ಲಿ ತೀರಿಕೊಂಡ ಈ ವಿಜ್ಞಾನಿಯ ಸುದೀರ್ಘ ಬದುಕಿನ ಅದ್ಭುತ ದಾಖಲೆಗಳು ಈ ಪುಸ್ತಕದಲ್ಲಿ ದೊರೆಯುತ್ತವೆ. ಜೆನೆಟಿಕ್ಸ್ ವಿಜ್ಞಾನದ ಹಿನ್ನೆಲೆಯನ್ನು, ಆಕೆಯ ಸಂಶೋಧನೆಯ ಮಹತ್ವವನ್ನು, ಅಗತ್ಯದ ಚಿತ್ರಗಳೊಡನೆ ಸುದೀರ್ಘವಾಗಿ ವಿವರಿಸುವ ಈ ಪುಸ್ತಕ, ಬಾರ್ಬರಾಳ ಕತೆಯೊಡನೆ, ಈ ಶತಮಾನದ ಪ್ರಮುಖ ರಂಗವಾಗಿ ವಿಕಾಸಗೊಂಡ ಜೆನೆಟಿಕ್ಸ್ ರಂಗದ ಕತೆಯನ್ನೂ ಹೇಳುತ್ತದೆ. ಇಪ್ಪತ್ತನೆಯ ಶತಮಾನದಲ್ಲೂ ಓರ್ವ ವಿಜ್ಞಾನಿ, ಮಹಿಳೆ ಎಂಬ ಕಾರಣಕ್ಕೆ ಎದುರಿಸುವ ಅಡೆತಡೆಗಳನ್ನು ದಾಖಲಿಸುತ್ತಾ, ಮಹಿಳೆ ಮತ್ತು ವಿಜ್ಞಾನ ರಂಗದ ನಡುವಿನ ಸಂಬಂಧ ಮತ್ತು ಸಂಕೀರ್ಣತೆಯನ್ನು ತಿಳಿಸಲು ಪ್ರಯತ್ನಿಸುತ್ತದೆ.

**ನೇಮಿಚಂದ್ರ**
ನಂ. ೪೦೧, 'ವಿಜಯ ಟವರ್ಸ್', ೨ನೇ ಮೈನ್, ಆರ್. ಪಿ. ಸಿ. ಲೇ ಔಟ್,
ವಿಜಯನಗರ ೨ನೇ ಹಂತ, ಬೆಂಗಳೂರು - ೪೦

**ಕಾಮನ ಬಿಲ್ಲು**

ಧರಿತ್ರಿಯ ಎದೆಯಲ್ಲಿ ಪ್ರೇಮ
ದ ಮಳೆ ಹರಿಸಿದ
ಸೂರ್ಯ ಹೊಳೆಯುತ್ತಿರುವಾಗ
ಮೂಡಿತ್ತು ಕಾಮನಬಿಲ್ಲು!

**ಗಣೇಶ ಪಿ. ನಾಡೋರ**
ಸಬಗೇರಿ ಶಾಲೆಯ ಹತ್ತಿರ, ಯಲ್ಲಾಪುರ - ೫೮೧ ೩೫೯

# ಸಮಾಜವಾದ - ಸಾಪೇಕ್ಷವಾದ - ಸತ್ಯಾಗ್ರಹ

*ನಮ್ಮ ಶತಮಾನದ ಕೊನೆಯಲ್ಲಿ ಐಕ್ಯ ಜಗತ್ತಿನ ಕನಸು ಕಾಣುತ್ತಿದ್ದೇವೆ. ನೂತನ ಪರ್ಯಾಯ ಸಂಸ್ಥೆಗಳನ್ನು ರಚಿಸಲು ಮಾರ್ಕ್ಸ್, ಐನ್‌ಸ್ಟೀನ್ ಮತ್ತು ಗಾಂಧೀಜಿ ಅವರುಗಳ ಬೀಜರೂಪದ ವೈಚಾರಿಕ ತಳಹದಿಯಿಂದ ಪ್ರೇರಿತವಾದ 'ಸಮಗ್ರಕ್ರಾಂತಿ' ಬರಲಿರುವ ಶತಮಾನಕ್ಕೆ ದಾರಿದೀಪ.*

ಮಾನವ ಇತಿಹಾಸದಲ್ಲಿ ಎರಡನೇ ಸಹಸ್ರಮಾನದ ಅಂತ್ಯದಲ್ಲಿದ್ದೇವೆ. ಈ ಇಪ್ಪತ್ತನೆಯ ಶತಮಾನ ಮುಗಿಯುತ್ತಿರುವ ಅಂಚಿನಲ್ಲಿ ನಿಂತು ಹಿನ್ನೋಟ ಹೊರಳಿಸಿದಾಗ ಅದೆಂತಹ ಮಹಾಪರಿವರ್ತನೆಗಳು ಕೇವಲ ನೂರುವರ್ಷಗಳಲ್ಲಿ ನಾಗಾಲೋಟ ಧಾವಿಸಿವೆ ಎಂದುಕೊಂಡು ಆಶ್ಚರ್ಯಚಕಿತರಾಗುತ್ತೇವೆ. ಕಾಲ ಪ್ರವಾಹದ ನಿರಂತರ ಚಲನೆಯಲ್ಲಿ ಸನಾತನ ಮಾನವೀಯ ಮೌಲ್ಯಗಳು ಮತ್ತೆ ಮತ್ತೆ ಪರಿವರ್ತಿತ ರೂಪಗಳಲ್ಲಿ ಜೀವಂತ ಕ್ರಿಯಾಶೀಲ ಶಕ್ತಿಗಳಾಗಿ ಉಳಿಯಲು ಆಯಾ ಕಾಲದ ಯುಗಪುರುಷರು ಪ್ರಭಾವ ಬೀರುತ್ತಲೇ ಇದ್ದಾರೆ. ಕ್ರಾಂತಿಕಾರಕ ವಿಚಾರ ಮಾರ್ಗಗಳು ಅಂತಹ ಸೀಮಾ ಪುರುಷರ ಅಂತರ್ಯದಲ್ಲಿ ಮೂಡಿ, ಹರಳುಗೊಂಡು, ಸ್ಪಷ್ಟ ಸಿದ್ಧಾಂತರೂಪ ತಾಳಿ ಜೀವನಸಾಧನೆಗಳಾಗಿ, ಚರಿತ್ರೆಯ ಚಕ್ರಪ್ರವರ್ತನೆಗೆ ಇಂಧನದಂತೆ ಪೋಷಕ ದ್ರವ್ಯಗಳಾಗಿ ನಿಲ್ಲುತ್ತವೆ. ಅವರ ಮಹಿಮಾನ್ವಿತ ಜೀವನ ಪ್ರಯೋಗಗಳು ಬೀಜರೂಪದಲ್ಲಿ ಮಾನವನ ಹೃದಯ ಮನಸ್ಸುಗಳನ್ನು ಸೂರೆಗೊಂಡು ಕ್ರಮೇಣ ಸಮಾಜಜೀವನದ ಊರ್ಧ್ವಮುಖಿ ವಿಕಾಸಕ್ಕೆ ಕಾರಣೀಭೂತ ತತ್ವಪ್ರಣಾಲಿಗಳಾಗುತ್ತವೆ. ಒಂದೊಂದು ಶತಮಾನದಲ್ಲೂ ಮುಂದಿನ ಶತಮಾನಕ್ಕೆ ಧ್ಯೇಯ ನಿಷ್ಠೆಗಳನ್ನು ತುಂಬಿಕೊಡುವ ಅಂಥ ಚಿಂತನ ಚಿಲುಮೆಗಳು ಹೊಸ ಹೊಸ ಪ್ರಯೋಗಗಳಿಗೆ ಸ್ಫೂರ್ತಿ ತುಂಬಿ ಬೆಳವಣಿಗೆಯ ಜೀವರಸಗಳಾಗಿ ಪರಿಣಮಿಸುತ್ತವೆ.

### ವಿಚಾರ ಕ್ರಾಂತಿಯ ಬೀಜ

ಕಳೆದ ಇನ್ನೂರು ವರ್ಷಗಳಲ್ಲಿ ಪ್ರಪಂಚ ಬದಲಾವಣೆಗಳಿಗೆ ವೈಚಾರಿಕ ತಳಹದಿಯನ್ನು ನಿರ್ಮಿಸಿ ಪ್ರಯೋಗ ಸಿದ್ಧಿಯ ದಿವ್ಯಶಕ್ತಿಯನ್ನು ತುಂಬಿಕೊಂಡ ಬೀಜರೂಪದ ಸಿದ್ಧಾಂತಗಳೆಂದರೆ ಸಮಾಜವಾದ, ಸಾಪೇಕ್ಷಸಿದ್ಧಾಂತ ಮತ್ತು ಸತ್ಯಾಗ್ರಹ ವಿಜ್ಞಾನ. ಈ ಶತಮಾನದಲ್ಲಿ ಈ ವಿಚಾರಮಾರ್ಗಗಳು ಬೇರೂರಿನಿಂತು ಜಗತ್ತಿನ ರಾಜಕೀಯ ಆರ್ಥಿಕ ಮತ್ತು ಸಾಮಾಜಿಕ ಪರಿವರ್ತನೆಗಳ ಮೌಲ್ಯಮಾಪನಕ್ಕೆ ಮಾನವೀಯ ಮೌಲ್ಯಗಳ ಮಾನದಂಡವನ್ನು ನಿರ್ಮಾಣ ಮಾಡಿ ಕೊಟ್ಟಿವೆ. ಈ ವಿಚಾರಕ್ರಾಂತಿಯ ಬೀಜ ಬಿತ್ತಿದ ಮಹಾ ಪುರುಷರು ಕಾರ್ಲ್ ಮಾರ್ಕ್ಸ್, ಆಲ್ಬರ್ಟ್ ಐನ್‌ಸ್ಟೀನ್ ಮತ್ತು ಮಹಾತ್ಮ ಗಾಂಧಿ.

ಹದಿನೆಂಟನೆಯ ಶತಮಾನದ ಫ್ರಾನ್ಸಿನ ಮಹಾಕ್ರಾಂತಿ ಜಗತ್ತಿಗೆ ಮೂರು ಮಹಾಮಂತ್ರಗಳನ್ನು ಉದ್ಘೋಷಿಸಿತು. ಸ್ವಾತಂತ್ರ್ಯ, ಸಮಾನತೆ ಮತ್ತು ಸೌಹಾರ್ದ (ಲಿಬರ್ಟಿ,



ಈಕ್ವಾಲಿಟಿ, ಫ್ರೆಟರ್ನಿಟಿ). ಇವುಗಳ ಸಿದ್ಧಿಗಾಗಿಯೇ ಹಲವಾರು ಘೋರ ಯುದ್ಧಗಳು, ಹಿಂಸಾತ್ಮಕ ರಕ್ತ ಕ್ರಾಂತಿಗಳು, ಅನೇಕ ಅಮಾನುಷ ಸಾಮ್ರಾಜ್ಯದಾಹಿ ಸರ್ವಾಧಿಕಾರಿಗಳು ಹುಟ್ಟಿದವು. ಎಲ್ಲವೂ ಉದಾತ್ತ ಉದ್ದೇಶಗಳನ್ನೇ ಜನತೆಯಲ್ಲಿ ಪ್ರಚಾರಮಾಡುತ್ತ ಅದಕ್ಕಾಗಿ ಪೋಷಿಸಿ ಬೆಳೆಸಿದ ಸಂಸ್ಥೆಗಳನ್ನು ಅಶಾಂತಿಯ, ಶೋಷಣೆಯ, ದಬ್ಬಾಳಿಕೆಯ, ಅಸಮಾನತೆಯ ಜಾಲಗಳನ್ನಾಗಿ ಪರಿವರ್ತಿಸಿಬಿಟ್ಟವು. ನಮ್ಮ ಶತಮಾನದ ಪ್ರಾರಂಭದ ದಿನಗಳಲ್ಲಿ ವರ್ಗಸಂಘರ್ಷಗಳು, ಕ್ರೂರವಾದ ಸ್ವಾತಂತ್ರ್ಯದಮನ, ರಾಜಕೀಯ ಸರ್ವಾಧಿಕಾರ, ಊಳಿಗಮಾನ್ಯ ಪದ್ಧತಿಗಳು ತಾನೇತಾನಾಗಿ ಬೆಳೆದು ನಿಂತಿದ್ದವು. ಸರ್ವರಿಗೂ ಸಮಬಾಳಿನ ಅವಕಾಶ ನೀಡುವ ಸಮಾಜ ರಚನೆ ಕನಸಿನ ಗಂಟಾಗಿಯೇ ಉಳಿದಿತ್ತು.

### ಕೈಗಾರಿಕಾ ಕ್ರಾಂತಿ

ವಿಜ್ಞಾನ ಮತ್ತು ತಂತ್ರಜ್ಞಾನಗಳ ನಾಗಾಲೋಟದ ಮುನ್ನಡೆ, ಪರಿಣಾಮವಾಗಿ ಬಂದ ಕೈಗಾರಿಕಾ ಕ್ರಾಂತಿಯ ಚಕ್ರ ವೇಗವಾಗಿ ತಿರುಗತೊಡಗಿತ್ತು. ಪಾಶ್ಚಾತ್ಯ ರಾಷ್ಟ್ರಗಳು ಲಾಭವನ್ನು ಕ್ಷಿಪ್ರವಾಗಿ ಪಡೆದುಕೊಂಡು ಬಂಡವಾಳಶಾಹಿ, ಸಾಮ್ರಾಜ್ಯಶಾಹಿ, ವಸಾಹತುಶಾಹಿಗಳ ಬೃಹದ್ ಜಾಲಗಳನ್ನು ಸೃಷ್ಟಿಸಿದವು. ಒಂದು ಕಡೆ ಅಗಾಧ ಹಣ

ಕೆ. ಎಸ್. ನಾರಾಯಣಸ್ವಾಮಿ

ಸಂಗ್ರಹ ಮತ್ತು ಕೇಂದ್ರಿತ ಅಧಿಕಾರ. ಮತ್ತೊಂದು ಕಡೆ ಅಸಂಖ್ಯಾತ ಕಾರ್ಮಿಕ ವರ್ಗಗಳ ದುಡಿಮೆಯ ಅಪಮೌಲ್ಯ ತೀವ್ರವಾಗಿ ಮಾನವೀಯತೆ ಕ್ರಮೇಣ ಮರೆಯಾಗುತ್ತಾ ಹೋಯಿತು. ಈ ತುಮುಲದಲ್ಲಿ ಸಮಾಜಜೀವನ ಹೋಳಾಯಿತು. ಶ್ರೀಮಂತರ ಭೋಗ ಜೀವನಕ್ಕೂ ಬಡವರ ಬವಣೆಗಳಿಗೂ ಇದ್ದ ಕಂದರ ಅಗಾಧವಾಗಿ ಅಗಲವಾಯಿತು. ಪರಸ್ಪರ ಹಿತಾಸಕ್ತಿಗಳು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸಂಘರ್ಷಗಳಿಗೆ ಕಾರಣವಾಗಿಬಿಟ್ಟವು. ಉತ್ಪಾದನಾ ಸಾಧನಗಳು ವೈಯಕ್ತಿಕ ಒಡೆತನದಿಂದ ಬಿಡುಗಡೆಯಾಗಿ ಸಮಾಜೀಕರಣವಾಗಬೇಕು ಎಂಬ ಪ್ರಬಲ ಬೇಡಿಕೆಗಾಗಿ ಪ್ರಚಂಡ ಜನತಾ ಆಂದೋಲನಗಳು ಪ್ರಾರಂಭವಾದವು. ಪಾಶ್ಚಾತ್ಯ ಬಂಡವಾಳೀ ರಾಷ್ಟ್ರಗಳಲ್ಲೇ ಅದು ಉಲ್ಬಣಿಸಿತು. ವ್ಯಕ್ತಿ ಮತ್ತು ಸಮಾಜ ಪರಸ್ಪರ ಪೋಷಕವಾಗಬೇಕು. ವ್ಯಕ್ತಿ ವಿಕಾಸಕ್ಕೂ ಸಮಾಜಾಭಿವೃದ್ಧಿಗೂ ಸಮಾನಾವಕಾಶಗಳು ಅವಿರುದ್ಧವಾಗಿ ಚಲಿಸುವ ಸಾಮರಸ್ಯ ಸ್ಥಾಪಿತವಾಗಬೇಕು ಎಂಬ ಮಹತ್ವಾಕಾಂಕ್ಷೆ ಜಗತ್ತಿನಲ್ಲೆಲ್ಲಾ ಹರಡಿ ನಿಲ್ಲುತ್ತಿತ್ತು. ಆ ಸಮಯದಲ್ಲಿ ಋಷಿಸದೃಶ ಚಿಂತಕನಾಗಿದ್ದ ಅರ್ಥಶಾಸ್ತ್ರಜ್ಞ ಜರ್ಮನಿಯ ಕಾರ್ಲ್ ಮಾರ್ಕ್ಸ್‌ನ ಅಗಾಧ ತಪಸ್ಸಿನ ಫಲವಾಗಿ ಸಮಾಜವಾದ ಸಿದ್ಧಾಂತ ಪ್ರಚಲಿತವಾಯಿತು. ದೇಶಭ್ರಷ್ಟನಾಗಿ ಇಂಗ್ಲೆಂಡಿಗೆ ವಲಸೆಹೋದ ಮಾರ್ಕ್ಸ್ ಎಡಬಿಡದೆ ಶ್ರಮಿಸಿ 'ಡಾಸ್ ಕ್ಯಾಪಿಟಲ್'' ಎಂಬ ಜಗತ್‌ಪ್ರಸಿದ್ಧ ಗ್ರಂಥವನ್ನು ಪ್ರಕಟಿಸಿದ.

ಬಂಡವಾಳಶಾಹಿ ಮತ್ತು ಸಾಮ್ರಾಜ್ಯಶಾಹಿಗಳ ಒಡಲಿನಲ್ಲಿ ಸಹಜವಾಗಿಯೇ ಹುಟ್ಟಿಬರುವ ಪರಸ್ಪರ ವಿರೋಧ ಹಿತಾಸಕ್ತಿಗಳು ನೈತಿಕಪತನಕ್ಕೆ ಕಾರಣವಾಗುತ್ತವೆ. ಸಮತೆ, ಸಮಾಜನ್ಯಾಯ, ವ್ಯಕ್ತಿವಿಕಾಸದ ಅವಕಾಶಗಳು ಅಗಾಧ ಬಹುಸಂಖ್ಯಾತ ಶ್ರಮಿಕವರ್ಗಕ್ಕೆ ಇಲ್ಲವಾಗುತ್ತವೆ. ನೈಸರ್ಗಿಕ ಸಂಪತ್ಸಾಧನಗಳು ಮತ್ತು ಮಾನವದುಡಿಮೆ ಆರ್ಥಿಕವಾಗಿ ಬಲಾಢ್ಯರಾಗುವ ಶ್ರೀಮಂತವರ್ಗಗಳ ಒಡೆತನಕ್ಕೆ ಸೇರಿಹೋಗುತ್ತವೆ. ಉತ್ಪಾದನೆಯ ಉದ್ದೇಶ ಲಾಭಸಂಗ್ರಹವೇ ಹೊರತು ನ್ಯಾಯೋಚಿತ ವಿತರಣೆ [illegible] ಎಂಬ ಮಾರುಕಟ್ಟೆಯ ಸಿದ್ಧಾಂತ ಮಾನವೀಯ ಬಾಂಧವ್ಯಗಳನ್ನೆಲ್ಲ ಪಲ್ಲಟಗೊಳಿಸುತ್ತದೆ. ವಿಜ್ಞಾನ ಮತ್ತು ತಂತ್ರಜ್ಞಾನಗಳ ತಜ್ಞರು ಧನಶಕ್ತಿಯ ದಾಸರಾಗಿ ಶೋಷಣೆಯ ಸಾಧನಗಳ ಸಂಶೋಧನೆಗೆ ಬಳಸಿಕೊಳ್ಳಲು ನೆರವಾಗಿಬಿಡುತ್ತಾರೆ. ಜನಕೋಟಿಯ [illegible] ವಿಕಾಸ ಮಾರ್ಗಗಳು, ಜೀವನಾಧಾರ [illegible]

ಪರಾಧೀನವಾಗಿ ಅಲ್ಪಸಂಖ್ಯಾತ ವರ್ಗದ ಅಜ್ಞಾನು ವರ್ತಿಗಳ ಕೈಸೇರುತ್ತಾ ಹೋಗುತ್ತದೆ. ಶ್ರೀಮಂತರು ಹೆಚ್ಚು ಶ್ರೀಮಂತರಾಗುತ್ತಾರೆ, ಬಡವರು ಹೆಚ್ಚು ಬಡವರಾಗುತ್ತಾರೆ. ಈ ಪರಿಸ್ಥಿತಿ ಕಳೆದ ಶತಮಾನದಲ್ಲಿ ಉತ್ಕಟ ಮಟ್ಟಕ್ಕೆ ಸಾಗಿ ಬಂಡಾಯದ ಸ್ಫೋಟ ಎಲ್ಲೆಲ್ಲೂ ಪ್ರತಿಧ್ವನಿಸಹತ್ತಿತ್ತು.

### ಸಮಾಜವಾದ ಸಿದ್ಧಾಂತ

ಕಾರ್ಲ್ ಮಾರ್ಕ್ಸ್ ಈ ಮೂಲಭೂತ ಪ್ರಶ್ನೆಗಳನ್ನೇ ಕೈಗೆತ್ತಿಕೊಂಡು ಇಡೀ ಮಾನವ ಕುಲದ ಆರ್ಥಿಕ ಚೌಕಟ್ಟಿನಲ್ಲಿ ಬಡವರ ಪರವಾದ ಕ್ರಾಂತಿಕಾರೀ ಪರಿವರ್ತನೆ ಆಗದೆ ಎಲ್ಲರಿಗೂ ನೆಮ್ಮದಿ ನೀಡುವಂತಹ ಆಡಳಿತವ್ಯವಸ್ಥೆ ಅಸಾಧ್ಯ ಎಂಬ ಸತ್ಯಾಂಶವನ್ನು ಪ್ರಖರವಾಗಿ ವಿಶ್ಲೇಷಿಸಿ ಸಮಾಜವಾದ ಸಿದ್ಧಾಂತವನ್ನು ವಿವರವಾಗಿ ಜಗತ್ತಿನ ಮುಂದೆ ಮಂಡಿಸಿದ್ದಾನೆ. ಆರ್ಥಿಕ ವ್ಯವಸ್ಥೆಯಲ್ಲಿ ಬಂಡವಾಳ-ದುಡಿಮೆ- ವ್ಯವಸ್ಥಾಪಕ ವರ್ಗ (ಕ್ಯಾಪಿಟಲ್-ಲೇಬರ್-ಮ್ಯಾನೇಜ್‌ಮೆಂಟ್) ಈ ಮೂರೂ ವರ್ಗಗಳಿಗೆ ಉತ್ಪಾದನ ವಸ್ತುಸಂಗ್ರಹದ ಮೇಲೆ ಸಮಾನಾಧಿಕಾರ ಇರಬೇಕು. ಜೀವನಾವಶ್ಯಕತೆಯ ಮೂಲಾಧಾರಗಳು ಸಮಾಧಾನವಾಗಿ ದೊರಕುವ ಆರ್ಥಿಕ-ನ್ಯಾಯ ಮತ್ತು ಸಾಮಾಜಿಕ ನ್ಯಾಯ ಪ್ರತಿಷ್ಠಾಪನೆಯಾಗಬೇಕು. ಬಂಡವಾಳಶಾಹಿ ವರ್ಗದ ಸಂಪೂರ್ಣ ನಿರ್ಮೂಲನಕ್ಕಾಗಿ ಸಂಘಟಿತ ದುಡಿಮೆಗಾರರ ಶಕ್ತಿ ಕ್ರೋಢೀಕೃತವಾಗಿ ಹೋರಾಟ ನಡೆಸಬೇಕು ಎಂಬ ವಿಚಾರಧಾರೆ ಶ್ರಮಿಕವರ್ಗದವರಾದ ಬಹುಸಂಖ್ಯಾತರನ್ನು ಜಗತ್ತಿನ ಎಲ್ಲದೇಶಗಳಲ್ಲಿಯೂ ಜಾಗೃತಗೊಳಿಸಿತು. ಬಂಡಾಯದ ಆಸ್ಫೋಟವಾಗಿ ರಷ್ಯದ ಲೆನಿನ್ ಆ ರಾಷ್ಟ್ರದಲ್ಲಿ ಸಾಮ್ಯವಾದ ಸರ್ಕಾರವನ್ನು ಸ್ಥಾಪಿಸಿದ. ಆದರೆ ಆ ರಕ್ತಕ್ರಾಂತಿಯ ಸಾಧನಗಳ ಕಾರಣವಾಗಿ ಮತ್ತೊಂದು ಸೈನ್ಯಾಧಿಕಾರದ ಸಾಮ್ರಾಜ್ಯವೇ ಸ್ಥಾಪಿತವಾಯಿತು. ಮಾರಕಾಸ್ತ್ರಗಳ ಪ್ರಚಂಡ ಸಂಗ್ರಹದ ಸ್ಪರ್ಧೆ ಬಂಡವಾಳಶಾಹಿ ಸಾಮ್ರಾಜ್ಯಗಳಿಗೂ ಸಾಮ್ಯವಾದೀ ರಾಷ್ಟ್ರಗಳಿಗೂ ಮಧ್ಯೆ ಹರಡಿ ಇಡೀ ಜಗತ್ತಿನಲ್ಲಿ ದ್ವೇಷ, ಸೇಡು, ಪರಸ್ಪರ ನಾಶಮಾಡುವ ಆಕ್ರೋಶ ಬೆಳೆಯಿಸಿತು. ಎರಡನೇ ಮಹಾಯುದ್ಧದ ನಂತರ ಶೀತಲ ಯುದ್ಧ ಮೂರುದಶಕಗಳ ಕಾಲ ಪ್ರಪಂಚವನ್ನು ವಿಧ್ವಂಸಕ ಜನತಾ ಆಂದೋಲನಗಳಲ್ಲಿ ಮುಳುಗಿಸಿಬಿಟ್ಟವು.

[illegible]



### ಸರ್ವೋದಯ ಸಿದ್ಧಾಂತ

ರಸ್ಕಿನ್ನನ 'ಅನ್ ಟು ದಿಸ್ ಲಾಸ್ಟ್' ಪುಸ್ತಕದಿಂದ ಗಾಂಧೀಜಿ ಕಂಡುಕೊಂಡು ೧೯೦೫ರಲ್ಲೇ ರಚಿಸಿದ ಸರ್ವೋದಯ ಸಿದ್ಧಾಂತಗಳೂ ಹೀಗೆಯೇ ಇದ್ದವು

೧. ವ್ಯಕ್ತಿಯ ಒಳಿತು ಪ್ರತ್ಯೇಕವಲ್ಲ, ಸಮಾಜದ ಒಳಿತಿನಲ್ಲೇ ಅಡಗಿದೆ.
೨. ಸಮಾಜದ ಆಧಾರಭೂತ ವೃತ್ತಿಗಳಿಗೆಲ್ಲ ಸಮಾನ ಗೌರವ, ಆರ್ಥಿಕ ಮತ್ತು ಸಾಮಾಜಿಕ ಸಮತೆ.
೩. ಮಾನವನ ಆಂತರಿಕ ವಿಕಾಸಕ್ಕೆ ಮತ್ತು ಸಮಾಜದ ನೆಮ್ಮದಿಗೆ ಶಾರೀರಿಕ ದುಡಿಮೆಯೇ ಅತ್ಯಂತ ಶ್ರೇಷ್ಠ ಸಾಧನ.

ಆ ವೇಳೆಗೆ ರಷ್ಯದ ಮಹಾಕ್ರಾಂತಿ ಸಂಭವಿಸಿರಲಿಲ್ಲ. ರಷ್ಯದ ಮಹರ್ಷಿ ಟಾಲ್‌ಸ್ಟಾಯ್ ಗಾಂಧೀಜಿಯ ದಕ್ಷಿಣ ಆಫ್ರಿಕ ಸತ್ಯಾಗ್ರಹವನ್ನು ಮನಸಾರೆ ಮೆಚ್ಚಿಕೊಂಡಿದ್ದರು. ರಷ್ಯದ ಕಮ್ಯುನಿಸ್ಟ್ ಕ್ರಾಂತಿ ರಕ್ತಪ್ರವಾಹದ ವಿಧ್ವಂಸಕತೆಯ ಕಾರಣವಾಗಿ ಕಲುಷಿತವಾಯಿತು. ಶಸ್ತ್ರಾಸ್ತ್ರಗಳ ತುಮುಲ ಸ್ಪರ್ಧೆಯಲ್ಲಿ ಅಮೆರಿಕದೊಡನೆ ಸೆಣಸಾಡುತ್ತಾ ರಷ್ಯ ದೇಶ ಕೊನೆಗೊಮ್ಮೆ ದಿವಾಳಿತನದ ಅಂಚಿನಲ್ಲಿ ನಿಂತು ಅಮೆರಿಕದ ಬಂಡವಾಳಶಾಹಿಗೇ ಶರಣು ಬಂದುದು ಈ ಶತಮಾನದ ಇತಿಹಾಸದಲ್ಲಿ ಒಂದು ದೊಡ್ಡ ದುರಂತ. ಮಾರ್ಕ್ಸ್‌ನ ಸಿದ್ಧಾಂತದ ಮೂಲ ಮೌಲ್ಯಗಳಿಗೆ ಇದರಿಂದ ಸೋಲಾಗಿಲ್ಲ. ಅನುಸರಿಸಿದ ಮಾರ್ಗಗಳು ಮತ್ತು ಬಳಸಿದ ಸಾಧನಗಳು ತಪ್ಪಾದವು. ಆಚಾರ್ಯ ವಿನೋಬಾ ನುಡಿದಂತೆ 'ಸಾಮ್ಯವಾದ' ಗುರಿಮುಟ್ಟಲಾರದು; ಅದು 'ಸಾಮ್ಯಯೋಗ'ದ ರೂಪ ಪಡೆಯಬೇಕಾಗುತ್ತದೆ. ನಾಳಿನ ಜಗತ್ತು ಆದರ್ಶ ಸಮಾಜವಾದೀ ಜಗತ್ತಿನ ರೂಪರೇಷೆಗಳನ್ನು ಸಿದ್ಧ ಮಾಡುವಾಗ ಮಾರ್ಕ್ಸ್‌ನ ಆರ್ಥಿಕ ಸಿದ್ಧಾಂತಗಳ ತಳಹದಿಯ ಮೇಲೆ ಮಾನವ ಜೀವನದ ಸಮಗ್ರ, ಶಾಂತಿಯುತ ಮತ್ತು ಮಾನವ ಸಾಪೇಕ್ಷವಾದ ಹೊಸ ಪ್ರಯೋಗಗಳು ನಡೆಯಬೇಕಾಗಿರುವುದು ಸರ್ವವೇದ್ಯ.



*ನಡುನಡುಗಿ ಬೆಳಗಿನಲಿ ಗುಡಿಗೆ ಹೋಗುವುದು*
*ಮಡಿಯುಟ್ಟು ಸ್ತೋತ್ರಗಳ ದಿನವು ಗಳಪುವುದು*
*ಶರಣರಾ ನುಡಿಗಡಣ ತಿಳಿಯಲಾರದೆಯೆ*
*ಕಾಯಕಕೆ ದೂರಾಗುತಿರುವುದು ಸರಿಯೇ*

– ಬಿ. ಚನ್ನಬಸವಯ್ಯ, ದೊಡ್ಡ ಎಣ್ಣೇಗೆರೆ

### ಸಾಪೇಕ್ಷ ಸಿದ್ಧಾಂತ

ಈ ಶತಮಾನದ ಮತ್ತೊಂದು ವೈಚಾರಿಕ ಸೀಮೋಲ್ಲಂಘನೆ ಸಂಭವಿಸಿದ್ದು ವಿಜ್ಞಾನಿ ಐನ್‌ಸ್ಟಿನ್ ಮಹಾಶಯನ ಸಾಪೇಕ್ಷ ಸಿದ್ಧಾಂತದಿಂದ. ಜಗತ್ತಿನಲ್ಲಿ ಯಾವ ಒಂದು ಕ್ರಿಯೆಯು, ಅದು ಭೌತಿಕ ಕ್ಷೇತ್ರದಲ್ಲಾಗಲೀ ಮಾನವನ ವ್ಯಾವಹಾರಿಕ ಕ್ಷೇತ್ರದಲ್ಲಾಗಲೀ ನೂರಾರು ಇತರ ಕ್ರಿಯೆಗಳಿಗೆ ಸಾಪೇಕ್ಷವಾಗಿಯೇ ನಡೆಯುತ್ತಿರುತ್ತದೆ. ಈ ವಿಚಾರವನ್ನು ಪ್ರಖರವಾಗಿ ನಮ್ಮ ತಿಳಿವಳಿಕೆಗೆ ತಂದುಕೊಟ್ಟು ಯಾವ ಒಂದು ಕ್ಷೇತ್ರವನ್ನೂ ಪ್ರತ್ಯೇಕಿಸಿ ಏಕಮುಖವಾಗಿ ಯೋಚಿಸುವುದು ಸಾಧುವಲ್ಲ ಎಂದು ಬೋಧಿಸಿದ ಚಿಂತಕ ಆಲ್ಬರ್ಟ್ ಐನ್‌ಸ್ಟೀನ್. ಅವರು ಜೀವಿಸಿದ್ದ ಕಾಲ ೧೮೭೯ರಿಂದ ೧೯೫೫. ಅತ್ಯದ್ಭುತ ವೈಜ್ಞಾನಿಕ ಸಂಶೋಧನೆಗಳು, ಸಾಮಾಜಿಕ ಕ್ರಾಂತಿಗಳೂ ಸಂಭವಿಸಿದ ಕಾಲ. ಭವಿಷ್ಯ ಕಾಲಕ್ಕೆ ನಿಮ್ಮ ಸಂದೇಶವನ್ನು ನೀಡಿ ಎಂದು ಐನ್‌ಸ್ಟೀನರನ್ನು ಕೇಳಿದಾಗ ಅವರು

''ಪ್ರಿಯ ಭವಿಷ್ಯವೇ,

ನೀನು ನಾವೀಗ ಇದ್ದುದಕ್ಕಿಂತ ಅಧಿಕನ್ಯಾಯಶೀಲ, ಶಾಂತಿಶೀಲ, ಸತ್ಯನಿಷ್ಠ, ಮತ್ತು ಸಾರ್ವತ್ರಿಕವಾಗಿ ಅಧಿಕ ಶುದ್ಧ ತರ್ಕಶೀಲ ಆಗದಿದ್ದರೆ ಖಂಡಿತವಾಗಿ ಮಸಣಕಾಳಿಗೆ ಕೂಳಾಗಿ ಹಾಳಾಗಿ ಹೋಗುವೆ.... ಇದು ನನ್ನ ಶ್ರದ್ಧಾಪೂರ್ವಕ ಗೌರವಪೂರ್ಣ ನುಡಿಗಳು.... ನಿನ್ನ ಆ. ಐನ್‌ಸ್ಟೀನ್. *(ಆಲ್ಬರ್ಟ್ ಐನ್‌ಸ್ಟೀನ್‌ರ ಮಾನವೀಯ ಮುಖ್ಯ ಗ್ರಂಥದಿಂದ)* ಎಂದು ಅವರ ಆತ್ಮೀಯ ಸ್ನೇಹಿತರೊಬ್ಬರಿಗೆ ಬರೆದರು. ಜಡ ಮತ್ತು ಚೇತನ ಗುಣಗಳ ವಸ್ತು ವಿಶೇಷಗಳ ಪರಸ್ಪರ ಬಾಂಧವ್ಯಗಳೆಲ್ಲವೂ ವಿವಿಧ ಶಕ್ತಿಗಳ, ಪ್ರಭಾವಗಳ, ಆಂತರಿಕ ಪ್ರೇರಣೆಗಳ ಕ್ರಿಯೆ-ಪ್ರತಿಕ್ರಿಯೆಗಳಿಗೆ ಸಾಪೇಕ್ಷವಾಗಿಯೇ ನಡೆಯು ತ್ತಿರುತ್ತವೆ. ಹೀಗೆ ನಿರ್ಮಾಣವಾಗುವ ಹಲವು ರೀತಿಯ ಕ್ರಿಯಾಜಾಲಗಳು (ಸಿಸ್ಟಮ್ಸ್) ಬದಲಾವಣೆಯ ವೇಗೋತ್ಕರ್ಷಕ್ಕೆ ಕಾರಣವಾಗುತ್ತವೆ. ಭೌತವಸ್ತುವಿನ ಪರಮಾಣು ವಿನಲ್ಲಿಯೂ ವಿಶಾಲವಿಶ್ವದ ನಿರಂತರ ಚಲನೆಯಲ್ಲಿಯೂ

ಒಂದೇ ರೀತಿಯ ಶಕ್ತಿ ವಿಶೇಷಗಳ ಶಕ್ತಿ ಜಾಲಗಳು (ಡೈನಮಿಕ್ ಸಿಸ್ಟಮ್ಸ್) ಕ್ರಿಯಾಶೀಲವಾಗಿವೆ. ಈ ವಿಶ್ವವು ಸ್ವಚಲಿತ ಸಾಮರ್ಥ್ಯವುಳ್ಳದ್ದೂ, ಜ್ಞಾನ- ವಿಜ್ಞಾನಗಳ ಪರಿಮಿತಿಗೆ ಮೀರಿನಿಲ್ಲುವ ಅನೇಕ ನಿಗೂಢ ಕ್ರಿಯಾವಿಶೇಷಗಳನ್ನೊಳಗೊಂಡಿರುವುದೂ ಆಗಿದೆ ಎಂಬ ಅರಿವಿನಿಂದಲೇ ಪ್ರತಿಯೊಂದು ಕ್ರಾಂತಿ ಕಾರಕ ಪ್ರಯೋಗಗಳೂ ನಡೆಯಬೇಕು. ಇಲ್ಲವಾದರೆ ಅವು ವಿಫಲವಾಗುತ್ತವೆ. ಇರುವುದೆಲ್ಲವೂ ಒಂದು ಚೈತನ್ಯಮಯ ಮಹಾಶಕ್ತಿಯ ವಿವಿಧರೂಪದ ಅವತರಣಿಕೆಗಳೇ. ಐನ್‌ಸ್ಟೀನರ ಈ ಚಿಂತನ ಬೀಜದಿಂದ ಹೊರಹೊಮ್ಮಿರುವ ಭೌತಿಕ ಐಕ್ಯರಂಗ ಸಿದ್ಧಾಂತ (ಯೂನಿಫೈಡ್ ಫೀಲ್ಡ್ ಥಿಯರಿ) ಈಗ ಪ್ರಚಲಿತ.

ಮಾನವನ ಸಮಸ್ತ ಸಾಧನಾ ಪ್ರವೃತ್ತಿಗಳಲ್ಲಿ ಅನುಭವ ಸಿದ್ಧ ಜ್ಞಾನವಲಯಕ್ಕೂ ಪ್ರಯೋಗಸಿದ್ಧ ವಿಜ್ಞಾನಕ್ಕೂ ಪರಸ್ಪರ ಸಾಪೇಕ್ಷವಾದ ಸಂಬಂಧವಿದೆ ಎನ್ನುವುದನ್ನು ಮನಸ್ಸಿಗೆ ತಂದುಕೊಟ್ಟುದು ಐನ್‌ಸ್ಟೀನರ ಸಾಪೇಕ್ಷವಾದದ ತರ್ಕಬದ್ಧ ಪ್ರತಿಪಾದನೆ. ಯಾವ ನೂತನ ಕ್ರಾಂತಿಪ್ರಯೋಗವೂ ಮಾನವ ವ್ಯಕ್ತಿತ್ವದ ಸಮಸ್ತ ವಲಯಗಳ ಸಮಗ್ರ ದೃಷ್ಟಿಯಿಲ್ಲದೆ ಸಫಲವಾಗದು. ಮಾನವನ ಮಾನವೀಯ ಗುಣಗಳ ವಿಕಾಸಕ್ಕೆ ವಿಜ್ಞಾನದ ಮುನ್ನಡೆ ಅಡ್ಡಿಬರುವುದಾದರೆ ಅದು ಸರ್ವಥಾ ತ್ಯಾಜ್ಯವಾದುದು. ಮ್ಯಾಡಮ್ ಕ್ಯೂರಿ ಅವರು ನಿಧನರಾದಾಗ ತಮ್ಮ ಶ್ರದ್ಧಾಂಜಲಿ ತಿಳಿಸಿ ಐನ್‌ಸ್ಟೀನ್ ಹೀಗೆಂದಿದ್ದಾರೆ :

''ಆಯಾ ತಲೆಮಾರಿನ ಪ್ರಖ್ಯಾತ ವ್ಯಕ್ತಿಗಳ ನೈತಿಕ ಶ್ರದ್ಧೆ ಅವರ ಬೌದ್ಧಿಕ ಸಾಧನೆಗಳಿಗಿಂತ ಮಿಗಿಲಾದುದು. ಮಾನವ ಚರಿತ್ರೆಯನ್ನು ಅವರು ರೂಪಿಸುತ್ತಾರೆ. ನಿರ್ಮಲ ಚಾರಿತ್ರ್ಯದ ಔನ್ನತ್ಯ ಮಿಕ್ಕೆಲ್ಲವನ್ನೂ ತಡೆದು ನಿಲ್ಲುವಂತೆ ಮಾಡುತ್ತದೆ. ಮಾನವೀಯ ಮೌಲ್ಯಗಳ ಪ್ರತಿಷ್ಠಾಪನೆ ಮುಖ್ಯವಾದುದು. ಕ್ಯೂರಿ ಅವರ ಪ್ರಧಾನ ಪ್ರೇರಕ ಶಕ್ತಿಗಳು ಪ್ರೇಮ ಮತ್ತು ಕರುಣೆ.''

(ಐನ್‌ಸ್ಟೀನ್ - ಐಡಿಯಾಸ್ ಅಂಡ್ ಒಪಿನಿಯನ್ಸ್)

ಸಾಂಸ್ಕೃತಿಕ ಸಂಸ್ಕಾರಗಳ ಪರಂಪರೆ ಅನೂಚಾನವಾಗಿ ನಡೆದುಬರುತ್ತಲೇ ಇರುತ್ತದೆ. ಯಾವುವು ಪ್ರಗತಿಪರ ವಿಕಾಸಕ್ಕೆ ಪೋಷಕವೋ ಅವನ್ನುಳಿಸಬೇಕು. ವೈಜ್ಞಾನಿಕ ಮನೋಧರ್ಮದಿಂದ ವಿಶ್ಲೇಷಿಸಿ ಸಂರಕ್ಷಿಸುವುದಗತ್ಯ. ಐನ್‌ಸ್ಟೀನರಂದಂತೆ ''ನಮ್ಮಿಂದ ಭೇದಿಸಲಸಾಧ್ಯವಾಗುವ ಅಂಶಗಳ ಪರಿಜ್ಞಾನ, ಗಾಢವಾದ ಆಂತರ್ಯಾನುಭೂತಿ ಮತ್ತು ದೇದೀಪ್ಯಮಾನವಾದ ಜೀವನಸೌಂದರ್ಯಾನುಭವ ಇವು ನಮ್ಮ ತಿಳಿವಳಿಕೆಗೆ ಬರುವುದು ಸ್ವಲ್ಪ ಮಾತ್ರ ಎಂಬ ವಿನಮ್ರ ಶರಣತೆಯಿಂದ ಸಂಶೋಧನೆಗೆ ತೊಡಗ ಬೇಕು.'' ''ನಿಸರ್ಗದ ರಹಸ್ಯಗಳನ್ನು ಗ್ರಹಿಸುವ ದಾಹದಿಂದ ನನ್ನ ವಿಜ್ಞಾನ ಪ್ರೇರಿತವಾಗಿದೆ, ಮತ್ತಾವುದೂ ಇಲ್ಲ,'' ಎಂದರು. ಮಾನವನ ಸಾಮಾಜಿಕ ನ್ಯಾಯಪ್ರಜ್ಞೆ, ಪ್ರೇಮಶಾಸನದ ಪರಮಾಧಿಕಾರ ಮತ್ತು



ಸ್ವಾರ್ಥಬುದ್ಧಿಯ ನಿರಾಕರಣೆ, ಇವು ಭವಿಷ್ಯದ ಬಾಳಿಗೆ ಪ್ರೇರಕವಾಗಬೇಕು ಎಂಬ ಭಾವನೆ ಐನ್‌ಸ್ಟೀನರ ತತ್ತ್ವ ಶಾಸ್ತ್ರದ ತಿರುಳು.

### ಸತ್ಯಾಗ್ರಹ ವಿಜ್ಞಾನ

''ನಮ್ಮ ಕಾಲಕ್ಕೇ ಹುಟ್ಟಿಬಂದ ಅತ್ಯಂತ ಮಹಿಮಾನ್ವಿತ ರಾಜನೀತಿಜ್ಞ ಮಹಾತ್ಮ ಗಾಂಧಿ ಒಂದು ಮಹತ್ವದ ಜೀವನಮಾರ್ಗ ತೋರಿಸಿಕೊಟ್ಟಿದ್ದಾರೆ. ಒಂದು ಋಜುಮಾರ್ಗದ ದರ್ಶನವಾದಾಗ ಸಾಮಾನ್ಯ ಜನತೆ ಎಂತಹ ತ್ಯಾಗಬಲಿದಾನಗಳಿಗೆ ಸಿದ್ಧರಾಗಿಬಿಡುತ್ತಾರೆ ಎಂದವರು ಸಿದ್ಧಮಾಡಿಕೊಟ್ಟಿದ್ದಾರೆ. ಅವರು ನಿರ್ದೇಶಿಸಿದ ಭಾರತದ ಸ್ವಾತಂತ್ರ್ಯ ಸಂಗ್ರಾಮ ಇದಕ್ಕೆ ಜೀವಂತ ನಿದರ್ಶನ. ದೃಢಸಂಕಲ್ಪ ಬದ್ಧವಾದ ತತ್ತ್ವನಿಷ್ಠ ಉಕ್ಕಿನ ಮನೋನಿಶ್ಚಯ, ಭೌತಶಕ್ತಿ ಶಸ್ತ್ರಶಕ್ತಿಗಳ ಆಧಾರದ ಮೇಲೆ ನಿಂತು ತೋರಿಕೆಗೆ ಅಜೇಯವೆನಿಸುವ ಅಧಿಕಾರದ ದಬ್ಬಾಳಿಕೆಗಿಂತ ಹೆಚ್ಚು ಬಲವುಳ್ಳದ್ದು ಎಂದು ಗಾಂಧೀಜಿ ತೋರಿಸಿದ್ದಾರೆ.'' ೧೯೫೦ರಲ್ಲಿ ಒಂದು ಶಾಂತಿ ಚಳವಳಿಯ ಪತ್ರಿಕೆಗೆ ಬರೆದ ಲೇಖನದಲ್ಲಿ ಆಲ್ಬರ್ಟ್ ಐನ್‌ಸ್ಟೀನ್ ಹೀಗೆ ಬರೆದಿದ್ದಾರೆ.

(ಗಾಂಧೀಜಿ ಮತ್ತು ಐನ್‌ಸ್ಟೀನ್ ಗ್ರಂಥ ಪು. ೮೦)

ನಮ್ಮ ಶತಮಾನದ ಮೂರನೆಯ ಮಹಿಮಾನ್ವಿತ ಚಿಂತನಧಾರೆ ಗಾಂಧೀಜಿ ಉಪಕ್ರಮಿಸಿದ ಈ ಸತ್ಯಾಗ್ರಹ ವಿಜ್ಞಾನ. ಸತ್ಯ ಅಹಿಂಸೆಗಳ ತಳಹದಿಯ ಮೇಲೆ ನಿಂತ ಜನಸಾಮಾನ್ಯರ ಸಂಘಟಕ ನೈತಿಕಶಕ್ತಿಯ ಅದ್ಭುತ ಶಕ್ತಿ ವಿಶೇಷಗಳ ಸಂಶೋಧನೆ. ವೈಚಾರಿಕ ಕ್ರಾಂತಿಗೆ ಈ ಪ್ರಯೋಗಸಿದ್ಧ ಸತ್ಯಾಗ್ರಹ ಜೀವನ ವಿಧಾನದ ಬೀಜ ಬಿತ್ತಿದ ಖ್ಯಾತಿ ಗಾಂಧೀಜಿಯವರದು. ಅವರು ಹೊಸದರ್ಶನದ ದಿಗಂತದ ಅನಾವರಣ ಮಾಡಿದ್ದಾರೆ. ನಿಜವಾದ ಶೋಷಣಾರಹಿತ, ಪ್ರಜಾಸತ್ತಾತ್ಮಕ, ಆರ್ಥಿಕ ಮತ್ತು ಸಾಮಾಜಿಕ ನ್ಯಾಯನಿಷ್ಠ ಮಾನವನ ಸಮಾಜ ರಚನೆಯ ಕಡೆಗೆ ನಡೆಸುವ ಹೆಜ್ಜೆ ಸತ್ಯಾಗ್ರಹ ಜೀವನ ವಿಧಾನ - ಕೇವಲ ಒಂದು ಪರ್ಯಾಯ ಸಂಘರ್ಷ ಪ್ರಕ್ರಿಯೆಯಷ್ಟೇ ಅಲ್ಲ ಆಧುನಿಕ ವಿಜ್ಞಾನ ಮತ್ತು ಅಪ್ರತಿಹತ ಆತ್ಮಜ್ಞಾನಗಳ ಸುಂದರ ಸಂಯೋಜನೆ.



ಯಾವಾಗ್ಲೂ ಕ್ವಾಣಾ ಕ್ವಾಣಾ ಅಂತ ಹಂಗಿಸಿದ್ರೆ ಸರಿಯಾಗಾಕಿಲ್ಲ! ನೀನು ಎತ್ತಾಗಿದ್ರೆ ನಿನ್ ಮನೆ ಆಳ್ಗೆ. ತಿಳ್ಕೋ......

ಸತ್ಯಾಗ್ರಹ ಒಂದು ವಿಕಾಸಶೀಲ ಶಾಸ್ತ್ರ. ದ್ವೇಷ, ಸೇಡು, ಪ್ರತೀಕಾರ ಮುಂತಾದ ನಿಷೇಧಾತ್ಮಕ ಗುಣಗಳನ್ನು ದಮನಮಾಡಿ ಮಾನವನ ಸಹಜ ಸ್ವಭಾವಗಳಾದ ಸತ್ಯ, ಪ್ರೇಮ, ಕರುಣಾ ನಿಷ್ಠೆಗಳನ್ನು ಎಲ್ಲ ಪ್ರಾಪಂಚಿಕ ವ್ಯವಹಾರಗಳಲ್ಲಿಯೂ ಸಕ್ರಿಯ ಶಕ್ತಿಗಳಾಗುವಂತೆ ದೃಢೀಕರಿಸುವುದೇ ಸತ್ಯಾಗ್ರಹದ ಪರಮಗುರಿ. ವಿಶ್ವದ ಮೂಲಸ್ವರೂಪವನ್ನು ಚಿಂತಿಸುವ ವಿಶ್ಲೇಷಣಾತ್ಮಕ ಭೌತವಾದ (ಸೈಂಟಿಫಿಕ್ ಮೆಟೀರಿಯಲಿಸಮ್) ಏಕಮುಖದೃಷ್ಟಿಯ ಜಾಡನ್ನು ಹಿಡಿದುಬಿಡುತ್ತದೆ. ಆಧುನಿಕ ವಿಜ್ಞಾನವೇ ಪ್ರಕೃತಿ ಚೈತನ್ಯಮಯ, ಅದು ಜಡವಸ್ತುವಲ್ಲ ಎಂದು ಸಾರುತ್ತದೆ. ಮಾನವನ ಸ್ವಯಂ ಕರ್ತೃತ್ವ ಶಕ್ತಿಯನ್ನು ಜಾಗೃತಗೊಳಿಸಿ, ಸಂಘಟಿಸಿ, ಒಂದು ಕ್ರಾಂತಿಕಾರಕ ಮೌಲ್ಯವನ್ನಾಗಿ ಪರಿವರ್ತಿಸುವ ಅಹಿಂಸಕ ಸತ್ಯಾಗ್ರಹ ಮಾರ್ಗವನ್ನು ವಿನೋಬಾ 'ಸಾಮ್ಯಯೋಗ' ಎಂದು ಕರೆದಿದ್ದಾರೆ.

''ಸಾಂಖ್ಯದ ವಿಚಾರ, ವಿಕಾಸವಾದ, ಸಾಪೇಕ್ಷವಾದ, ಮಾರ್ಕ್ಸ್‌ಸಿದ್ಧಾಂತ ಗಾಂಧೀ ವಿಚಾರಮಾರ್ಗ, ಅರವಿಂದರ ಅತಿಮಾನಸವಾದ, ಎಲ್ಲವನ್ನೂ ನಾವು ಈಗ ಸಮಗ್ರವಾಗಿ ಚಿಂತಿಸಬೇಕು. ಮಾನವಜೀವನದ ಉತ್ಥಾನ ವನ್ನು ಮಾನವೀಯ ದೃಷ್ಟಿಯಿಂದ ಪೂರ್ಣಗೊಳಿಸುವ ಹಂಬಲದಿಂದಲೇ ಅವು ಉದ್ಭವವಾದವು. ಅವು ಪರಸ್ಪರ ಪೋಷಕವಾಗುವ ವಿಕಾಸದ ಹಂತಗಳು. ಸಾಮ್ಯ ಯೋಗದಲ್ಲಿ ಈ ಮೂಲಭೂತ ತತ್ತ್ವಜ್ಞಾನ ಸಮಾವೇಶ ವಾಗುತ್ತದೆ'' ಎಂದಿದ್ದಾರೆ ವಿನೋಬಾ ಭಾವೆ.

ನಮ್ಮ ಶತಮಾನದ ಕೊನೆಯಲ್ಲಿ ಐಕ್ಯಜಗತ್ತಿನ ಕನಸು ಕಾಣುತ್ತಿದ್ದೇವೆ. ಈಗಿನ ರಾಜ್ಯಶಕ್ತಿ, ಸೈನ್ಯ ಶಕ್ತಿ, ಆರ್ಥಿಕ ರಚನಾಸಂಸ್ಥೆಗಳು ಶಾಂತಿ ನೆಮ್ಮದಿಗಳನ್ನು ನೆಲೆಗೊಳಿಸಲು ಅಸಮರ್ಥವಾಗಿವೆ. ನೂತನ ಪರ್ಯಾಯ ಸಂಸ್ಥೆಗಳನ್ನು ರಚಿಸಲು ಮಾರ್ಕ್ಸ್, ಐನ್‌ಸ್ಟೀನ್ ಮತ್ತು ಗಾಂಧೀಜಿ ಅವರುಗಳ ಬೀಜರೂಪದ ವೈಚಾರಿಕ ತಳಹದಿಯಿಂದ ಪ್ರೇರಿತವಾದ 'ಸಮಗ್ರ ಕ್ರಾಂತಿ' [illegible] ದಾರಿದೀಪವಾಗಿ ನಿಲ್ಲಬಲ್ಲುದು.

[illegible]
[illegible]

# ಅಂಡಮಾನಿನ ಹಡಗಿನಲ್ಲಿ ಬಂಕರ್ ಎಂಬ ನರಕಗಳು

*ನಮ್ಮ ಚರಿತ್ರೆಯಲ್ಲಿ ಅಂಡಮಾನ್‌ಗೆ ವಿಶಿಷ್ಟ ಸ್ಥಾನವಿದೆ. ಅದು ಕೇವಲ ನೈಸರ್ಗಿಕ ಸೌಂದರ್ಯದ ತಾಣವಲ್ಲ, ಹಿಂದಿನ ಇತಿಹಾಸದ ದಟ್ಟವಾದ ನೆನಪು ತರುವ ದ್ವೀಪಸಮೂಹ. ಅಲ್ಲಿಯ ಸ್ಥಳೀಕರ ಬಗೆಗಿನ ಅಧ್ಯಯನ ಸಾಕಷ್ಟು ನಡೆದಿದ್ದರೂ ಕುತೂಹಲವು ಪೂರ್ತಿಯಾಗಿ ತಣಿದಿಲ್ಲ. ಬದಲಾಗುತ್ತಿರುವ ಇಂದಿನ ದಿನಗಳಲ್ಲಿ ಅಂಡಮಾನ್‌ನ ಸಮಾಜಗಳ ಪರಿಚಯವನ್ನು ಸಾಮಾಜಿಕ ಅಧ್ಯಯನದ ಶಿಸ್ತಿನಲ್ಲಿ ಪಕ್ವವಾಗಿರುವ ಡಾ॥ ರಹಮತ್ ತರೀಕೆರೆಯವರಿಂದ ಪಡೆಯುವುದು ಮೌಲಿಕವಾಗಿರುತ್ತದೆ. ಪ್ರವಾಸದ ಮೊದಲ ಕಂತು ಇದು. ಮುಂದಿನ ಸಂಚಿಕೆಗಳಲ್ಲಿ ಇದನ್ನು ಮುಂದುವರಿಸಲಾಗುತ್ತದೆ.*

**ಡಾ॥ ರಹಮತ್ ತರೀಕೆರೆ**

ಭಾರತದ ಭೂಪಟದಲ್ಲಿ ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು ಇರುವ ರೀತಿಯೇ ವಿಚಿತ್ರ. ಜೇನು ಹುಟ್ಟಿನಂತೆ ಇಳಿಬಿದ್ದಿರುವ ಅದರ ಮೂರೂ ಕಡೆ, ಗಗನವನ್ನೇ ಕಿತ್ತುತಂದು ಹಾಸಿದಂತಿರುವ ನೀಲಕಡಲಿದೆ. ಇದರೊಳಗೆ ಮಕ್ಕಳಾಟದ ಕಲ್ಲಹರಳುಗಳಂತೆ ಚೆಲ್ಲಿಕೊಂಡಿವೆ ಈ ದ್ವೀಪಗಳು. ಅಪಾರ ಜಲರಾಶಿಯಲ್ಲಿ, ಒಂದು ಭಾರೀ ಅಲೆ ಬಂದರೆ ಮುಳುಗಿಹೋಗುವಂತಿರುವ ಈ ಮಣ್ಣ ದಿಬ್ಬಗಳು, 'ಕರಗದೆ ಹ್ಯಾಗಾದರೂ ಉಳಿದಿವೆಯಪ್ಪಾ' ಎಂದು ಸೋಜಿಗವಾಗುತ್ತದೆ; ಕೆಲವು ಸಲ 'ಈ ದೊಡ್ಡ ದೇಶದ ಸಹವಾಸವೇ ಬೇಡ' ಎಂದು ಮುನಿಸಿಕೊಂಡೋ ಅಭಿಮಾನದಿಂದಲೋ ದೂರನಿಂತ ಮಕ್ಕಳಂತೆ ಕಾಣುವ ಇವು, ಕಡಲೊಳಗೆ ಧೀಮಂತವಾಗಿ ನಿಂತಿರುವ ಪರಿ ಆದರ ಹುಟ್ಟಿಸುತ್ತದೆ.

ತೇಜಸ್ವಿಯವರ 'ಅಲೆಮಾರಿಯ ಅಂಡಮಾನ್' ಪುಸ್ತಕ ಓದಿದ ಮೇಲೆ, ಹೋಗಬೇಕೆಂಬ ಆಸೆ, ಫಲವಾಗಿ ಬದಲಿತು. ಹೊರಟಿದ್ದು ಐದು ಜನ. ಚಿತ್ರಕಲಾವಿದರಾದ ಜಯಕುಮಾರ್ ಮತ್ತು ಅರುಣ (ಅವರ ಹೆಂಡತಿ), ನಾನು ಮತ್ತು ಬಾನು, ಹಾಗೂ ಕಲಾಶಾಲೆಯಲ್ಲಿ ಅಧ್ಯಾಪಕರಾದ ಗಣನಾಥ್.

ನಾವು ಹೊರಟಿದ್ದು ಮೇ ತಿಂಗಳಲ್ಲಿ. ''ಚೆನ್ನಾಗಿರುತ್ತೆ, ಹೋಗಿಬನ್ನಿ'' ಎಂದು ಹಾರೈಸಿದವರು ಕೆಲವರು. ಆದರೆ 'ಹೋಗದಿರೀ ಸೋದರರಿರಾ' ಎಂದು ಎಚ್ಚರಿಸಿದವರೇ ಬಹಳ.

ನಮ್ಮ ನಿಜವಾದ ಶೋಕ ಶುರುವಾಗಿದ್ದು ಅಂಡಮಾನಿನಲ್ಲಿ ಅಲ್ಲ, ಮದರಾಸಿನ ಹಡಗುಕಟ್ಟೆಯಲ್ಲಿ. ಈ ಟ್ರಿಪ್ಪಿನಲ್ಲಿ ಪ್ರವಾಸಿಗರಿಗೆ ಟಿಕೇಟು ಕೊಡಲಾಗುವುದಿಲ್ಲ; ಅಂಡಮಾನಿನ ನಿವಾಸಿಗಳಿಗೆ ಹಾಗೂ ಸೈನಿಕರಿಗೆ ಮಾತ್ರ ಅನುಮತಿ ಎಂದು, ಟಿಕೇಟಿನ ಕಛೇರಿಯಲ್ಲಿ ಕಡ್ಡಿಮುರಿದಂಥ ಉತ್ತರ ಬಂತು. ಏನೇನೊ ಕನಸು ಕಟ್ಟಿಕೊಂಡು ದೂರದ ಹಂಪಿಯಿಂದ ಬಂದ ನಮ್ಮನ್ನು ಒಬ್ಬ ಕ್ಲರ್ಕು ಒಂದೇ ಮಾತಿನಿಂದ ನಿರಾಯುಧರಾಗಿಸಿಬಿಟ್ಟ. ಈಗ ಟಿಕೇಟಿಲ್ಲವೆಂದು ಹೇಳಿ ಈತ ನಮ್ಮನ್ನು ಮತ್ತಷ್ಟು ಕಂಗಾಲುಮಾಡಿದ. 'ಎಲಾ ! ಒಂದು ದೊಡ್ಡಪಟ್ಟಣದಂತಿರುವ ಹಡಗಿನಲ್ಲಿ, ನಮ್ಮಂಥ ಐದು ಜನಕ್ಕೆ ಜಾಗವಿಲ್ಲವೇ ?' ಎಂಬ ಅಸಹಾಯಕತೆ ಆವರಿಸಿತು. ''ಕೆಂಡದ ಮಳೆ ಸುರಿದಿರಲಿ ಹೋಗಿಬರುವುದೇ ನಿಜ'' ಎಂದು ಹಠಹಿಡಿದು ಬಂದವರು ನಾವು.

*ಹಡಗಿನ ಮೂಲಕ ಕಾಣುವ ಬಂಗಾಳಕೊಲ್ಲಿಯ ಕರಿನೀರು*



ನಮ್ಮ ನಿರಾಶೆಯ ಕಾರ್ಮೋಡದಲ್ಲಿ ಹಠಾತ್ತನೆ ಮಿಂಚಾಯಿತು. ಒಬ್ಬ ವಿದೇಶಿ ಹೆಂಗಸು, ಧಡ ಧಡಾ ನುಗ್ಗಿಬಂದವಳೇ ಟಿಕೇಟಿನ ಅರ್ಜಿಗಳನ್ನು ಟಿಕೇಟು ಕೊಡುವವನ ಮುಂದಿಟ್ಟಳು. ಅವನ ಆಶ್ವಾಸನೆಯ ಮೇರೆಗೇ ಅವಳು ಅರ್ಜಿತುಂಬಿಕೊಂಡು ಬರಲು ಹೊರಹೋಗಿದ್ದಳು ಅನಿಸುತ್ತದೆ. ಕಳ್ಳ ಸಿಕ್ಕಿಬಿದ್ದ. ಅವನ ಮುಖ ಕೊಂಚ ಸಪ್ಪಗಾಯಿತು. 'ಅವಳ ಬಿಳೀ ಮೂತಿ ನೋಡಿ ಟಿಕೇಟು ಕೊಡಲು ಒಪ್ಪಿದ್ದಾನೆ. ನಮ್ಮವರಿಂದ ನಮಗೇ ವಂಚನೆಯೇ ?' ಎಂದು ನಾವು ಜಗಳಕ್ಕೆ ಸಿಟ್ಟು ತುಂಬಿಕೊಳ್ಳುತ್ತಿದ್ದೆವು. ಆತ ಕರಗಿದಂತೆ ನಟಿಸುತ್ತ ''ಎಷ್ಟು ಜನ ನೀವು ? ಬಂಕರಿನ ಟಿಕೇಟುಗಳಿದ್ದರೆ ಸಿಗಬಹುದು. ಹೋಗಿ ದೊಡ್ಡ ಸಾಹೇಬರಲ್ಲಿ ಕೇಳಿಕೊಳ್ಳಿ'' ಎಂದು ಹೇಳಿದ.

ಅಷ್ಟರಲ್ಲಿ ದೊಡ್ಡ ಸಾಹೇಬರು ಮನೆಗೆ ಹೋಗಲು ಕಾರು ಹತ್ತುತ್ತಿದ್ದರು. ಓಡಿಹೋಗಿ ಮುಂದೆ ನಿಂತೆವು. 'ಏನು' ಎಂಬಂತೆ ಕಣ್ಣು ಸಣ್ಣಗೆ ಮಾಡಿ ನೋಡಿದರು.

''ಅಂಡಮಾನಿಗೆ ಹೋಗಬೇಕೆಂದು ಕರ್ನಾಟಕದಿಂದ ಆಸೆಪಟ್ಟು ಬಂದಿದ್ದೇವೆ. ಐದು ಟಿಕೇಟು ಬೇಕು.''

''ಏನು ಕೆಲಸ ಮಾಡಿಕೊಂಡಿದ್ದೀರಿ ?'' ಕನಿಕರದಿಂದ ಸಾಹೇಬರು ಕೇಳಿದರು.

''ಹಂಪಿ ಯೂನಿವರ್ಸಿಟೀಲಿ ಮೇಷ್ಟ್ರುಗಳು.''

ಅವನ ಮೇಲೆ ಪ್ರಭಾವ ಬೀರಲು ಜಯಕುಮಾರ್ ನನ್ನತ್ತ ಕೈಮಾಡಿ 'ಇವರು ಕನ್ನಡದ ಲೇಖಕ' ಎಂದೇನೊ ಹೇಳಿದರು. ನಾನು ಅಪರಾಧಿಯಂತೆ ಮುಖಮಾಡಿ ನಿಂತಿದ್ದೆನೆನಿಸುತ್ತದೆ. ಅವನ ಕನಿಕರ ಮತ್ತೂ ಹೆಚ್ಚಾಯಿತು. ''ಎಲ್ಲಿಯಾದರೂ ಹಿಲ್‌ಸ್ಟೇಷನ್ನುಗಳಿಗೆ ಹೋಗುವುದನ್ನು ಬಿಟ್ಟು, ಅಂಡಮಾನಿಗೆ ಯಾಕೆ ಹೋಗುತ್ತಿದ್ದೀರಿ ?'' ಎಂದು ತನ್ನ ತಮಾಷೆಗೆ ತಾನೇ ನಕ್ಕು, ''ಕ್ಯಾಬಿನ್ ಸೀಟುಗಳೆಲ್ಲ ಮುಗಿದಿವೆ. ಬಂಕರ್ ಟಿಕೇಟು ಕೊಡೋಣ. ನಾಳೆ ಬನ್ನಿ'' ಎಂದ.

ಬಂಕರ್ರೋ, ಕ್ಯಾಬಿನ್ನೋ ಹಡಗೆಂಬ ಲೋಕದಲ್ಲಿ ಒಂದು ಪಾದವೂರಲು ಜಾಗ ಸಿಕ್ಕರೆ ಸಾಕು ಅನಿಸಿತ್ತು. 'ಹಡಗಿನ ಟಿಕೇಟು ಸಿಗಲಿಲ್ಲ'ವೆಂಬ ಕರಾಳ ಉತ್ತರ ಹೊತ್ತುಕೊಂಡು ಊರಿಗೆ ವಾಪಾಸು ಹೋಗುವ ಭಯವೆಲ್ಲ ತೊಲಗಿತು. ಇದೀಗ ಮದರಾಸಿನ ಕಪಾಳಕ್ಕೆ ಹೊಡೆಯುವ ಸಂಜೆಯ ಇಳಿಬಿಸಿಲೂ ಬೆಳದಿಂಗಳಂತೆ ತಂಪಾಗಿ ಬೆಳಗತೊಡಗಿತು.

### ನಾನ್‌ಕೌರಿ ಹಡಗು

ನಾವು ಹೋಗಲಿರುವ ಹಡಗಿನ ಹೆಸರು 'ನಾನ್‌ಕೌರಿ'. ಬಂದರುಕಟ್ಟೆಯಲ್ಲಿ ಅದು ನಿಂತಿತ್ತು. ಒಂದು ಭಾರೀ ಕಟ್ಟಡವನ್ನು ಕತ್ತರಿಸಿ ತಂದು ನೀರಲ್ಲಿಟ್ಟಂತಿತ್ತು. ಅದರ ಮೇಲೆ ಬಗೆಬಗೆಯ ಬಣ್ಣಗಳ ಯೂನಿಫಾರಂ ಹಾಕಿಕೊಂಡು ಕೆಲಸಮಾಡುತ್ತಿದ್ದ ನೂರಾರು ಜನ, ಇರುವೆಗಳಂತೆ ಕಾಣುತ್ತಿದ್ದರು. ಸಾವಿರದ ಇನ್ನೂರು ಕಿಲೋಮೀಟರು ಕಡಲ ಮೇಲೆ, ಸಾವಿರಾರು ಜನರನ್ನೂ ಸಾವಿರಾರು ಟನ್ನು ಲಗೇಜನ್ನೂ ಹೊತ್ತುಕೊಂಡು ಹೋಗಲಿರುವ ಅದು, ಧೀರೋದಾತ್ತವಾಗಿ ನಿಂತಿತ್ತು. ಕಾಡಾನೆಯನ್ನು ಕಟ್ಟಿದಂತೆ ದಪ್ಪಹಗ್ಗಗಳಲ್ಲಿ ಅದನ್ನು ಬಂದರಿನ ಕಲ್ಲುಗೂಟಗಳಿಗೆ ಬಿಗಿದಿದ್ದರು. ಆದರೆ ಇಂಥ ಭವ್ಯ ಹಡಗನ್ನು ಹತ್ತುವ ಜನರ ಕೋಲಾಹಲವು ಯಃಕಶ್ಚಿತ್ ವಸ್ತುವನ್ನಾಗಿ ಮಾಡಿಬಿಟ್ಟಿತ್ತು. ಪ್ರಯಾಣಿಕರು ತಮ್ಮ ಗಂಟುಮೂಟೆಗಳನ್ನಿಟ್ಟುಕೊಂಡು, ಹರಿದಾಡುವ ಮಕ್ಕಳು ಮರಿಗಳನ್ನು ಬಡಿಯುತ್ತ ಸಂಭಾಳಿಸುತ್ತ, ಇನ್ನೂ ಬರಬೇಕಾದವರಿಗಾಗಿ ಕಾಯುತ್ತ, ಟಿಕೇಟು ಸಿಗದವರು ಪರದಾಡುತ್ತ ಭಯಂಕರ ಗಲಾಟೆ ಎಬ್ಬಿಸಿದ್ದರು. ಟಿಕೇಟಿಲ್ಲದೆ ಕದ್ದು ಹತ್ತುವವರು

ಇದ್ದುದರಿಂದ ಬಂದರಿನಲ್ಲಿ ಪೊಲೀಸರೂ ಹಡಗಿನ ಸಿಬ್ಬಂದಿಗಳೂ ತುಂಬ ಕಠೋರವಾಗಿ ವರ್ತಿಸುತ್ತಿದ್ದರು. ಹಡಗಿನಲ್ಲಿ ಕುಡಿತದ ನಿಷೇಧವಿರುವುದರಿಂದ ಹಾಗೂ ಅಂಡಮಾನಿನಲ್ಲಿ 'ಎಣ್ಣೆ'ಯ ಬೆಲೆ ವಿಪರೀತ ಹೆಚ್ಚಿರುವುದರಿಂದ, ಬಹಳಷ್ಟು ಗಂಡಸರು (ತಮ್ಮ ಹೆಂಡಿರು ಮಕ್ಕಳನ್ನು ಬಂದರಿನಲ್ಲಿ ಬಿಟ್ಟುಹೋಗಿ) ಹತ್ತುವ ಮೊದಲೇ ಟೈಟಾಗಿ ಬಂದಿದ್ದರು. ಭಾರೀಗಾತ್ರದ ಟ್ರಂಕುಗಳನ್ನು ಹೊತ್ತವರು ಕ್ಯೂನಲ್ಲಿ ನಿಂತು ಭಾರದಿಂದ ಚಡಪಡಿಸುತ್ತಿದ್ದರು. ಆ ಕ್ಯೂಗಳೋ ಫರ್ಲಾಂಗು ಉದ್ದದವು. ಜಲಪ್ರಳಯವಾಗುವುದು ಎಂದು ಗೊತ್ತಾದರೆ, ಪ್ರಾಣ ಉಳಿಸಿಕೊಳ್ಳಲು ನುಗ್ಗಾಟ ಮಾಡಿ ಹತ್ತುವಂತೆ ಜನ ಹತ್ತುತ್ತಿದ್ದರು. ಹಡಗನ್ನು ಹತ್ತುವ ಈ ವಿಧಿವತ್ತಾದ ಆಚರಣೆಯನ್ನು 'ಎಂಬಾರ್ಕಿಂಗ್' ಎನ್ನುತ್ತಾರೆ. ಹಡಗು ಹೊರಡುವ ಐದು ಗಂಟೆ ಮೊದಲೇ ಇದು ಶುರುವಾಗುತ್ತದೆ. ಆದರೆ ಆ ಜನಕ್ಕೆ, ಅವರ ಗಂಟುಮೂಟೆಗಳಿಗೆ, ಈ ಸಮಯ ಏನೇನೂ ಸಾಲದು. ಕೊನೆಗಳಿಗೆವರೆಗೂ 'ನನ್ನ ಗಂಡ ಬಂದಿಲ್ಲ, ನನ್ನ ಕೂಸು ಬಂದಿಲ್ಲ', ಎಂದು ಒದ್ದಾಡುವ ಹೆಂಗಸರು, ಹಡಗನ್ನು ಅಸಹಾಯಕ ಮಾಡಿ ನಿಲ್ಲಿಸಿದ್ದರು !

### ಬಂಕರು ಕ್ಯಾಬಿನ್

ಬಸ್ಸು-ರೈಲು, ಹೆಚ್ಚೆಂದರೆ ಸಣ್ಣಪುಟ್ಟ ದೋಣಿಗಳನ್ನು ಕಂಡ ನಮಗೆ, ಹಡಗಿನಲ್ಲಿ ಹೋಗುವ ಖುಷಿಗಿಂತ, ಅದನ್ನು ಒಳಗೆ ಸುತ್ತಾಡಿ ನೋಡುವ ಕುತೂಹಲ. ಹಡಗಿನ ಒಳಗೆ ಕಾಲಿಟ್ಟಕೂಡಲೇ ತಂಪಾದ ಗಾಳಿ ಮುತ್ತಿಕೊಂಡಿತು. ಇಡೀ ಹಡಗನ್ನು ಏರ್‌ಕಂಡೀಶನ್ ಮಾಡಲಾಗಿತ್ತು. ತಂಗಾಳಿಯು ಬಂಕರಿನವರಿಗೂ ಕ್ಯಾಬಿನ್ನಿನವರಿಗೂ ಸಮಾನವಾಗಿ ಬೀಸುತ್ತಿತ್ತು. ಸಮಾನತೆ ಇದ್ದುದು ಇದರಲ್ಲಿ ಮಾತ್ರ. ಇಡೀ ಹಡಗಿನ ಒಳಗೋಡೆಗಳು 'ಯಾವ್ಯಾವ ಟಿಕೇಟಿನವರು ಎಲ್ಲೆಲ್ಲಿ ಇರಬೇಕು ಅಥವಾ ಇರಬಾರದು' ಎಂಬ ನಿಯಮಗಳಿಂದ ತುಂಬಿಹೋಗಿದ್ದವು. ತಮ್ಮ ಸೀಟುಗಳನ್ನು ಹುಡುಕಿ, ಲಗೇಜುಗಳನ್ನು ಜೋಡಿಸಿ ಇಟ್ಟುಕೊಳ್ಳುವವರೆಗೆ, ಬಂಕರಿನ ಪ್ರಯಾಣಿಕರು ಅತ್ತಿಂದಿತ್ತ ಹೊಯ್ದಾಡುತ್ತಲೇ ಇದ್ದರು. ಇದೇ ಹಡಗಿನಲ್ಲಿ ಪಯಣಿಸಿದ್ದ ಕನ್ನಡದ ಲೇಖಕ ಪೂರ್ಣಚಂದ್ರ ತೇಜಸ್ವಿಯವರು ಇದನ್ನು ಲಟಾರಿ ಬಸ್ಸಿನಂತೆ ವರ್ಣಿಸಿದ್ದರು. ಹಾಗೂ ಬಂಕರ್ ಕ್ಲಾಸನ್ನು 'ಕುಡುಕರು ಕೊಳಕರು ತುಂಬಿದ ಸಾಕ್ಷಾತ್‌ನರಕ' ಎಂದು ಕರೆದಿದ್ದರು. 'ಖಂಡಿತ ದನದ ಕೊಟ್ಟಿಗೆಯಂತಿರಬೇಕು' ಎಂದು ಅಳುಕುತ್ತಾ ಹೋದ ನಮಗೆ, ಬಂಕರ್ ಕ್ಲಾಸನ್ನು ಕಂಡು ನಿರಾಶೆಯೇನೂ ಆಗಲಿಲ್ಲ. ಹಾಸಿಗೆ ರೈಲ್ವೆ ಸ್ಲೀಪರಿನಂತಿದ್ದವು. ಮುಖ್ಯವಾಗಿ, ಕಡಲು ಕಾಣುವಂತೆ ಮಾಡಿದ ದಪ್ಪಗಾಜಿನ ಕಿಟಕಿಗಳಿದ್ದವು. 'ನಾನ್‌ಕೌರಿ' ಕೂಡ ಗುಜರಿಯಾಗಿರಲಿಲ್ಲ. ದೀಪಗಳಿಂದ ಝಗಝಗಿಸುತ್ತ ಸುಸಜ್ಜಿತ ಸ್ಟಾರ್‌ಹೋಟೆಲಿನಂತಿತ್ತು. ಇತ್ತೀಚೆಗಷ್ಟೇ ಅದನ್ನು ನವೀಕರಣಗೊಳಿಸಿದ್ದರು. ಏಳು ಮಹಡಿಗಳ ಈ ಹಡಗು, ಪುರಾಣಗಳಲ್ಲಿ ಬರುವ ಅತಳ ವಿತಳ ಪಾತಾಳ ರಸಾತಳ ಲೋಕಗಳಂತಿತ್ತು. ಅತ್ಯಂತ ಕೆಳಗಿನ ಅಂತಸ್ತುಗಳಲ್ಲಿ ಹಡಗಿನ ಯಂತ್ರಗಳೂ ಲಗೇಜು ತುಂಬುವ ಗೋಡೌನುಗಳೂ ಇದ್ದವು. ಅದರ ಮೇಲಿನ ಅಂತಸ್ತುಗಳಲ್ಲಿ ಬಂಕರುಗಳಿದ್ದವು. ಮೇಲಕ್ಕೆ ಮೇಲಕ್ಕೆ ಹೋಗುತ್ತಾ, ಕ್ಯಾಬಿನ್ ಕ್ಲಾಸು, ಡಿಲಕ್ಸ್ ಕ್ಲಾಸಿನವರ ಕೋಣೆಗಳು. ತುತ್ತತುದಿಯ ಅಂತಸ್ತಿನಲ್ಲಿ ಹಡಗು ನಡೆಸುವ ಕಪ್ತಾನರ ಕೋಣೆಗಳೂ ಹಾಗೂ ಚಾಲನಾ ಕೋಣೆಗಳೂ ಇದ್ದವು. ಬಂಕರೆಂದರೆ, ಸರ್ಕಾರಿ ಆಸ್ಪತ್ರೆಗಳ ಜನರಲ್ ವಾರ್ಡುಗಳಲ್ಲಿರುವಂತೆ, ವಿಶಾಲವಾದ ಹಜಾರದಲ್ಲಿ ನೂರಾರು ಮಂಚಗಳು. ಒಂದೊಂದು ಸ್ಟ್ಯಾಂಡಿನಲ್ಲಿ ಕೆಳಗೆ ಮೇಲೆ ಒಟ್ಟು ೪ ಮಂಚಗಳು. 'ಕ್ಯಾಬಿನ್' ಎಂದರೆ, ನಾಲ್ಕು ನಾಲ್ಕು ಜನರಿರುವ ಸುಸಜ್ಜಿತವಾದ ಕೋಣೆಗಳು. ಕ್ಯಾಬಿನ್ ಟಿಕೇಟು ಬಂಕರಿನ ಮೂರು ನಾಲ್ಕು ಪಟ್ಟು ಹೆಚ್ಚಿರುತ್ತಿತ್ತು. 'ಕ್ಯಾಬಿನ್' 'ಬಂಕರ್' ಎಂಬ ಈ ಎರಡು ಶಬ್ದಗಳು, ಹಡಗಿನ ಲೋಕದಲ್ಲಿ ಸ್ವರ್ಗ ನರಕಗಳ ಅರ್ಥ ಹೊಂದಿದ್ದವು. ಅಲ್ಪಸಂಖ್ಯಾತರಾದ ಕ್ಯಾಬಿನ್ ಪ್ರಯಾಣಿಕರಿಗೂ, ಅಪಾರ ಸಂಖ್ಯೆಯ ಬಂಕರ್ ಪ್ರಯಾಣಿಕರಿಗೂ ಇದ್ದ ಸೌಲಭ್ಯಗಳಲ್ಲಿ ಕಂದಕದಂಥ ವ್ಯತ್ಯಾಸವಿತ್ತು. ಎರಡೂ ವರ್ಗದ ಪ್ರಯಾಣಿಕರಿಗೆ ಒದಗಿಸಲಾದ ಡೈನಿಂಗ್ ಹಾಲು, ಶೌಚಾಲಯ, ಮನರಂಜನ ಮುಂತಾದ ಸೌಲಭ್ಯಗಳಲ್ಲಿ ಇದು ಎದ್ದು ಕಾಣುತ್ತಿತ್ತು. ನೂರಾರು ಬಂಕರು ಪ್ರಯಾಣಿಕರಿಗೆ ಒಂದೆರಡು ಫ್ಯಾನುಗಳು. ತಂತಮ್ಮ ಸೀಟುಗಳನ್ನು ಬಿಟ್ಟು ಹೊರಗೆ ಬಂದು ಸಮುದ್ರ ನೋಡಲು, ಗಾಳಿಸೇವನೆ ಮಾಡಲು ಸಾವಿರಾರು ಪ್ರಯಾಣಿಕರಿಗೆ ಒಂದು ಇಕ್ಕಟ್ಟಾದ ಜಾಗ ನಿಗದಿಪಡಿಸಲಾಗಿತ್ತು. ನೂರರ



ಹಡಗಿನ ಉಪ್ಪರಿಗೆಯಲ್ಲಿ ಕ್ಯಾಬಿನ್ ಪ್ರಯಾಣಿಕರ ವಿರಾಮ ತಾಣ

ಸಂಖ್ಯೆಯಲ್ಲಿದ್ದ ಕ್ಯಾಬಿನ್ ಪ್ರಯಾಣಿಕರಿಗೆ, ೫ನೇ ಅಂತಸ್ತಿನ ಡೆಕ್ಕಿನ ಮೇಲೆ ವಿಶಾಲವಾದ airing space ಈಜುಕೊಳ, ಸಮುದ್ರ ನೋಡುತ್ತ ಕುಳಿತುಕೊಳ್ಳಲು ಸುಖಾಸೀನಗಳು ಇದ್ದವು. ಕ್ಯಾಬಿನ್ ಸೀಟುಗಳಿರುವ ಕಡೆ, ಬಂಕರಿನವರು ಬರಬಾರದೆಂದು ಎಲ್ಲೆಂದರಲ್ಲಿ ಕಟ್ಟುನಿಟ್ಟಾದ ಎಚ್ಚರಿಕೆ ಬರೆಯಲಾಗಿತ್ತು. ತಮ್ಮ ಕೋಣೆ, ಶೌಚಾಲಯ, ಡೈನಿಂಗ್ ಹಾಲುಗಳಲ್ಲಿ ಯಾವ ಕಾರಣಕ್ಕೂ ಬಂಕರಿನವರನ್ನು ಬಿಟ್ಟುಕೊಳ್ಳಬಾರದೆಂದು ಕ್ಯಾಬಿನ್ನಿಗರನ್ನೂ ವಿನಂತಿಸಲಾಗಿತ್ತು. ಆಗಾಗ ಮೈಕಿನಲ್ಲಿ ತಮಿಳು, ಹಿಂದಿ, ಇಂಗ್ಲೀಷುಗಳಲ್ಲಿ ಈ ಎಚ್ಚರಿಕೆ- ವಿನಂತಿಗಳನ್ನು ಸಂದೇಶಗಳಂತೆ ಪ್ರಸಾರ ಮಾಡಲಾಗುತ್ತಿತ್ತು. ಹಡಗುಗಳಲ್ಲಿ ಜಾತಿಭೇದದಂಥ ಈ ತರತಮಗಳು ಜನಾಂಗಭೇದವನ್ನು ಆಚರಿಸುತ್ತಿದ್ದ ಬಿಳಿಯರ ಕಾಲದ ಬಳುವಳಿಯೇ ಇರಬೇಕು. ಆಫ್ರಿಕೆಯ ರೈಲುಗಳಲ್ಲಿ ಇದರ ಅನುಭವವನ್ನು ಮೋಹನದಾಸ ಕರಮಚಂದ ಗಾಂಧಿ, ಇದನ್ನು ಅನುಭವಿಸಿದ್ದರಷ್ಟೆ. ಹೇಳಿಕೇಳಿ 'ನಾನ್‌ಕೌರಿ' ಹಡಗು ಇಂಗ್ಲೆಂಡಿನಲ್ಲಿ ತಯಾರಾದುದು. ಒಟ್ಟಿನಲ್ಲಿ ಬಂಕರಿನವರೆಂದರೆ, ಸಜ್ಜನರ ಶಾಂತಿ ಸ್ವಚ್ಛತೆಗಳನ್ನು ಹಾಳುಮಾಡುವ ಪೀಡೆಗಳು ಎಂಬ ಭಾವನೆಯನ್ನು ಈ ಬರೆಹಗಳು ಹುಟ್ಟಿಸುತ್ತಿದ್ದವು.

### ಹಡಗಿನಲ್ಲಿ ಸುತ್ತಾಟ

ಆದರೆ ವಾಸ್ತವದಲ್ಲಿ ಬಂಕರಿನವರು ನಿರಂಕುಶಮತಿಗಳು. ಎಲ್ಲೆಂದರಲ್ಲಿ ಹಾಯಾಗಿ ಅಡ್ಡಾಡುತ್ತಿದ್ದರು. ಇಂಗ್ಲೀಷಿನಲ್ಲಿದ್ದ ಅಪಮಾನಕಾರಿ ಬೋರ್ಡುಗಳನ್ನು ಓದಲು ಅವರಿಗೆ ಸಾಧ್ಯವಿರಲಿಲ್ಲ. ಓದಲು ಗೊತ್ತಾದರೂ ಬಹುಸಂಖ್ಯಾತರಾಗಿದ್ದ ಅವರು ಕೇರ್ ಮಾಡುತ್ತಿರಲಿಲ್ಲ. ಅಲೆಗಳಿಗೆ ಇಡೀ ಹಡಗೇ ಜೋಕಾಲಿಯಂತೆ ಓಲಾಟಮಾಡುವಾಗ, ಅಧೋಲೋಕದವರಿಗಿಂತ ತುಂಬ ಬಾಧೆಯಾಗುತ್ತಿದ್ದುದು ಉಪ್ಪರಿಗೆಯಲ್ಲಿದ್ದವರಿಗೇ. ಹೀಗಾಗಿ, ತಲೆಸುತ್ತು, ವಾಂತಿ ಮುಂತಾದ ಕಡಲ ಕಾಯಿಲೆಗಳನ್ನು ತಾಳಲಾರದೆ, ಕ್ಯಾಬಿನ್ನಿನ ದೇವತೆಗಳು ಒಳಗೆ ಹಾಸಿಗೆಗಳ ಮೇಲೆ ಬಿದ್ದುಕೊಂಡಿದ್ದುದೂ ಇದಕ್ಕೆ ಕಾರಣವಾಗಿತ್ತು. ಮೂಲತಃ ಬಿಸಿಲು ಮಳೆ ತಾಳಿಕೊಂಡು ಗಟ್ಟಿಮುಟ್ಟಾಗಿದ್ದ ಬಂಕರಿನ ಮರ್ತ್ಯರು, ಬೀಡಿ ಸೇದುತ್ತ, ಎಲೆ ಅಡಿಕೆ ಜಗಿದು ಎಲ್ಲೆಂದರಲ್ಲಿ ಪಿಚಕಾರಿ ಹೊಡೆಯುತ್ತ, ಹರಟೆಕೊಚ್ಚುತ್ತ ಓಡಾಡಿಕೊಂಡಿದ್ದರು. ಸಾಮಾನ್ಯವಾಗಿ ಹಡಗಿನವರೂ ಗಡಿನಿಷೇಧಗಳನ್ನು ದಾಟಿಬರುತ್ತಿದ್ದ ಇವರನ್ನು ತಡೆಯಲು ಹೋಗುತ್ತಿರಲಿಲ್ಲ. ವಾಸ್ತವವಾಗಿ ಹಡಗನ್ನು ಜೀವಂತವಾಗಿಡುತ್ತಿದ್ದವರೇ ಬಂಕರಿನವರು. ಜಗಳ, ಗಲಾಟೆ, ಗಲೀಜು, ಬಂಕರಿನಲ್ಲಿದ್ದವು, ನಿಜ. ಆದರೆ ಅಪಾರವಾದ ಜೀವಂತಿಕೆ, ಹರಟೆ, ಕೇಕೆ, ನಗು, ಅಲ್ಲಿ ಮಾತ್ರ ತುಳುಕಾಡುತ್ತಿದ್ದವು. ತಂತಮ್ಮ ಕಷ್ಟ-ಸುಖಗಳನ್ನು ತಿಂಡಿಯಂತೆ ಹಂಚಿಕೊಳ್ಳುತ್ತಿದ್ದ ಬಂಕರಿಗರು, ಹಡಗು ಇಳಿಯುವ ಹೊತ್ತಿಗೆ ಅಗಲಲಾಗದ ನೆಂಟರಾಗಿಬಿಡುತ್ತಿದ್ದರು. ನಾವು ಅನೇಕ ಗೆಳೆಯರನ್ನು ಸಂಪಾದಿಸಿದ್ದು ಇಲ್ಲೇ.

ಕ್ಯಾಬಿನ್ನುಗಳಲ್ಲಿ ಸುಖವಿರಲಿಲ್ಲ ಎಂತಲ್ಲ. ಅವು ಅನುಭವ [illegible] ಬೇಕಾದರೆ ಒದುವ. [illegible]

[illegible]

# ಯೋಗ ಪ್ರವೇಶ ೪

**ಜಿ. ರಾಮಕೃಷ್ಣ**

ಯೋಗವನ್ನು ಅಭ್ಯಾಸ ಮಾಡುವವರ ತಪ್ಪಿನಿಂದಾಗಿ ಯೋಗಶಾಸ್ತ್ರದ ಫಲವಂತಿಕೆಯ ಬಗ್ಗೆ ಅನುಮಾನ ಬರಬಹುದು; ಅದು ಆ ಶಾಸ್ತ್ರಕ್ಕೆ ಅಪಚಾರವಾಗುತ್ತದೆ. ಆದ್ದರಿಂದ ಅಭ್ಯಾಸಿಯು ಎಚ್ಚರ ವಹಿಸುವುದು ಒಳ್ಳೆಯದೆಂದು ಕುವಲಯಾನಂದರು ಗಾಂಧೀಜಿಗೆ ತಿಳಿಸಿದಾಗ ಅವರ ಇಂಗಿತವೇನಾಗಿತ್ತು ? ಶಾಸ್ತ್ರಗ್ರಂಥಗಳಲ್ಲಿ ಉಲ್ಲೇಖವಾಗಿರುವುದೆಲ್ಲಾ ಸರ್ವಥಾ ಸತ್ಯ, ಅದನ್ನು ಪ್ರಶ್ನಿಸಬಾರದು, ಅಲ್ಲಿ ಹೇಳಿರುವ ಫಲ ದೊರೆಯದಿದ್ದರೆ ಅದು ಅಭ್ಯಾಸದ ನ್ಯೂನತೆಯಿಂದಲೇ ಹೊರತು ಗ್ರಂಥದಲ್ಲಿ ಹೇಳಿರುವುದರ ನ್ಯೂನತೆಯಿಂದಲ್ಲ, ಇತ್ಯಾದಿ ಅಭಿಪ್ರಾಯಗಳು ಅವರಲ್ಲಿತ್ತೇ ? ಹಾಗಿದ್ದರೆ ಸಂಶೋಧನೆ, ವಿಶ್ಲೇಷಣೆ, ಇವೆಲ್ಲಾ ಅಗತ್ಯವಾಗುವುದಿಲ್ಲ, ಆದರೆ ಕುವಲಯಾನಂದರು ಪ್ರಶ್ನಿಸುವ ಹಾಗೂ ಪ್ರಾಯೋಗಿಕ ವಿಜ್ಞಾನದ ಪದ್ಧತಿಯನ್ನು ಅನುಸರಿಸುವ ಪಂಥಕ್ಕೆ ಸೇರಿದವರು. ಶಾಸ್ತ್ರಗ್ರಂಥಗಳನ್ನು ವಿಚಕ್ಷಣೆಯಿಂದ ಅಭ್ಯಸಿಸಿ ಅಲ್ಲಿ ಉಕ್ತವಾಗಿರುವುದು ಎಷ್ಟರಮಟ್ಟಿಗೆ ಮಾನ್ಯ ಎಂಬುದನ್ನು ವಸ್ತುನಿಷ್ಠವಾಗಿ ತಿಳಿಯುವ ಆಶಯ ಅವರದಾಗಿತ್ತು. ಜೊತೆಗೆ, ಶರೀರಶಾಸ್ತ್ರದ ಆಧಾರದ ಮೇಲೆ ಯೋಗಾಭ್ಯಾಸವು ಯಾವ ಅಂಗಾಂಗಗಳಿಗೆ ಹೇಗೆ ಪ್ರಭಾವ ಉಂಟುಮಾಡುತ್ತದೆ ಎಂಬುದನ್ನು ತಿಳಿಯುವ ಉದ್ದೇಶವೂ ಅವರದಾಗಿತ್ತು.

ಅಂದರೆ ಶಾಸ್ತ್ರವನ್ನು ಕಣ್ಣುಮುಚ್ಚಿ ನಂಬುವ ಪ್ರವೃತ್ತಿಯನ್ನು ಅವರು ಗಾಂಧೀಜಿಗೆ ಬೋಧಿಸ ಹೊರಡಲಿಲ್ಲ. ಸತ್ಯಾಸತ್ಯ ವಿವೇಚನೆಗೆ ಅವರು ಆದ್ಯತೆ ನೀಡಿದ್ದು. ಈ ಬಗ್ಗೆ ಒಂದು ಉದಾಹರಣೆಯನ್ನು ನೋಡೋಣ: ಪತಂಜಲಿಯ ಯೋಗಸೂತ್ರದ ಮೂರನೆಯ ಪಾದವು (ಅಧ್ಯಾಯ) ಅನೇಕ ಸಿದ್ಧಿಗಳನ್ನು ಪಟ್ಟಿ ಮಾಡುತ್ತದೆ. ಆ ಸಿದ್ಧಿಗಳು ಸಂಯಮದಿಂದ ಮೂಡಿಬರುತ್ತವೆ. ಸಂಯಮ ವೆಂದರೆ ಧಾರಣ-ಧ್ಯಾನ-ಸಮಾಧಿಗಳ ಯಶಸ್ವಿ ಅಭ್ಯಾಸ. ಸಂಯಮಕ್ಕೆ ಆಯ್ದುಕೊಳ್ಳುವ ವಸ್ತುವನ್ನಾಧರಿಸಿ ಸಿದ್ಧಿಯು ಬೇರೆ ಬೇರೆ ಆಗಿರುತ್ತದೆಯೆಂದು ಹೇಳಲಾಗಿದೆ. ಹೊಟ್ಟೆಯ ಮೇಲೆ ಸಂಯಮ ಸಾಧಿಸಿದರೆ ಹಸಿವು- ಬಾಯಾರಿಕೆಗಳು ಸದಾಕಾಲಕ್ಕೂ ದೂರವಾಗುತ್ತವೆ; ಸೂರ್ಯನ ಮೇಲೆ ಸಂಯಮ ಸಾಧಿಸಿದರೆ ಇಡೀ ವಿಶ್ವದ ಜ್ಞಾನ ದೊರೆಯುತ್ತದೆ, ಇತ್ಯಾದಿ.

ಹದಿನಾರನೆಯ ಶತಮಾನದಲ್ಲಿ ಶಾಂತರಸ ಎಂಬೊಬ್ಬನು ಮಧ್ಯಕಾಲೀನ ಕನ್ನಡದಲ್ಲಿ ''ಯೋಗ ರತ್ನಾಕರ'' ಎಂಬ ಗ್ರಂಥವನ್ನು ರಚಿಸಿದ್ದಾನೆ. ಅದರ ಷಷ್ಠಾಂಗವು (ಆರನೆಯ ಅಧ್ಯಾಯ) ಧ್ಯಾನವನ್ನು ಕುರಿತಾದದ್ದು. ಧ್ಯಾನದಿಂದ ದೊರಕುತ್ತವೆನ್ನಲಾದ ಅಪೂರ್ವ ಫಲಗಳ ಸುದೀರ್ಘ ವಿವರಣೆ ಇಲ್ಲಿದೆ. ಅಂತಹ ಒಂದೆ ಎರಡು ವಿವರಗಳನ್ನು ಗಮನಿಸೋಣ:

[illegible]

[illegible]

*ಪರಿಹರಿಕುವೆಂದಡದರಿಂ*
*ಪರಮಾರ್ಥಂ ಧ್ಯಾನದಿಂದ ತೀರದುದುಂಟೇ*

(೬.೨೮)

(ನವಿಲಿನ ಮೇಲೆ ಏಕಾಗ್ರತಾ ಧ್ಯಾನವನ್ನು ಮಾಡಿದರೆ ಎಲ್ಲ ವಿಷಗಳ ಪರಿಹಾರವೂ ಸಾಧ್ಯ; ಧ್ಯಾನದಿಂದ ಸಾಧಿಸಲಾಗದ್ದು ಏನಿದೆ ?)

ಶಾಸ್ತ್ರಗ್ರಂಥಗಳಲ್ಲಿ ಇಂತಹ ಆಶ್ವಾಸನೆಗಳನ್ನು ನೀಡಿದರೆ ಅವನ್ನು ನಾವು ಹೇಗೆ ಸ್ವೀಕರಿಸಬೇಕು ? ಎಂತಹ ಅಮೋಘ ಸಂಯಮವನ್ನು ಸಾಧಿಸಿಕೊಂಡರೂ ಅದರಿಂದಲೇ 'ಭುವನಜ್ಞಾನ' ಲಭಿ ಸುವ ಸಾಧ್ಯತೆ ಸೊನ್ನೆ. ಆದ್ದರಿಂದ ನಾವು ಇಡೀ ಗ್ರಂಥವನ್ನು ತಿರಸ್ಕರಿಸಬಹುದೆ ? ಅಲ್ಲಿ ಹೇಳಲಾಗಿರುವ ಹತ್ತಾರು ಅಭ್ಯಾಸಗಳ ಪ್ರಾಯೋಗಿಕ ಅಧ್ಯಯನದಿಂದ ಅವುಗಳ



ಮಹತ್ವವನ್ನು ತಿಳಿಯಲಾಗುವುದಿಲ್ಲವೆ ?

ಅಂದರೆ, ಈ ಗ್ರಂಥಗಳನ್ನು ಇಡಿಯಾಗಿ, ಕುರುಡಾಗಿ, ಸ್ವೀಕರಿಸಲು ಬರುವುದಿಲ್ಲ. ಅಂತೆಯೇ ಸಾರಾಸಗಟಾಗಿ ನಿರಾಕರಿಸಲು ಸಹ ಆಗುವುದಿಲ್ಲ. ನಮಗಿರುವುದು ಮಧ್ಯಮ ಮಾರ್ಗವೊಂದೇ. ಅಂದರೆ, ರುಜುವಾತಾದುದನ್ನು ಅಂಗೀಕರಿಸಿ ಅಭ್ಯಾಸ ಮಾಡುವುದು, ಹಾಗಿಲ್ಲದುದನ್ನು ಕೈಬಿಡುವುದು.

ಹಾಗಿದ್ದರೆ ಗ್ರಂಥದಲ್ಲಿ ತ್ಯಾಜ್ಯವಾಗುವಂತಹ ಅಂಶವನ್ನೇಕೆ ಸೇರಿಸಲಾಗಿದೆ ? ಇದಕ್ಕೆ ಬೇರೆ ಬೇರೆ ಉತ್ತರಗಳು ಸಾಧ್ಯ. ಒಂದಂತೂ ಹೀಗಿದೆ: ಅದಕ್ಕೆ 'ಅರ್ಥವಾದ' ಎಂಬ ಹೆಸರನ್ನು ಕೊಡಬಹುದು. (ಅರ್ಥವಾದವೆಂಬುದು ಪೂರ್ವಮೀಮಾಂಸೆಯ ಶಿಸ್ತಿನಲ್ಲಿ ಅಧಿಕವಾಗಿ ಬಳಕೆಯಾಗುತ್ತದೆ. ಯೋಗ ಶಾಸ್ತ್ರದಲ್ಲಿ ಅದರ ಮಾತು ಬರುವುದಿಲ್ಲ. ಅರ್ಥವಾದಿಕೆಗೆ ಸಾಮಗ್ರಿಯಾಗಿ ನಾವದನ್ನು ಹೆಸರಿಸಬಹುದು. ಅಷ್ಟೆ). ಯಾವುದಾದರೂ ಕ್ರಿಯೆಯನ್ನು ಶ್ಲಾಘಿಸಿ ಅದರ ವಿಶಿಷ್ಟ ಪ್ರಯೋಜನವನ್ನು ಒತ್ತಿಹೇಳುವ ಸಂದರ್ಭವಿದ್ದರೆ ಸ್ವಲ್ಪ ಅತಿಶಯೋಕ್ತಿ ಸಾಧ್ಯವಲ್ಲವೆ ? ಉದಾಹರಣೆಗೆ, ಯಜ್ಞದಿಂದ ಎಂತೆಂಥವೋ ಫಲಗಳು ಲಭಿಸುತ್ತವಾದ್ದರಿಂದ ನೀನು ಯಜ್ಞವನ್ನು ಮಾಡು, ಎಂದು ಹೇಳಬೇಕಾಗಿದೆ ಎಂದಿಟ್ಟುಕೊಳ್ಳಿ. ಆಗ ''ಹಾವುಗಳು ಯಜ್ಞ ಮಾಡಿದವು'' ಎಂದು ಹೇಳಬಹುದು. ಅಂದರೇನು ? ಹಾವುಗಳೇ ಯಜ್ಞ ಮಾಡಿರುವಾಗ ಮಾನವನಾದ ನೀನು ಮಾಡಬೇಡವೇ, ಎಂದರ್ಥ. (ನಿಜಕ್ಕೂ ಯಜ್ಞದಿಂದ ಏನು ಲಭಿಸುತ್ತದೆ ಎನ್ನುವುದು ಬೇರೆಯೇ ಒಂದು ಪ್ರಶ್ನೆ. ಲಘುವಾಗಿ ಹೇಳುವುದಾದರೆ, ಯಜಮಾನನ ಭರ್ಜರಿ ದರ್ಪ ಪ್ರದರ್ಶನ ಮತ್ತು ಪುರೋಹಿತನ ದಕ್ಷಿಣೆಯ ಗಳಿಕೆ, ಇವೇ ಅಲ್ಲಿರುವುದು. ಆದರೆ ಆ ಪ್ರಸಂಗ ನಮಗೆ ಸದ್ಯಕ್ಕೆ ಅಪ್ರಕೃತ).

ಅರ್ಥವಾದದ ದೃಷ್ಟಿಯಿಂದ ನೋಡಿದರೆ ಕೆಲವು ಅಭ್ಯಾಸಗಳನ್ನು ಒತ್ತುಕೊಟ್ಟು ಪ್ರತಿಪಾದಿಸುವುದು ಶಾಸ್ತ್ರಗ್ರಂಥಗಳ ಉದ್ದೇಶ. ಅಲ್ಲಿ ಉಲ್ಲೇಖವಾಗಿರುವುದನ್ನೆಲ್ಲಾ ಅಕ್ಷರಶಃ ನಂಬಿ, ಒಪ್ಪಿ, ಅಭ್ಯಾಸ ಮಾಡಬೇಕೆಂದೇನೂ ಇಲ್ಲ. ಕುವಲಯಾನಂದರು ಅನುಮೋದಿಸಿದ ಮಾರ್ಗ ಅದೇ ಆಗಿತ್ತು. ಒಂದು ಚಿಕ್ಕ ನಿದರ್ಶನದಿಂದ ಇದನ್ನು ಪಕ್ವಗೊಳಿಸಿಕೊಳ್ಳೋಣ:

ಸ್ವಾತ್ಮಾರಾಮ ಸೂರಿಯ ''ಹಠಯೋಗ ಪ್ರದೀಪಿಕೆ''ಯಲ್ಲಿ ಬರುವ ಒಂದು ಮಾತು ಹೀಗಿದೆ: ''ಎವೆಯಿಕ್ಕದೆ ಯಾವುದಾದರೂ ಸೂಕ್ಷ್ಮ ವಸ್ತುವನ್ನು ಬಹುಕಾಲ ನೋಡುತ್ತಿದ್ದರೆ ಕಣ್ಣಲ್ಲಿ ನೀರು ಬರುತ್ತದೆ. ಅದನ್ನು ತ್ರಾಟಕವೆನ್ನುತ್ತಾರೆ. ಅದರಿಂದ ಕಣ್ಣಿನ ರೋಗಗಳು ಪರಿಹಾರವಾಗುತ್ತವೆ, ಆಲಸ್ಯವು ಮುಚ್ಚಿಹೋಗುತ್ತದೆ. ಚಿನ್ನದ ಪೆಟ್ಟಿಗೆಯಂತೆ ಇದನ್ನು (ಅಂದರೆ, ತ್ರಾಟಕದ ಅಭ್ಯಾಸ ಹಾಗೂ ಫಲಗಳನ್ನು) ಗೋಪ್ಯವಾಗಿಡಬೇಕು'' (೨.೩೧-೩೨). ತ್ರಾಟಕದಿಂದ ಕಣ್ಣಿನ ಎಲ್ಲ ರೋಗಗಳೂ ಪರಿಹಾರವಾಗುತ್ತವೆಯೋ ಇಲ್ಲವೋ ಎಂಬುದು ಕೇವಲ ಗ್ರಂಥಸ್ಥವಾಗಿರಬೇಕಾದ ವಿಷಯವಲ್ಲ. ಯಾರೇ ಆಗಲಿ ಸೂಕ್ಷ್ಮವಸ್ತುವನ್ನು ಎವೆಯಿಕ್ಕಿ ನೋಡುವ ಅಭ್ಯಾಸ ಮಾಡಲು ಸಾಧ್ಯ. ಅದರಿಂದ ನಿರ್ದೇಶಿತ ಫಲ ಬರುತ್ತದೋ ಇಲ್ಲವೋ ಎಂಬುದು ತಾನೇ ತಾನಾಗಿ ತಿಳಿಯುತ್ತದೆ. ಫಲ ನೀಡುತ್ತದೆಂದಾದರೆ, ಏಕೆ ನೀಡುತ್ತದೆಂಬ ಪ್ರಶ್ನೆಯೂ ಬರುತ್ತದೆ. ಅದಕ್ಕೆ ಶರೀರದ ರಚನೆ, ಕ್ರಿಯಾವಿಧಾನ, ನರ-ಸ್ನಾಯು ಮುಂತಾದುವುಗಳ ಸ್ವಭಾವ, ಇವನ್ನೆಲ್ಲಾ ತಿಳಿಯಬೇಕಾಗುತ್ತದೆ. ತ್ರಾಟಕದ ಪ್ರಯೋಜನವನ್ನು ಕುರಿತಂತೆ ಅನೇಕ ವೈಜ್ಞಾನಿಕ ಪ್ರಯೋಗಗಳು ನಡೆದಿವೆ ಮತ್ತು ಅದರ ಉಪಯುಕ್ತತೆ ಸಾಬೀತಾಗಿದೆ. ಆಲಸ್ಯವೆಲ್ಲಾ ಮುಚ್ಚಿಹೋಗದಿರಬಹುದಾದರೂ ಆಲಸಿಕೆಯ ಸೂಚನೆ, ಅನುಭವ ಕಡಿಮೆಯಾಗುವುದಂತೂ ಶತಸಿದ್ಧ. ಅಮೆರಿಕಾದಲ್ಲೋ

ಯೂರೋಪಿನಲ್ಲೋ ಅದನ್ನು ಪ್ರಾಯೋಗಿಕವಾಗಿ ಪರೀಕ್ಷಿಸಿ ಅದಕ್ಕೆ ಮೆಚ್ಚುಗೆ ವ್ಯಕ್ತಪಡಿಸಿದರೆ ಅದರ ಗಟ್ಟಿತನ ನಿರ್ಧಾರವಾಗುತ್ತದೆಂಬ ಮೋಹ ಬೇಕಿಲ್ಲ. ಪ್ರಯೋಗ ಎಲ್ಲಿ ನಡೆದರೂ ಅಷ್ಟೆ; ಪ್ರಯೋಗದ ಪದ್ಧತಿಯಲ್ಲಿ ಲೋಪದೋಷಗಳಿರಬಾರದೆಂಬುದೊಂದೇ ಮುಖ್ಯ. ಪ್ರಯೋಗಶೀಲರು ಎಲ್ಲ ಅಭ್ಯಾಸಗಳ ಸತ್ಯಾಸತ್ಯತೆಯನ್ನು ವೈಜ್ಞಾನಿಕ ಪ್ರಯೋಗ ರೀತ್ಯಾ ಸಿದ್ಧಪಡಿಸಿ ಲೋಕದ ಮುಂದೆ ಫಲಶ್ರುತಿಯನ್ನು ಮಂಡಿಸಲು ಯತ್ನಿಸಬಹುದು.

ಆದ್ದರಿಂದ 'ಯೋಗ ಪ್ರವೇಶ'ವನ್ನೇ ಇನ್ನೂ ಬಲವಾಗಿ ಲಂಬಿಸದೆ ಅಭ್ಯಾಸಗಳತ್ತ ಹೊರಳೋಣ. ಅದಕ್ಕೆ ಮುಂಚೆ 'ಪ್ರವೇಶ'ದ ಇನ್ನೊಂದು ಕಂತಿನಲ್ಲಿ ಧ್ಯಾನದ ಬಗೆಗಿನ ತಿಳಿವಳಿಕೆಯನ್ನು ಇನ್ನಷ್ಟು ವಿಸ್ತರಿಸಿಕೊಳ್ಳಲು ಯತ್ನಿಸೋಣ.

ಯೋಗಾಭ್ಯಾಸಕ್ಕೆ ಪೂರ್ವಸಿದ್ಧತೆಗಳಲ್ಲಿ ಶಾಂತರಸನು ಉಲ್ಲೇಖಿಸುವ ಗುಣಗಳಲ್ಲಿ ಒಂದು ಹೀಗಿದೆ:

ಸಮತಾಭಾವನೆಯಿಂದಂ
ಸಮನಿಸುಗುಂ ಮುನಿಗೆ ಯೋಗಮಕ್ಕುಮಮೋಘಂ
ಸಮತೆಯೆ ಮುಖ್ಯಮದಕ್ಕುಂ
ಸಮತೆಯೊಳಂ ಸರ್ವಗುಣಮವೆಲ್ಲಂ ತೋರ್ಕುಂ

(೧.೪೫)

**ಅಂಡಮಾನ್....** *(೬೧ನೇ ಪುಟದಿಂದ)*

ಹೊತ್ತು ಬಂದಾಗ, ಮೈಕಿನಲ್ಲಿ 'ಡೈನಿಂಗ್ ಹಾಲಿಗೆ ಬರಬೇಕೆಂದು' ನಯವಾದ ದನಿಯಲ್ಲಿ ಕರೆ ಬರುತ್ತಿತ್ತು. ಬರುವುದು ತಡವಾದರೆ ಒಬ್ಬ ಸೇವಕ ಮೃದುವಾಗಿ ಬಾಗಿಲುತಟ್ಟಿ, ಎಬ್ಬಿಸಿ, ಬರಬೇಕೆಂದು ಜ್ಞಾಪಿಸುತ್ತಿದ್ದನು. ಡೈನಿಂಗ್ ಹಾಲಿನಲ್ಲಂತೂ ಪ್ರತಿಷ್ಠಿತ ಹೋಟೆಲುಗಳಲ್ಲಿರುವಂತೆ ಸಭ್ಯನಡತೆಯ ವೈಟರುಗಳು, ಬಿಳೀ ಬಟ್ಟೆ ಹಾಕಿ, ಟೈ ಕಟ್ಟಿಕೊಂಡು ರುಚಿರುಚಿಯಾದ ಅಡಿಗೆಗಳನ್ನು ಬಡಿಸುತ್ತಿದ್ದರು. ಪಕ್ಕದಲ್ಲಿ ಹಣ್ಣು ತುಂಬಿದ ತಟ್ಟೆಯಿರುತ್ತಿತ್ತು. ಅದರಲ್ಲೂ ನಾವು ವಾಪಾಸುಬಂದ 'ಹರ್ಷವರ್ಧನ' ಎಂಬ ಹಡಗು, ತನ್ನ ರುಚಿಕರ ಅಡಿಗೆ ಹಾಗೂ ಸೇವೆಗಾಗಿ ಖ್ಯಾತವಾದುದು. ಈ ಸುಖವನ್ನು ನಾವು ಗತ್ತಿನಿಂದಲೇ ಅನುಭವಿಸಿದೆವು. ಆದರೆ ಕ್ಯಾಬಿನ್ನಿನ ದೇವತೆಗಳಾಗಿ ಬಡ್ತಿಪಡೆದ ಕಾರಣಕ್ಕಾಗಿಯೋ ಏನೋ, ಬರುವಾಗ ಬಂಕರಿನ ಜತೆ ಆತ್ಮೀಯ ಸಂಬಂಧ ಬೆಳೆಸಿಕೊಳ್ಳಲು ಸಾಧ್ಯವಾಗಲೇ ಇಲ್ಲ. ಇದು ನಾವು ತೆತ್ತ ಬೆಲೆಯಾಗಿತ್ತು.

ಹಡಗೆಂದರೆ, ಹಕ್ಕಿಗಳಂತೆ ಹೊಸನಾಡುಗಳನ್ನು ನೋಡಹೊರಟ ಕುತೂಹಲಿಗಳೂ, ಸಾಹಸಿಗರೂ ಆದ ಪ್ರವಾಸಿಗರಿಂದ ತುಂಬಿರುತ್ತದೆ ಎಂಬ ನಮ್ಮ ಭಾವನೆ ಬಂದರಿನಲ್ಲೇ ಸುಳ್ಳಾಗಿತ್ತು. ರಜೆ ಮುಗಿಸಿಕೊಂಡು ಹಿಂತಿರುಗುತ್ತಿದ್ದ ನೌಕರರು, ಸೈನಿಕರು ಇದ್ದುದಾದರೂ ಅರ್ಥವಾಗುತ್ತಿತ್ತು. ಆದರೆ ಇಷ್ಟೊಂದು ಜನ ಭಾರತದ ಮಹಾ ನೆಲವನ್ನು (Mainland) ಬಿಟ್ಟು, ಕೈದಿಗಳನ್ನು ಕೂಡಿಹಾಕುತ್ತಿದ್ದ ಕುಖ್ಯಾತ ಜೈಲುದ್ವೀಪಗಳಿಗೆ ಇಷ್ಟೊಂದು ಯಾಕೆ ಹೀಗೆ ನುಗ್ಗಾಡಿಕೊಂಡು ಹೋಗುತ್ತಿದ್ದಾರೆ ಎಂಬುದು ಅರ್ಥವಾಗಿರಲಿಲ್ಲ. ಈಗ ನೋಡಿದರೆ ಜೀವನದ ಸಾಹಸಕ್ಕೆಳಸಿ, ಬಡತನ - ನಿರುದ್ಯೋಗ - ಅಪಮಾನಗಳಿಗೆ ಜೀವರೋಸಿ, ಹೊಸಬದುಕಿನ ಕನಸನ್ನು ಉಡಿಯಲ್ಲಿ ಕಟ್ಟಿಕೊಂಡು ಜನ ಅಂಡಮಾನಿಗೆ ಹೊರಟಿದ್ದರು. ಅಂಡಮಾನಿಗೆ ಕಲಕತ್ತಾ ಹಾಗೂ ವಿಶಾಖಪಟ್ಟಣಗಳಿಂದ ಬರುವ ಹಡಗುಗಳದೂ ಇದೇ ಕಥೆ. ಭೂಪಟಗಳಲ್ಲಿ ಕ್ಷುದ್ರವಾಗಿ ಕಾಣುವ ಈ ದ್ವೀಪಗಳು, ಮಹಾನೆಲದ ಎಷ್ಟು ಜನರಿಗೆ ಹೇಗೇಗೆ ನೆಲೆಯೊದಗಿಸಿವೆ ? ತಿಳಿಯುವ ತವಕವಾಯಿತು. ಅಂಡಮಾನಿನ ಮೇಲೆ ನಮಗೆ ಹೋಗುವ ಮೊದಲೇ ಆದರ ಮೂಡತೊಡಗಿತು. ಕಬ್ಬಿಣದ ಈ ದೈತ್ಯಗಾತ್ರದ ಹಡಗು, ಲಕ್ಷಾಂತರ ಟನ್ನುಗಳ ಭಾರವನ್ನಷ್ಟೇ ಹೊತ್ತುಕೊಂಡಿಲ್ಲ, ಸಾವಿರಾರು ಜೀವಗಳ ಸಂಕಟ - ತಳಮಳಗಳನ್ನು, ಹತ್ತು ಹಡಗು ತುಂಬುವಷ್ಟಿದ್ದ ಅವರ ಆಸೆಗಳನ್ನು ಹೊತ್ತುಕೊಂಡು ಸಾಗುತ್ತಿದೆ ಎನಿಸಿತು. ಈ ವಿರಾಟ್ ದರ್ಶನವನ್ನು ಮಾಡಿಸಿದ್ದೇ ಬಂಕರಿನ 'ನರಕ' ವಾಸಿಗಳು. ಅಂಡಮಾನನ್ನು ನೋಡಲು ನಮಗೊಂದು ಹೊಸ ದೃಷ್ಟಿಕೋನವನ್ನೇ ಹಡಗು ದಯಪಾಲಿಸಿತು.

**ಡಾ॥ ರಹಮತ್ ತರೀಕೆರೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩೨೭೬

# ಆದರ್ಶ ಮತ್ತು ಸೋಗಲಾಡಿತನ

ಕಾಂಗ್ರೆಸ್ ಪಕ್ಷದ ಅಧಿವೇಶನಗಳ ಭಾಷಣ, ನಿರ್ಣಯ, ಅವರ ತಾತ್ವಿಕ ಜಗಳ ಮುಂತಾದ್ದು ತಮಾಷೆಯಾಗಿರುತ್ತವೆ; ಆದರೆ ಎಲ್ಲಕ್ಕೂ ಹೆಚ್ಚು ತಮಾಷೆಯಾಗಿರುವುದೆಂದರೆ ಆ ಸಭೆಗಳಲ್ಲಿ ಪಕ್ಷದ ನಾಯಕರುಗಳು, ತಮ್ಮ ಅಡ್ಡಾದಿಡ್ಡಿ ದೇಹಗಳನ್ನು ಕುಂಡೆಗಳ ಮೇಲೆ ಹೇರಿಕೊಂಡು, ದಿಂಬುಗಳಿಗೆ ಒರಗಿ ಕೂರುವ ದೃಶ್ಯ. ಧಡೂತಿ ದೇಹದವರು ಮಾತ್ರವಲ್ಲ, ಯಾರಿಗಾದರೂ, ಹಾಗೆ ಹೆಚ್ಚು ಹೊತ್ತು ಕೂತರೆ ಮಂಡಿಗಳು ಜೋಮು ಹಿಡಿದುಕೊಳ್ಳುತ್ತವೆ. ಈ ನಾಯಕರು ಎಲ್ಲರ ಹಾಗೆ ಕುರ್ಚಿಗಳ ಮೇಲೆ ಕೂತು ಯಾಕೆ ತಮ್ಮ ಸಭೆಗಳನ್ನು ನಡೆಸಬಾರದು ? ಉಳಿದಂತೆ ತಮ್ಮ ಭೋಗಜೀವನಕ್ಕೆ ಹೆಸರಾದ ಕ್ರಾಂಗ್ರೆಸ್ಸಿಗರು ಪಕ್ಷದ ಸಭೆಗಳಲ್ಲಿ ಮಾತ್ರ ಈ ಅನವಶ್ಯಕ ದೇಹದಂಡನೆಗೆ ಒಳಪಡುತ್ತಾರೆ. ಬಹುಶಃ ಗಾಂಧೀಜಿ ಪ್ರತಿಪಾದಿಸಿದ ಸರಳ ಜೀವನದ ಮೌಲ್ಯಕ್ಕೆ ಕಾಂಗ್ರೆಸ್ಸಿಗರು ಗೌರವ ತೋರಿಸುವ ರೀತಿ ಅದಾಗಿರಬೇಕು ! ಅಥವಾ ಕುರ್ಚಿಯಲ್ಲಿ ಕೂಡುವುದು ಪಾಶ್ಚಿಮಾತ್ಯ, ಜಮಖಾನೆಯ ಮೇಲೆ ಅಂಡೂರಿ ಕೂರುವುದು ಭಾರತೀಯ ಎಂದು ಇವರು ಭಾವಿಸಿದ್ದಾರೋ ?

ಗಾಂಧೀಜಿಯವರಿಂದಾಗಿ ಚಾಲ್ತಿಗೆ ಬಂದ ಇನ್ನೂ ಅನೇಕ ಆಚರಣೆಗಳು ಈಗಲೂ ಇವೆ. ಸಾರ್ವಜನಿಕ ಭಾಷಣಗಳಲ್ಲಿ ಸರಳ ಜೀವನ, ಗುಡಿ ಕೈಗಾರಿಕೆ, ಅಹಿಂಸೆ, ಮುಂತಾದವನ್ನು ಪ್ರತಿಪಾದಿಸುವುದು, ಅಧಿಕಾರದ ಬಗ್ಗೆ ವೈರಾಗ್ಯ ನಟಿಸುವುದು, ಇವು ಈಗಲೂ ಮುಂದುವರಿದಿವೆ. ಆದರೆ ಚರಖಾ ತಿರುಗಿಸುತ್ತ ಫೋಟೋ ಹೊಡೆಸಿಕೊಳ್ಳುವುದು ಮತ್ತು ಖಾದಿ ಧರಿಸುವುದು ಈಗ ಕಡಿಮೆಯಾಗಿದೆ. ವಾನಪ್ರಸ್ಥಕ್ಕೆ ಸಂದಿರುವ ಕೆಲವು ರಾಜಕಾರಣಿಗಳು ಮತ್ತು ಸರ್ವೋದಯದ ಪಳೆಯುಳಿಕೆಗಳು ಮಾತ್ರ ಅದನ್ನು ಮುಂದುವರಿಸಿವೆ. ಹೀಗೆ ಹೇಳುವುದು ಸಿನಿಕತನವೆಂದು ನಿಮಗೆ ಅನ್ನಿಸಬಹುದು. ಆದರೆ ಸ್ವತಂತ್ರ ಭಾರತದ ಈ 50 ವರ್ಷಗಳ ಸಾರ್ವಜನಿಕ ಜೀವನದಲ್ಲಿ ಗಾಂಧೀಜಿಯವರದ್ದು ಎಂದು ಗುರುತಿಸಬಹುದಾದದ್ದು ಏನಿದೆ ಎಂದು ಒಂದು ಕ್ಷಣ ಯೋಚಿಸಿ. ನಮ್ಮ ನಗರಗಳ ನಾಲ್ಕು ರಸ್ತೆಗಳು ಕೂಡುವಲ್ಲಿ ಗಾಂಧೀಜಿ ಪ್ರತಿಮೆ, ಅವರು ಹುಟ್ಟಿದ ಮತ್ತು ದೇಹಾಂತ್ಯವಾದ ದಿನಗಳಂದು ರಾಷ್ಟ್ರಾಧ್ಯಕ್ಷರಾದಿಯಾಗಿ ಎಲ್ಲ ಗಣ್ಯರು ಆಡುವ ಮಾಮೂಲಿ ಮಾತುಗಳು ಮತ್ತು ಈ ಹಾಸ್ಯಾಸ್ಪದ ಆಚರಣೆಗಳನ್ನು ಬಿಟ್ಟು ಬೇರೆ ಏನಿದೆ ?

ಆದರೆ ಒಬ್ಬ ನಾಯಕನ ಬ್ರದುಕನ್ನು ಅವನ ಹಿಂಬಾಲಕರ ವರ್ತನೆಯ ಮೇಲೆ ಅಳೆಯುವುದು ಎಷ್ಟರ ಮಟ್ಟಿಗೆ ಸರಿ ? ಯಾವ ಆದರ್ಶವೂ ಅದರ ಪರಿಶುದ್ಧ ರೂಪದಲ್ಲಿ ಆಚರಣೆಗೆ ಬರುವುದು ಅಸಾಧ್ಯದ ಮಾತು. ಬದುಕು ಯಾವ ಕಾಲದಲ್ಲೂ, ಯಾವ ದೇಶದಲ್ಲೂ ಅಷ್ಟು ಪರಿಶುದ್ಧವಾಗಿರುವುದಿಲ್ಲ. ಗಾಂಧೀಜಿಯ ಮಾತು ಬಿಡಿ, ಜಗತ್ತಿನ ದೊಡ್ಡ ಧರ್ಮಗಳ ಅನುಯಾಯಿಗಳೇ ತಮ್ಮ ಧರ್ಮದ ಆದರ್ಶಗಳನ್ನು ಪಾಲಿಸುವುದಿಲ್ಲ. ಕ್ರಿಸ್ತನ ಕರುಣೆ ಮತ್ತು ದಯೆಗಳನ್ನು ಕ್ರಿಶ್ಚಿಯನ್ನರು ಪಾಲಿಸಿದ್ದರೆ ಯುರೋಪಿನ ಯಾವ ಯುದ್ಧವೂ ನಡೆಯುತ್ತಿರಲಿಲ್ಲ. ಕುರಾನ್ ಎತ್ತಿಹಿಡಿದ ಸರಳತೆ ಮತ್ತು ಸಮಾನತೆಗಳನ್ನು ಮುಸಲ್ಮಾನರು ಪಾಲಿಸುವುದಿಲ್ಲ ಎನ್ನುವುದಕ್ಕೆ ಈಗಿನ ಅರಬ್ ದೇಶಗಳೇ ಸಾಕ್ಷಿ. ಬೌದ್ಧ ಜೈನ ಧರ್ಮಗಳು ಬೋಧಿಸುವ ಅಹಿಂಸೆ, ಆ ಧರ್ಮಕ್ಕೆ ಸೇರಿದ ರಾಜರುಗಳು ಸೈನ್ಯವನ್ನು ಇಟ್ಟುಕೊಳ್ಳಲು ಅಡ್ಡಿ ಬರಲಿಲ್ಲ. ಇವತ್ತಿನ ಆಗ್ನೇಯ ಏಷ್ಯದ ದೇಶಗಳು ಮತ್ತು ಸಿಲೋನ್, ಬರ್ಮ ಮುಂತಾದೆಡೆ ನಡೆಯುತ್ತಿರುವ ಹಿಂಸೆಗೆ ಆ ದೇಶಗಳ ಬೌದ್ಧ ಧರ್ಮ ತಡೆಯೊಡ್ಡಿದ್ದೂ ಕಾಣಿಸುವುದಿಲ್ಲ. ಕರ್ನಾಟಕದಲ್ಲಿ ಬಸವಣ್ಣನ ಅನುಯಾಯಿಗಳು ಬಸವಣ್ಣನ ಎಲ್ಲ ತತ್ವಗಳನ್ನೂ ಕೈಬಿಟ್ಟಿರುವ ಉದಾಹರಣೆ ನಮ್ಮ ಕಣ್ಣೆದುರಿಗೇ ಇದೆ. ಅನುಯಾಯಿಗಳ ವರ್ತನೆಯಿಂದ ಈ ಧರ್ಮಗಳ ಸಂಸ್ಥಾಪಕರ ವ್ಯಕ್ತಿತ್ವಕ್ಕೆ ಊನ ಉಂಟಾಗುತ್ತದೋ ? ಇವರಿಗೆ ಸ್ವಂತದ ಪ್ರಭೆ ಎಂಬುದೇ ಇಲ್ಲವೋ ? ನಾಯಕನ ವ್ಯಕ್ತಿತ್ವ, ಅವನ ಹಿಂಬಾಲಕರ ಬದುಕಿನಲ್ಲಿ ಎಷ್ಟು ಪ್ರತಿಫಲಿಸುತ್ತದೋ ಅಷ್ಟು ಮಾತ್ರವಲ್ಲ. ಆದರೆ ಯಾವುದೇ ಆದರ್ಶದ ಅಂತಿಮ ಒರೆಗಲ್ಲು ನಮ್ಮ ನಿತ್ಯದ ಬದುಕೇ ಆಗಿರುತ್ತದೆ. ಆದರ್ಶಗಳು ಧೂಳಿನಲ್ಲಿ ಹೊರಳಾಡುತ್ತಿರುವಾಗ ಆದರ್ಶನಾಯಕನ ಗುಣಗಾನ ಮಾಡುವುದು ಹಾಸ್ಯಾಸ್ಪದ. ಬದುಕಿನಲ್ಲಿ ಕಾಣಿಸದ ಆದರ್ಶವನ್ನು ವೇದಿಕೆಗಳಲ್ಲಿ ಎತ್ತಿಹಿಡಿದರೆ ಅದರಿಂದ ನಮ್ಮ ಸೋಗಲಾಡಿತನ ಹೆಚ್ಚುವುದು ಬಿಟ್ಟು ಬೇರೆ ಯಾವ ಪರಿಣಾಮವೂ ಇಲ್ಲ. ಈ ಅರ್ಥದಲ್ಲಿ ನಮ್ಮ ಸಾರ್ವಜನಿಕ ಜೀವನದ ಸೋಗಲಾಡಿತನಕ್ಕೆ ಗಾಂಧೀವಾದದ ಕೊಡುಗೆ ದೊಡ್ಡದು. ಕಠೋರ ಪ್ರಾಮಾಣಿಕತೆಯ ಗಾಂಧೀಜಿ ಅದನ್ನು ಬಯಸಿರಲಿಲ್ಲ. ಆದರೆ ಆ ಪರಿಣಾಮ ಆಗಿರುವುದಂತೂ ಹೌದು.

ಜಿ. ರಾಜಶೇಖರ್
ಎಲ್ ಐ ಸಿ ಆಫ್ ಇಂಡಿಯಾ, ಡಿವಿಜನಲ್ ಆಫೀಸ್, 'ಜೀವನಕೃಷ್ಣ',
ಅಜ್ಜರ ಕಾಡು, ಉಡುಪಿ - ೫೭೬೧೦೧

### ತಪ್ಪು

ಮಾಡಿಲ್ಲದ ತಪ್ಪನ್ನು ಒಪ್ಪಿಕೋ
ಎನ್ನುತ್ತೀರಿ
ಮಾಡಿದ ತಪ್ಪನ್ನು ಮುಚ್ಚಿಯೇ
ಬಿಡುತ್ತೀರಿ
ಅವಕಾಶ ಕೊಡಿ ನಾ ಬದುಕಲು ಬಿಡಿ.

- ಕೆ. ವಿದ್ಯಾರಾಣಿ
ದೊಡ್ಡ ಎಣ್ಣೇಗೆರೆ (10ನೇ ತರಗತಿ)

# ದೇವರಲ್ಲಿ ಪ್ರಾರ್ಥನೆ

ಈ ವಿಶಾಲ ಪ್ರಪಂಚದಲ್ಲಿ ಕಳೆದುಹೋಗಿರುವ, ಅನಂತ ವಿಶ್ವದಲ್ಲಿ ಎಣಿಕೆಗೆ ನಿಲುಕದ, ವಿಶೇಷ ಸಾಮರ್ಥ್ಯವಿರದ ನಾನು, ಸರ್ವ ಜೀವಿಗಳಿಗೂ, ಸಕಲ ಪ್ರಪಂಚಕ್ಕೂ, ಎಲ್ಲ ಕಾಲಕ್ಕೂ ಯಜಮಾನನಾಗಿರುವ ನಿನ್ನಲ್ಲಿ ಅರಿಕೆ ಮಾಡಿಕೊಳ್ಳಲು ಅಪ್ಪಣೆ ದೊರಕುವುದಾದರೆ ಇಂತಿಷ್ಟು ಹೇಳಬಯಸುತ್ತೇನೆ.

ನೀನು ನಮಗೆ ಸಕಲ ಸಂಪತ್ತನ್ನೂ ದಯಪಾಲಿಸಿದ್ದೀಯೆ. ನಿನ್ನ ನಿಯಮಗಳು ಎಂದೆಂದೂ ಶಾಶ್ವತ ಎನಿಸಿವೆ. ನಮ್ಮ ಸ್ವಭಾವಗಳಲ್ಲಿರುವ ವಿಕೃತಿಗಳನ್ನು ದಯೆಯಿಂದ ಕಾಣು. ಈ ನಮ್ಮ ಮನೋವಿಕಾರಗಳು ನಮ್ಮೆಲ್ಲರ ನಾಶಕ್ಕೆ ಕಾರಣವಾಗದಿರಲಿ. ನೀನು ನಮಗೆ ಹೃದಯವನ್ನು ಪರಸ್ಪರ ದ್ವೇಷ ಸಾಧಿಸಲು ಕೊಡಲಿಲ್ಲ. ಕೈಗಳನ್ನು ಪರಸ್ಪರ ಜೀವ ಹತ್ಯೆ ಮಾಡಲು ಕೊಡಲಿಲ್ಲ. ಹೀಗಿರುವಾಗ ಈ ದುರ್ಭರ ಪ್ರಪಂಚದ ಭಾರವನ್ನು ಹೊರಲು ಪರಸ್ಪರ ನೆರವಾಗುವಂತೆ ನಮಗೆ ಸದ್ಬುದ್ಧಿಯನ್ನು ಕರುಣಿಸು. ನಿನ್ನ ದೃಷ್ಟಿಯಲ್ಲಿ ನಿಕೃಷ್ಟ ಎನಿಸುವ, ಸಮವೆನಿಸುವ ಅನೇಕ ಅಂಶಗಳು - ನಮ್ಮ ದೇಹವನ್ನು ಮುಚ್ಚುವ ಉಡುಗೆಯಲ್ಲಿಯ ಕ್ಷುಲ್ಲಕ ವ್ಯತ್ಯಾಸಗಳು, ನಮ್ಮ ಅಪರಿಪೂರ್ಣ ಭಾಷೆಗಳಲ್ಲಿಯ ಅಂತರಗಳು, ನಮ್ಮ ಅಪಹಾಸ್ಯಕರ ಪದ್ಧತಿಗಳು, ನಮ್ಮ ಅಪೂರ್ಣ ಕಾನೂನುಗಳು, ಬೇಜವಾಬ್ದಾರಿ ಅನಿಸಿಕೆಗಳು - ನಮ್ಮ ಸ್ಥಿಮಿತ ದೃಷ್ಟಿಗೆ ಅಗಾಧವಾಗಿ ಕಂಡು ಅನಾಹುತಕ್ಕೆ ಎಡೆ ಕೊಡದಿರಲಿ. ಅನಂತ ವಿಶ್ವದಲ್ಲಿ ಅಣುಮಾತ್ರ ಮಾನವನ ನಡತೆಯಲ್ಲಿ ಇರಬಹುದಾದ ಗೌಣ ಪ್ರಭೇದಗಳು ದ್ವೇಷ, ಅಸೂಯೆಗಳಿಗೆ ದಾರಿ ಕೊಡದಿರಲಿ. ಬೆಳಗಿನಲ್ಲಿ ದೀಪ ಬೆಳಗಿ ನಿನ್ನನ್ನು ಆರಾಧಿಸುವವರು ಸೂರ್ಯನ ಬೆಳಕಿನಿಂದಲೇ ತೃಪ್ತಿ ಪಟ್ಟುಕೊಳ್ಳುವವರನ್ನು ಸಹಿಸುವಂತೆ ಕರುಣಿಸು. ಬಿಳಿಯ ನಿಲುವಂಗಿ ಧರಿಸಿ, 'ನಿನ್ನನ್ನು ಪ್ರೀತಿಸಬೇಕು' ಎಂದು ಹೇಳುವ ಜನ ಕರಿ ಉಣ್ಣೆ ಅಂಗಿ ಧರಿಸಿ ಅದನ್ನೇ ಹೇಳುವವರನ್ನು ಮೂದಲಿಸದಿರಲಿ. ನಿನ್ನ ಸ್ತುತಿ ಪ್ರಾಚೀನ ಭಾಷೆಯಲ್ಲಿದ್ದಷ್ಟೆ ನವ್ಯ ಭಾಷೆಯಲ್ಲಿಯೂ ನಡೆದೀತು ಎಂಬ ವಿವೇಕ ದೊರಕಲಿ. ಸಂಪ್ರದಾಯ ಜಂಭಕ್ಕೆ, ದ್ವೇಷಕ್ಕೆ ಕಾರಣವಾಗದಿರಲಿ.

ಪರಸ್ಪರ ಸಹೋದರರರೆಂದು ಎಲ್ಲಾ ಭಾವಿಸುವಂತಾಗಲಿ. ಬೇರೆಯವರ ಮೇಲೆ ನಡೆಸುವ ದೌರ್ಜನ್ಯದ, ಕಾಯಕದ ಫಲವನ್ನು ನಾಶಗೊಳಿಸುವ ದಬ್ಬಾಳಿಕೆಯ ಭಯಾನಕತೆ ಅರಿವಾಗಲಿ. ನಮ್ಮ ದ್ವೇಷ ವರ್ಧಿಸದಂತೆ ಕರುಣಿಸು. ನಾವು ನಮ್ಮನ್ನೇ ಪರಸ್ಪರ ಬಲಿಕೊಡುವುದು ನಿಲ್ಲಲಿ. ಸಹಸ್ರ ಭಾಷೆಗಳು, ಸಹಸ್ರ ವೈವಿಧ್ಯತೆಗಳು ಇರುವ ಈ ಪ್ರಪಂಚದಲ್ಲಿ ಬದುಕಲು ಲಭಿಸಿದ ನಮ್ಮ ಈ ಬಾಳು ನಿನ್ನ ಕಾಣಿಕೆ ಎಂದು ಈ ಕ್ಷಣವನ್ನು ವಂದಿಸೋಣ.

*- ವಾಲ್ಟೇರ್ (1694-1778)*

ಅನು : ಎಂ. ಆರ್. ಎನ್. ಮೂರ್ತಿ
ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು-೧೨


Registered with the Registrar of News Papers for India under No.11308/99. Postal REGISTERED CPMG/KA/BG-7/99

ನವಕರ್ನಾಟಕ ಪ್ರಕಾಶನದ
ಹೆಮ್ಮೆಯ ಕೊಡುಗೆ!

ಕನ್ನಡದಲ್ಲೊಂದು ಅಪೂರ್ವ ಪ್ರಯತ್ನ

ನವಕರ್ನಾಟಕ

# ಜ್ಞಾನ-ವಿಜ್ಞಾನ ಕೋಶ

## ಜ್ಞಾನ-ವಿಜ್ಞಾನ ತಂತ್ರಜ್ಞಾನದ ಸಚಿತ್ರ ಸರಳ ನಿರೂಪಣೆ

ಪ್ರಧಾನ ಸಂಪಾದಕರು
ಪ್ರೊ|| ಎಂ. ಎ. ಸೇತುರಾವ್
ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್

ಜನಪ್ರಿಯ ಎರಡನೇ ಮುದ್ರಣ

ಆಕಾರ : 1/4 ಡೆಮ್ಮಿ, ಪುಟಗಳು : 740 (ವಿಷಯಸೂಚಿ ಸೇರಿ)
4 ಸಂಪುಟಗಳ ಒಟ್ಟು ಬೆಲೆ : ರೂ. 1,800

ಸಲಹಾ ಮಂಡಳಿ ಸದಸ್ಯರು : ಪ್ರೊ|| ಜಿ. ಆರ್. ಲಕ್ಷ್ಮಣ ರಾವ್, ಪ್ರೊ|| ಅಡ್ಯನಡ್ಕ ಕೃಷ್ಣಭಟ್
ಶ್ರೀ ಕೊಳ್ಳೇಗಾಲ ಶರ್ಮ, ಡಾ|| ಕೆ. ವಿ. ವೆಂಕಟರಾಮು, ಶ್ರೀ ಸಿ. ಆರ್. ಕೃಷ್ಣರಾವ್

ನಾಲ್ಕು ಸಂಪುಟಗಳಲ್ಲಿ....
33 ಪರಿಣತ ವಿಜ್ಞಾನ ಲೇಖಕರ

- 824 ಲೇಖನಗಳು
- 1,586 ವರ್ಣಚಿತ್ರಗಳು
- 150 ವಿಜ್ಞಾನಿಗಳ ಪರಿಚಯ
- 328 ಮಾಹಿತಿ ಅಂಕಣಗಳು
- 31 ನಿಮಗೆ ತಿಳಿದಿರಲಿ ಅಂಕಣಗಳು
- ನೊಬೆಲ್ ಪ್ರಶಸ್ತಿ ವಿಜೇತರು

**ಹೊಸತು**
ಮಾಸಪತ್ರಿಕೆಗೆ ಮೂರು ವರ್ಷದ ಚಂದಾಹಣ ರೂ. 250/- ನೀಡಿ ಜ್ಞಾನ-ವಿಜ್ಞಾನ ಕೋಶದ ಬೆಲೆಯ ಮೇಲೆ 20%ರ ರಿಯಾಯಿತಿ ಪಡೆಯಿರಿ

### ಕೆಲವು ಅಭಿಪ್ರಾಯಗಳು

ಅನೇಕ ಶ್ರೇಷ್ಠ ಕೃತಿಗಳನ್ನು ಕನ್ನಡಕ್ಕೆ ಕೊಟ್ಟಿರುವ ನವಕರ್ನಾಟಕ ಪ್ರಕಾಶನ ಸಂಸ್ಥೆ ಈಗ ಭಾರತ ಸ್ವಾತಂತ್ರ್ಯದ ಸುವರ್ಣೋತ್ಸವದ ನೆನಪಿಗಾಗಿ ಇನ್ನೊಂದು ದೊಡ್ಡ ಯೋಜನೆಯನ್ನು ಕಾರ್ಯರೂಪಕ್ಕೆ ತಂದಿದೆ. ಅದೇ ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ. ಕರ್ನಾಟಕದ ಮಟ್ಟಿಗಂತೂ ಖಾಸಗಿ ನೆಲೆಯಲ್ಲಿ ಇದು ಪ್ರಥಮ ಪ್ರಯತ್ನ. - *ಕರ್ಮವೀರ, 10. 5. 98*

ವಿಜ್ಞಾನ ಮಾಹಿತಿಗಳ ವಾಹಿನಿಯ ನಡುವೆ ಅಲ್ಲಲ್ಲಿ ನೀಡಿರುವ 'ನಿಮಗೆ ತಿಳಿದಿರಲಿ' ವಿಭಾಗವು ಅನೇಕ ಸಾರ್ವತ್ರಿಕ ಆಸಕ್ತಿಯ ವಿಷಯಗಳ ಪರಿಚಯ ನೀಡುವುದರ ಜೊತೆಗೆ ಆ ವಿದ್ಯಮಾನಗಳ ಹಿಂದೆ ಅಡಗಿರುವ ಮೂಲ ವೈಜ್ಞಾನಿಕ ತತ್ವಗಳನ್ನು ತಿಳಿಸಿಕೊಡುತ್ತದೆ. ಇದು ವಿದ್ಯಾರ್ಥಿಗಳಿಗೂ, ಸಾಮಾನ್ಯ ಓದುಗರಿಗೂ ಆಸಕ್ತಿದಾಯಕ. - ಕನ್ನಡ ಪ್ರಭ, 26.4.98

ಇದೊಂದು ಮರಿ ವಿಶ್ವಕೋಶ. ಕನ್ನಡದಲ್ಲಿ ವಿಜ್ಞಾನ ವಾಙ್ಮಯ ಸಾಕಷ್ಟು ಪ್ರೌಢಸ್ಥಿತಿ ಐದಿರುವುದಕ್ಕೆ ಮಾನಕ..... ಕನ್ನಡದ ಹಿರಿಮೆ ಗರಿಮೆ ಬಗ್ಗೆ ಕೃತಾರ್ಥತೆ, ನವಕರ್ನಾಟಕದವರ ಬಗ್ಗೆ ಕೃತಜ್ಞತೆ.... - ಜಿ. ಟಿ. ನಾರಾಯಣ ರಾವ್, ವೆಬ್‌ಸೈಟ್‌ನಲ್ಲಿ

ಈ ಶತಮಾನದ ಮಹತ್ವದ ಪ್ರಕಟಣೆಗಳಲ್ಲಿ ಮೈಲುಗಲ್ಲಾದ ನಿಮ್ಮ ಪ್ರಯತ್ನವನ್ನು ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು ಅಭಿನಂದಿಸುತ್ತದೆ ಮತ್ತು ಶುಭ ಹಾರೈಸುತ್ತದೆ. - ಡಾ|| ಡಿ. ಕೆ. ಮಹಾಬಲರಾಜು, ಡಾ|| ಎ. ಟಿ. ಪಾಟೀಲ್


**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ : 5159, ಬೆಂಗಳೂರು - 560 001
ದೂರವಾಣಿ / ಫ್ಯಾಕ್ಸ್ : 2203580/81/82
e-mail : nkp@bgl.vsnl.net.in
ಶಾಖೆಗಳು : ಬೆಂಗಳೂರು - ಮಂಗಳೂರು - ಮೈಸೂರು - ಗುಲ್ಬರ್ಗಾ

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published ... Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna